|| ಶ್ರೀರಸ್ತು ||

# ಗೀತಾರ್ಥ ದೀಪಿಕಾ

(ಶ್ರೀಮದ್ಭಗವದ್ಗೀತೆಯ ಕನ್ನಡ ಭಾವಾರ್ಥ)



ವೇದಾನ್ತ ಸಾರಜ್ಞ

ವಿದ್ವಾನ್ ಕೆ. ಎಸ್. ಕೃಷ್ಣತಾತಾಚಾರ್, ಬಿ.ಎ.

ಬೆಂಗಳೂರು

# ಮುನ್ನುಡಿ

ಶ್ರೀ ಭಗವದ್ಗೀತೆಯು ಮಹಾ ಭಾರತೀಯ ಭೀಷ್ಮಪರ್ವಾನ್ತರ್ಗತವಾದ ಒಂದು ಅಧ್ಯಾತ್ಮ ಪ್ರಬಂಧ. ಆಧ್ಯಾತ್ಮಿಕ ವಿಷಯಕ ಪದಾರ್ಥಗಳನ್ನು ಅವ್ಯಾಕುಲವಾಗಿ ಪ್ರಕಾಶಪಡಿಸುವುದರಿಂದ ಮಹಾಭಾರತದಲ್ಲೆಲ್ಲಾ ಇದಕ್ಕೆ ಪ್ರಾಧಾನ್ಯ ದೊರಕಿದೆ. ಪರಬ್ರಹ್ಮಭೂತನಾದ ಶ್ರೀಮನ್ನಾರಾಯಣನೇ ಪರಮಪ್ರಾಪ್ಯ. ಇವನು ಭಕ್ತ್ಯೈಕಗೋಚರ. ಈ ಭಕ್ತಿಯೋಗಾಧಿಕಾರಕ್ಕೆ ಆತ್ಮಸಾಕ್ಷಾತ್ಕಾರವು ದ್ವಾರ. ಇದು ವರ್ಣಾಶ್ರಮಧರ್ಮಾಂಗವಾದ ಕರ್ಮಯೋಗ ಜ್ಞಾನಯೋಗಗಳಿಂದ ಸಾಧ್ಯ. ಇವೆಲ್ಲಕ್ಕೂ ಪರಮಾತ್ಮವ್ಯತಿರಿಕ್ತ ವಿಷಯಗಳಲ್ಲಿ ವೈರಾಗ್ಯವಿರಬೇಕಾದುದು ಅತ್ಯಾವಶ್ಯಕ-ಎಂಬಿವೇ ಮುಂತಾದ ತತ್ತ್ವಹಿತಗಳನ್ನು ಯಥಾವತ್ತಾಗಿ ಶಾಸನ ಮಾಡುವುದರಿಂದ ಶ್ರೀ ಗೀತೆಯು ಗೀತಾಶಾಸ್ತ್ರವೆನಿಸಿದೆ. ಈ ಶಾಸನವನ್ನು ಶ್ರೀ ಕೃಷ್ಣನು ತಾನೇ ಮಾಡಿರುವುದರಿಂದ ಶಾಸ್ತ್ರಾಂತರಗಳಿಗಿಂತ ಇದಕ್ಕೆ ಆಧಿಕ್ಯವೂ ಸಿದ್ಧಿಸುವುದು. ನಿಗೂಢವೂ ಗಹನವೂ ಆದ ಶ್ರುತ್ಯಭಿಪ್ರಾಯಗಳನ್ನು ನಿಖಿಲ ಜನರಿಗೂ ಉಪಜೀವ್ಯವಾಗಿರುವಂತೆ ಪ್ರತಿಬಿಂಬಿಸುವುದರಿಂದ ಶ್ರುತಿಗಳಿಗಿಂತಲೂ ಇದು ಹಿರಿಮೆಯುಳ್ಳುದು. ಅತಿ ರಹಸ್ಯಭೂತವಾದ ಅಧ್ಯಾತ್ಮಾರ್ಥಗಳಿಗೆ ಪ್ರತಿಪಾದಕವೂ ಸಮಸ್ತವೇದಾರ್ಥಸಾರಸಂಗ್ರಹ ರೂಪವೂ ಆದುದರಿಂದ ಇದಕ್ಕೆ ಉಪನಿಷತ್ತೆಂಬ ವ್ಯವಹಾರವೂ ಗೌಣವಾಗಿ ಅನ್ವಯಿಸುತ್ತದೆ. ಈ ಉಪನಿಷತ್ಸಮಾಧಿಯಿಂದ 'ಗೀತಾ'—ಎಂದು ಸ್ತ್ರೀಲಿಂಗ ನಿರ್ದೇಶವೂ ಇದೆ. ಆದರೂ ಇದು ಸರ್ವಾನುಕೂಲ ಸಿದ್ಧಾಂತವಾದುದರಿಂದ ಎಲ್ಲ ಉಪನಿಷತ್ತುಗಳನ್ನೂ ಮಹಿಮೆಯಲ್ಲಿ ಮೀರಿಸಿದೆ.

ನಮ್ಮಲ್ಲಿ, ಅನುಗೀತಾ – ಅವಧೂತಗೀತಾ – ಉತ್ತರಗೀತಾ – ಗರ್ಭಗೀತಾ – ಗುರುಗೀತಾ – ಗೋಪಿಕಾಗೀತಾ – ದೇವೀಗೀತಾ – ಪಾಂಡವಗೀತಾ – ಭಿಕ್ಷುಗೀತಾ – ಭ್ರಮರಗೀತಾ – ರಾಮಾಗೀತಾ – ವೇಣುಗೀತಾ – ಶಿವಗೀತಾ – ಶಿವರಾಮಗೀತಾ – ಹಂಸಗೀತಾ –

ಮುಂತಾದ ಇನ್ನೂ ಅನೇಕ ಗೀತೆಗಳಿವೆ. ಇವೆಲ್ಲಕ್ಕಿಂತ ಶ್ರೀಮದ್ಭಗವದ್ಗೀತೆಯೇ ಹೆಚ್ಚು ಆದರಣೀಯವಾದುದು ; ಏಕೆಂದರೆ ; —ಇದು ಸರ್ವಲೋಕಯೋಗಕ್ಷೇಮವುಳ್ಳದಲ್ಲದೆ ನೇರವಾಗಿ ಶ್ರೀ ಕೃಷ್ಣನಿಂದಲೇ ಮಹದನುರಾಗಪೂರ್ವಕವಾಗಿ ಗಾನಮಾಡಲ್ಪಟ್ಟಿದೆ. ಇದರಿಂದ ಎಂತಹವರಿಗೂ ಅತಿಶಯ ವಿದ್ಯಾಸಂಪತ್ತೂ ವಿಶುದ್ಧಶಾಂತಿಯೂ ವಿಲಸಿತವಾಗಿ, ಲೋಕವೃತ್ತಾನ್ತ ಪರಿಜ್ಞಾನವೂ ವಿಕಸಿತವಾಗುವುದು. ಸಕಲ ಸಮಸ್ಯೆಗಳಿಗೂ ಪರಿಹಾರವು ಇದರಲ್ಲಿ ದೊರಕುವುದು.

ಶಬ್ದಮಯವೂ ಜ್ಞಾನಮಯವೂ ಆದುದರಿಂದ ಈ ಗೀತೆಯು ನಿಖಿಲ ಜಗದಾಂಧ್ಯವನ್ನೂ ನಿರಾಕರಿಸಬಲ್ಲ ದೀಪದಂತಿದೆ.

"ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ।
ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥"

—ಎಂದು ವರ್ಣಿತವಾಗಿರುವ ಜ್ಞಾನದೀಪವೇ ಶ್ರೀ ಗೀತೆ. ಇಂತಹ ಪ್ರದೀಪ ಪ್ರದಾನವು ಅನಂತ ದಯಾಂಬುಧಿಯಾದ ಭಗವಂತನ ಕರುಣಾಕಾಷ್ಠೆ. ಇದರ ಚರಮಶ್ಲೋಕದ ಪ್ರಕಾಶನವು ಅದರ ದಯಾನನ್ಯಪ್ರಯುಕ್ತವಾದುದು.

ಶ್ರೀಗೀತಾಸಿದ್ಧಾಂತದ ಪ್ರಕಾರ, ಭಗವದನುಭವಕ್ಕೆ ಜಾತ್ಯಾದಿ ವ್ಯವಸ್ಥೆಯಿಲ್ಲ. ಅವರವರ ವರ್ಣಾಶ್ರಮ ಮರ್ಯಾದೆಯಲ್ಲಿದ್ದುಕೊಂಡು ಯಾವ ವರ್ಣ ಅಥವಾ ಆಶ್ರಮದವರಾದರೂ, ಭಗವದನುಭವವನ್ನು ಮಾಡಬಹುದು. ಎಷ್ಟು ನಿಹೀನರೂ ಪಾಪಿಷ್ಠರೂ ಆದರೂ, ಶ್ರೀ ಗೀತಾದತ್ತಾಲೋಕದಿಂದ ಭಗವತ್ಸಮಾಶ್ರಯಣ ಮಾಡಿದರೆ, ಪರಮಪುರುಷಾರ್ಥಕ್ಕೆ ಭಾಗಿಗಳಾಗಬಹುದೆಂಬುದೇ ಶ್ರೀ ಗೀತಾಶಾಸ್ತ್ರದ ಸಾರಾರ್ಥ. ಇಂಥ ಉತ್ತಮ ಉಪಬೃಂಹಣವನ್ನು ಗಾನಮಾಡುವುದೇ ಶ್ರೀ ಕೃಷ್ಣಾವತಾರಕ್ಕೆ ನಿಮಿತ್ತ. ಇದರಲ್ಲಿ ಉಪದಿಷ್ಟವಾದ ಮತವೇ ಸಾಕ್ಷಾತ್ ಭಗವನ್ಮತವೆಂಬುದು. ಇದು "ಮೇ ಮತಂ," "ಮತಂ ಮಮ"—ಎಂಬ ಇದರೊಳಗಿನ ಅಲ್ಲಲ್ಲಿಯ ಶ್ರೀ ಸೂಕ್ತಿಗಳಿಂದ ವ್ಯಕ್ತವಾಗುತ್ತದೆ.

ಪೃಥಿವಿಯು ವಿಪುಲ ಕಾಲವೂ ನಿರವಧಿಕ ಆದರೂ ಸರ್ವದೇಶ ಸರ್ವ ಕಾಲಗಳಲ್ಲಿಯೂ ಶ್ರೀಗೀತೆಯು ಅವ್ಯಾಹತ ಪ್ರಚಾರವುಳ್ಳದು. ಎಲ್ಲೆಲ್ಲಿಯೂ ಎಂದೆಂದೂ ಎಲ್ಲ ಜಾತಿಯ ವಿದ್ವಾಂಸರು ಶ್ರೀಗೀತೆಯನ್ನು "ಗೀತಾ ಸುಗೀತಾ"—ಎಂದೇ ಗೌರವಿಸುವರು. ಶ್ರೀಗೀತಾ ಪ್ರತಿಪಾದಿತವಾದ ಅರ್ಥಗಳಲ್ಲಿ ವಿದ್ವಾಂಸರೊಳಗೆ ಯಾರಿಗೂ ವಿಗಾನವಿಲ್ಲ. ಆದುದರಿಂದಲೇ ಇದು "ಗೀತೆ"—ಎಂದೆನಿಸಿರುವುದು. ಅವಿಗೀತವಾದುದೇ ಗೀತೆ. ಈ ಅಭಿಸಂಧಿಯಿಂದ ಶ್ರೀಮದಾಗಮಾನ್ತ ಗುರುಗಳೂ, "ವಿಪಶ್ಚಿದವಿಗೀತಯಾ, ಜಗತಿ ಗೀತಯಾ"—ಇತ್ಯಾದಿಯಿಂದ ಇದನ್ನು ಕೊಂಡಾಡಿರುವರು. ಎಲ್ಲ ಭಾಷೆಗಳಲ್ಲಿಯೂ ಮತ್ತು ದೇಶಗಳಲ್ಲಿಯೂ ಶ್ರೀಗೀತಾರ್ಥಗಳು ಪ್ರಕಾಶಿತವಾಗಿವೆ. ಸ್ವೀಡ್ ಮುಂತಾದ ದೇಶಗಳಲ್ಲಿ ಅನೇಕ ಸಹಸ್ರ ಸಂಖ್ಯೆಗಳಲ್ಲಿ ಜನರು ಏಕಕಾಲದಲ್ಲಿ ಶ್ರೀಗೀತಾ ಪಾರಾಯಣವನ್ನು ಮಾಡಿಸಿ ಅದನ್ನು ಆದರದಿಂದ ಕೇಳುವರೆಂದು ಪ್ರಸಿದ್ಧಿಯಿದೆ. ಕುರುಕ್ಷೇತ್ರದಲ್ಲಿ ಕಾಲವಿಶೇಷದಲ್ಲಿ ಅರ್ಜುನನ ರಥೋಪಸ್ಥದಲ್ಲಿ ಮಾತ್ರವೇ ಇದು ಗೀತವಾದುದಲ್ಲ. ಅರ್ಜುನನ ಯುದ್ಧ ಪ್ರೋತ್ಸಾಹನವ್ಯಾಜದಿಂದ ನಿಖಿಲ ಜಗದುದ್ಧಾರಕ್ಕಾಗಿ ತತ್ತ್ವಹಿತ ಪುರುಷಾರ್ಥಗಳನ್ನು ಗಾನಮಾಡಿರುವ ಮೋಕ್ಷಶಾಸ್ತ್ರವಿದು! ಇದಕ್ಕೆ ಇಷ್ಟು ಪಾರಮ್ಯವಿರುವುದರಿಂದಲೇ ಪರಶ್ಶತ ಭಾಷ್ಯಕಾರರೂ ತೀರ್ಥಕರರೂ ಆಚಾರ್ಯರುಗಳೂ ಲೋಕಾನುಗ್ರಹಕ್ಕಾಗಿ ಈ ಗೀತೆಗೆ ಭಾಷ್ಯಾದಿಗಳನ್ನು ರಚಿಸಿದ್ದಾರೆ. ಆ ಅರ್ಥಾನುಭವದ ಪರೀವಾಹವು ಪ್ರಕೃತ 'ಗೀತಾರ್ಥದೀಪಿಕಾ'—ಎಂಬ ರೂಪವಾಗಿ ಹೊರಟಿದೆ. ಈ ಲೌಲ್ಯವನ್ನು ಸಹೃದಯರು ಮೆಚ್ಚುವರೆಂದು ನಂಬಲಾಗಿದೆ.

ಇತಿ

2–4–1959. ಗ್ರಂಥಕರ್ತಾ.

|| ಶ್ರೀಃ ||

|| ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ ||

|| ಶ್ರೀಮದ್ಭಗವತೇ ಭಾಷ್ಯಕಾರಾಯ ಮಹಾದೇಶಿಕಾಯ ನಮಃ ||

# ಶ್ರೀಮದ್ಭಗವದ್ಗೀತಾರ್ಥದೀಪಿಕಾ

**ಶ್ರೀ ನಿಧಿಂ ಬ್ರಹ್ಮ ವರದಂ ತನ್ಮಾನ್ಯಾಶ್ಚ ಗುರೂತ್ತಮಾನ್ ।**
**ನತ್ವಾ ಕರ್ಣಾಟಭಾಷಾಯಾಂ ವಕ್ಷ್ಯೇ ಗೀತಾರ್ಥದೀಪಿಕಾಂ ॥**

**ಶ್ರೀಮಾನ್ ವೇಂಕಟನಾಥಾರ್ಯಃ ಕವಿತಾರ್ಕಿಕಕೇಸರೀ ।**
**ವೇದಾನ್ತಾಚಾರ್ಯವರ್ಯೋ ಮೇ ಸನ್ನಿಧತ್ತಾಂ ಸದಾ ಹೃದಿ ॥**

---

## ಅಧ್ಯಾಯ ೧

## ಶ್ರವಣಾಧಿಕಾರೀ

**ಅವತರಣಿಕೆ—**

ಆಸ್ಥಾನದಲ್ಲಿ ಉದಯಿಸಿದ ಸ್ನೇಹ-ಕಾರುಣ್ಯ-ಧರ್ಮಾಧರ್ಮ ಭೀತಿ ಗಳಿಂದ ಆಕುಲನಾಗಿ ಪ್ರಪನ್ನನಾದ ಪಾರ್ಥನನ್ನು [illegible] ಗೀತಾ ಶಾಸ್ತ್ರವು ಅವತೀರ್ಣವಾಯಿತು.

ಹಿಂದೆ ಕುರುಕ್ಷೇತ್ರದಲ್ಲಿ ಕೌರವ ಪಾಂಡವರಿಗೆ ಯುದ್ಧವು ಆರಂಭವಾಗಿದ್ದಿತು. ಆಗ ಸರ್ವಾತ್ಮನಾ ಅಂಧನಾದ ಧೃತರಾಷ್ಟ್ರನು ತನ್ನವರ ವಿಜಯವನ್ನು ತಿಳಿಯಲಿಚ್ಛಿಸಿ ಸಂಜಯನನ್ನು ಸಮರ ವೃತ್ತಾಂತವನ್ನು ಪ್ರಶ್ನಿಸಿದನು.

**ಧೃತರಾಷ್ಟ್ರ ಉವಾಚ—**

**ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ ।**
**ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ॥ ೧ ॥**

ಸಂಜಯನೆ! ಧರ್ಮಕ್ಕೆ ಆಶ್ರಯವಾದ ಕುರುಕ್ಷೇತ್ರದಲ್ಲಿ ಪರಸ್ಪರ ಯುದ್ಧೋತ್ಸುಕರಾಗಿ ಕೂಡಿದ್ದ ನನ್ನವರೂ ಪಾಂಡವರೂ ಏನು ಮಾಡಿದರು?

**ಸಂಜಯ ಉವಾಚ—**

**ದೃಷ್ಟ್ವಾತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ ।**
**ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ ॥ ೨ ॥**

ಸಂಜಯನೆಂದನು—

ಆಗ ಪಾಂಡವರ ಸೈನ್ಯವು ವ್ಯೂಹದಲ್ಲಿ ರಚಿತವಾಗಿದ್ದುದನ್ನು ನೋಡಿ ರಾಜನಾದ ದುರ್ಯೋಧನನು ದ್ರೋಣಾಚಾರ್ಯರಲ್ಲಿಗೆ ಬಂದು (ಹೀಗೆ) ಹೇಳಿದನು.

**ಪಶ್ಯೈತಾಂ ಪಾಂಡುಪುತ್ರಾಣಾಂ ಆಚಾರ್ಯ ಮಹತೀಂ ಚಮೂಂ ।**
**ವ್ಯೂಢಾಂ ದ್ರುಪದಪುತ್ರೇಣ ತವ ಶಿಷ್ಯೇಣ ಧೀಮತಾ ॥ ೩ ॥**

ಆಚಾರ್ಯ! ನಿನ್ನ ಬುದ್ಧಿಶಾಲಿ ಶಿಷ್ಯನಾದ ಧೃಷ್ಟದ್ಯುಮ್ನನು ವ್ಯೂಹಗೊಳಿಸಿದ ಪಾಂಡವರ ದೊಡ್ಡ ಸೈನ್ಯವನ್ನು ನೋಡು.

**ಅತ್ರ ಶೂರಾ ಮಹೇಷ್ವಾಸಾ ಭೀಮಾರ್ಜುನಸಮಾ ಯುಧಿ ।**
**ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ॥ ೪ ॥**

**ಧೃಷ್ಟಕೇತುಶ್ಚೇಕಿತಾನಃ ಕಾಶೀರಾಜಶ್ಚ ವೀರ್ಯವಾನ್ ।**
**ಪುರುಜಿತ್ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ ॥ ೫ ॥**

**ಯುಧಾಮನ್ಯುಶ್ಚ ವಿಕ್ರಾನ್ತಃ ಉತ್ತಮೌಜಾಶ್ಚ ವೀರ್ಯವಾನ್ ।**
**ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ॥ ೬ ॥**

ಇಲ್ಲಿ ಯುಯುಧಾನ (ಸಾತ್ಯಕಿ) ವಿರಾಟ, ದ್ರುಪದ, ಧೃಷ್ಟಕೇತು, ಚೇಕಿತಾನ, ವೀರನಾದ ಕಾಶೀರಾಜ, ಪುರುಜಿತ್, ಕುಂತಿಭೋಜ, ನರ

ಶ್ರೇಷ್ಠನಾದ ಶೈಬ್ಯ, ಪರಾಕ್ರಮಿಯಾದ ಯುಧಾಮನ್ಯು, ವೀರನಾದ ಉತ್ತಮೌಜಸ್, ಅಭಿಮನ್ಯು ಮತ್ತು ದ್ರೌಪದಿಯ ಪುತ್ರರೂ ಸಹ ಇರುವರು. ಇವರೆಲ್ಲರೂ ಮಹಾರಥರು.

**ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ ।**
**ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ ಬ್ರವೀಮಿ ತೇ ॥**

ಎಲೈ ದ್ವಿಜಶ್ರೇಷ್ಠನೇ! ನಮ್ಮ ಸೈನ್ಯದ ಮುಖ್ಯ ನಾಯಕರನ್ನು ನಿನಗೆ ಚೆನ್ನಾಗಿ ತಿಳಿಸುವೆನು.

**ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ ।**
**ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿಸ್ತಥೈವ ಚ ॥ ೮ ॥**
**ಅನ್ಯೇ ಚ ಬಹವಶ್ಶೂರಾ ಮದರ್ಥೇ ತ್ಯಕ್ತಜೀವಿತಾಃ ।**
**ನಾನಾಶಸ್ತ್ರಪ್ರಹರಣಾಃ ಸರ್ವೇ ಯುದ್ಧ ವಿಶಾರದಾಃ ॥ ೯ ॥**

ನೀನು, ಭೀಷ್ಮ, ಕರ್ಣ, ಯುದ್ಧದಲ್ಲಿ ಜಯಿಸುವ ಕೃಪಾಚಾರ್ಯ, ಅಶ್ವತ್ಥಾಮ, ವಿಕರ್ಣ, ಭೂರಿಶ್ರವಸ್ಸು ಮತ್ತು ನನಗಾಗಿ ಪ್ರಾಣಬಿಡುವವರಾದ ಬೇರೆ ಶೂರರೂ ಅನೇಕರಿರುವರು. ಇವರೆಲ್ಲರೂ ನಾನಾ ಶಸ್ತ್ರ ಮತ್ತು ಆಯುಧಗಳುಳ್ಳವರು ಮತ್ತು ಯುದ್ಧದಲ್ಲಿ ಕುಶಲರು.

**ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಂ ।**
**ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಂ ॥ ೧೦ ॥**

ಭೀಷ್ಮನಿಂದ ರಕ್ಷಿಸಲ್ಪಟ್ಟಿರುವ ನಮ್ಮ ಸೈನ್ಯಕ್ಕಿಂತ ಭೀಮನಿಂದ ರಕ್ಷಿಸಲ್ಪಟ್ಟಿರುವ ಈ ಸೈನ್ಯವೇ ಬಲವತ್ತರವಾದುದು.

**ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ ।**
**ಭೀಷ್ಮಮೇವಾಭಿರಕ್ಷನ್ತು ಭವನ್ತಸ್ಸರ್ವ ಏವ ಹಿ ॥ ೧೧ ॥**

(ಆದುದರಿಂದ) ನೀವೆಲ್ಲರೂ ಎಲ್ಲ ದ್ವಾರಗಳಲ್ಲಿಯೂ ನಿಂತು ಭೀಷ್ಮನನ್ನೇ ಕಾಯಿರಿ.

**ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ ।**
**ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ ॥**

(ದುರ್ದೈವದಿಂದ ಹೀಗೆ ಇದ್ದಕ್ಕಿದ್ದ ಹಾಗೆ ದುಃಖಿತನಾಗಿದ್ದ) ದುರ್ಯೋಧನನಿಗೆ ಹರ್ಷವನ್ನುಂಟುಮಾಡಲು ಅಜ್ಜನೂ ಪ್ರತಾಪಿಯೂ ಆದ ಭೀಷ್ಮನು ಗಟ್ಟಿಯಾಗಿ ಸಿಂಹನಾದಮಾಡಿ ಶಂಖವನ್ನೂ ಊದಿದನು.

**ತತಶ್ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ ।**
**ಸಹಸೈವಾಭ್ಯಹನ್ಯನ್ತ ಸ ಶಬ್ದಸ್ತುಮುಲೋಽಭವತ್ ॥**

ಅನಂತರ ತಟ್ಟನೆ, ಶಂಖಗಳೂ, ನಗಾರಿ, ಡೋಲು, ಮೃದಂಗ, ರಣಭೇರಿಗಳೂ ಬಾರಿಸಲ್ಪಟ್ಟವು. ಆ ಶಬ್ದವು ಭಯಂಕರವಾಗಿದ್ದಿತು.

**ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯನ್ದನೇ ಸ್ಥಿತೌ ।**
**ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥ ೧೪ ॥**

**ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ ।**
**ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ॥**

**ಅನನ್ತವಿಜಯಂ ರಾಜಾ ಕುನ್ತೀಪುತ್ರೋ ಯುಧಿಷ್ಠಿರಃ ।**
**ನಕುಲಃ ಸಹದೇವಶ್ಚ ಸುಘೋಷಮಣಿಪುಷ್ಪಕೌ ॥ ೧೬ ॥**

**ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ ।**
**ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ॥ ೧೭ ॥**

**ದ್ರುಪದೋ ದ್ರೌಪದೇಯಾಶ್ಚ ಸರ್ವತಃ ಪೃಥಿವೀಪತೇ ।**
**ಸೌಭದ್ರಶ್ಚ ಮಹಾಬಾಹುಃ ಶಂಖಾನ್ ದಧ್ಮುಃ ಪೃಥಕ್ ಪೃಥಕ್ ॥**

ಎಲೈ ರಾಜನೆ! ಬಳಿಕ ಬಿಳಿಯ ಕುದುರೆಗಳುಳ್ಳ ದೊಡ್ಡ ರಥದಲ್ಲಿ ಕುಳಿತಿದ್ದ ಶ್ರೀ ಕೃಷ್ಣಾರ್ಜುನರೂ ಪಾಂಚಜನ್ಯ, ದೇವದತ್ತಗಳೆಂಬ ತಮ್ಮ ತಮ್ಮ ದಿವ್ಯ ಶಂಖಗಳನ್ನು ಊದಿದರು. ಭಯಂಕರನಾದ ಭೀಮನೂ ಕುಂತೀಪುತ್ರನಾದ ಧರ್ಮರಾಯನೂ, ನಕುಲ, ಸಹದೇವ, ಒಳ್ಳೆಧನುರ್ಧರನಾದ ಕಾಶೀರಾಜ, ಮಹಾರಥನಾದ ಶಿಖಂಡಿ, ಧೃಷ್ಟದ್ಯುಮ್ನ, ವಿರಾಟ, ಜಯಶಾಲಿಯಾದ ಸಾತ್ಯಕಿ, ದ್ರುಪದ, ದ್ರೌಪದಿಯಪುತ್ರರು, ಮಹಾಬಾಹುವಾದ ಅಭಿಮನ್ಯು–ಇವರೂ ಪೌಂಡ್ರ, ಅನಂತವಿಜಯ, ಸುಘೋಷ ಮಣಿಪುಷ್ಪಕ ಮುಂತಾದ ತಮ್ಮ ತಮ್ಮ ಶಂಖಗಳನ್ನು ಎಲ್ಲ ಕಡೆಗಳಲ್ಲಿಯೂ ಊದಿದರು.

ಸಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ ।
ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ ॥ ೧೯ ॥

ಆ ಭಯಂಕರ ಧ್ವನಿಯು ಭೂಮಿ ಮತ್ತು ಆಕಾಶಗಳಲ್ಲಿ ಪ್ರತಿ ಧ್ವನಿಯುಂಟುಮಾಡಿ ನಿನ್ನ ಮಕ್ಕಳ ಹೃದಯಗಳನ್ನು ಸೀಳಿತು.

ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ ।
ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ ॥ ೨೦ ॥
ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ ।

ಎಲೈ ರಾಜನೇ! ಹೀಗೆ ಯುದ್ಧಕ್ಕೆ ಸಿದ್ಧರಾಗಿ ನಿಂತ ನಿನ್ನ ಮಕ್ಕಳನ್ನು ನೋಡಿ ಲಂಕಾದಹನ ಮಾಡಿದ ಆಂಜನೇಯನನ್ನು ಧ್ವಜದಲ್ಲಿ ಹೊಂದಿದ್ದ ಅರ್ಜುನನು ಧನುಸ್ಸನ್ನು ಮೇಲಕ್ಕೆ ಎತ್ತಿ [illegible] ಶ್ರೀ ಕೃಷ್ಣನಿಗೆ ಹೀಗೆಂದನು.

ಅರ್ಜುನ ಉವಾಚ—

ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ॥

ಯಾವದೇತಾನ್ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್ ।
ಕೈರ್ಮಯಾ ಸಹ ಯೋದ್ಧವ್ಯಂ ಅಸ್ಮಿನ್ ರಣಸಮುದ್ಯಮೇ ॥
ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ ।
ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ ॥

ಎಲೈ ಅಚ್ಯುತನೆ! ಈ ರಣೋದ್ಯೋಗದಲ್ಲಿ, ದುರ್ಬುದ್ಧಿಯುಳ್ಳ ದುರ್ಯೋಧನನಿಗೆ ಪ್ರಿಯವನ್ನು ಮಾಡಲಿಚ್ಛಿಸುವ [illegible] ಇಲ್ಲಿ ಯಾವ ಯಾವ ಯೋಧರು ಸೇರಿರುವರು? ನಾನು ಯಾರೊಡನೆ ಯುದ್ಧ ಮಾಡಬೇಕು ?—ಎಂಬುದನ್ನು ಯಥಾವತ್ತಾಗಿ ನೋಡಲು ಅನುಕೂಲವಾಗುವಂತೆ ನನ್ನ ರಥವನ್ನು ಎರಡು ಸೈನ್ಯಗಳ ನಡುವೆ ನಿಲ್ಲಿಸು.

ಸಂಜಯ ಉವಾಚ—

ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ ।
ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಂ ॥

**ಭೀಷ್ಮದ್ರೋಣ ಪ್ರಮುಖತಸ್ಸರ್ವೇಷಾಂ ಚ ಮಹೀಕ್ಷಿತಾಂ ।**
**ಉವಾಚ ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನಿತಿ ॥ ೨೫ ॥**

(ಆಶ್ರಿತವಾತ್ಸಲ್ಯದಿಂದ ಸಾರಥಿಯಾಗಿ ನಿಂತಿದ್ದ) ಸರ್ವೇಶ್ವರನಾದ ಶ್ರೀ ಕೃಷ್ಣನು ಅರ್ಜುನನಿಂದ ಹೀಗೆ ಪ್ರೇರಿತನಾಗಿ ಎರಡು ಸೇನೆಗಳ ನಡುವೆ ಭೀಷ್ಮದ್ರೋಣರ ಮತ್ತು ಸಕಲ ರಾಜರ ಮುಂದೆ ಶ್ರೇಷ್ಠವಾದ ರಥವನ್ನು ನಿಲ್ಲಿಸಿ (ನಿಮ್ಮವರ ವಿಜಯಸ್ಥಿತಿ ಹೀಗಿದೆ) ನೋಡು ಎಂದು ಅರ್ಜುನನಿಗೆ ಹೇಳಿದನು.

**ತತ್ರಾಪಶ್ಯತ್ ಸ್ಥಿತಾನ್ ಪಾರ್ಥಃ ಪಿತೄನಥ ಪಿತಾಮಹಾನ್ ।**
**ಆಚಾರ್ಯಾನ್ಮಾತುಲಾನ್ ಭ್ರಾತೄನ್ ಪುತ್ರಾನ್ ಪೌತ್ರಾನ್ಸಖೀಂಸ್ತಥಾ**
**ಶ್ವಶುರಾನ್ ಸುಹೃದಶ್ಚೈವ ಸೇನಯೋರುಭಯೋರಪಿ ।**
**ತಾನ್ ಸಮೀಕ್ಷ್ಯ ಸ ಕೌನ್ತೇಯಃ ಸರ್ವಾನ್ ಬನ್ಧೂನವಸ್ಥಿತಾನ್ ॥**
**ಕೃಪಯಾ ಪರಯಾವಿಷ್ಟೋ ವಿಷೀದನ್ನಿದಮಬ್ರವೀತ್ ।**

ಅಲ್ಲಿ ಎರಡು ಸೈನ್ಯಗಳಲ್ಲೂ ಇರುವ ಪಿತೃ-ಪಿತಾಮಹರೇ ಮುಂತಾದ ಬಾಂಧವರೆಲ್ಲರನ್ನೂ ಮತ್ತು ಆಚಾರ್ಯರನ್ನೂ ನೋಡಿ, ಬಂಧು ಸ್ನೇಹ, ಪರಮಕಾರುಣ್ಯ ಮತ್ತು ಧರ್ಮಾಧರ್ಮ ಭಯಗಳಿಂದ ಬಲು ಖಿನ್ನನಾದ ಅರ್ಜುನನು ಹೀಗೆ ನುಡಿದನು.

**ಅರ್ಜುನ ಉವಾಚ—**

**ದೃಷ್ಟ್ವೇಮಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಂ ॥**
**ಸೀದನ್ತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ ।**
**ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ॥ ೨೯ ॥**
**ಗಾಂಡೀವಂ ಸ್ರಂಸತೇ ಹಸ್ತಾತ್ ತ್ವಕ್ಚೈವ ಪರಿದಹ್ಯತೇ ।**
**ನ ಚ ಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ॥೩೦॥**

ಎಲೈ ಕೃಷ್ಣನೆ! ಯುದ್ಧದ ಆಸೆಯಿಂದ ನೆರೆದಿರುವ ಈ ಸ್ವಜನರನ್ನು ನೋಡಿ ನನ್ನ ಅವಯವಗಳೆಲ್ಲ ಬಲಗುಂದಿವೆ; ಮುಖ ಒಣಗುತ್ತಿದೆ. ಶರೀರದಲ್ಲಿ ನಡುಕ ಮತ್ತು ರೋಮಾಂಚಗಳುಂಟಾಗಿವೆ. ಗಾಂಡೀವವು

ಕೈಯಿಂದ ಜಾರುತ್ತಿದೆ. ಚರ್ಮವೆಲ್ಲ ಸುಡುತ್ತಿದೆ. ನಾನು ನಿಲ್ಲಲಾರೆ. ನನ್ನ ಮನಸ್ಸಿಗೆ ಭ್ರಮೆಯುಂಟಾದಂತಿದೆ.

**ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ ।**
**ನ ಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ ॥ ೩೧ ॥**

ಅಪಶಕುನಗಳೂ ಕಾಣುತ್ತಿವೆ. ನಮ್ಮವರನ್ನು ಕೊಲ್ಲುವುದರಿಂದ ಕ್ಷೇಮವೇನೂ ಕಾಣಿಸದು.

**ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿ ಚ ।**
**ಕಿಂ ನೋ ರಾಜ್ಯೇನ ಗೋವಿನ್ದ ಕಿಂ ಭೋಗೈರ್ಜೀವಿತೇನ ವಾ**

ನನಗೆ ವಿಜಯ, ರಾಜ್ಯ ಮತ್ತು ಸುಖಗಳು ಬೇಡ. ಗೋವಿಂದನೆ ! ರಾಜ್ಯ, ಭೋಗ ಮತ್ತು ಜೀವಿತದಿಂದ ನಮಗೇನಾಗಬೇಕು ?

**ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ**
**ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ ಧನಾನಿ ಚ ॥ ೩೩ ॥**
**ಆಚಾರ್ಯಾಃ ಪಿತರಃ ಪುತ್ರಾಃ ತಥೈವ ಚ ಪಿತಾಮಹಾಃ ।**
**ಮಾತುಲಾಃ ಶ್ವಶುರಾಃ ಪೌತ್ರಾಃ ಶ್ಯಾಲಾಃ ಸಂಬನ್ಧಿನಸ್ತಥಾ ॥**

ಯಾರಿಗಾಗಿ ಇದನ್ನು ನಾವು ಅಪೇಕ್ಷಿಸಿದೆವೋ ಆ ಆಚಾರ್ಯರು, ಪಿತೃಗಳು, ಪುತ್ರರು, ಪಿತಾಮಹರು, ಮಾತುಲರು, ಶ್ವಶುರರು, ಮೊಮ್ಮಕ್ಕಳು, ಭಾವಮೈದುನಂದಿರು ಮೊದಲಾದ ಎಲ್ಲ ಬಂಧುಗಳೂ ಪ್ರಾಣಗಳನ್ನೂ ಹಣವನ್ನೂ ತೊರೆದು ಯುದ್ಧಕ್ಕೆ ಸನ್ನದ್ಧರಾಗಿದ್ದಾರೆ !

**ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ ।**
**ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ॥**

ಇವರು ನನ್ನನ್ನು ಕೊಂದರೂ ಮೂರು ಲೋಕಗಳ ರಾಜ್ಯಕ್ಕಾಗಿಯೂ ನಾನು ಇವರನ್ನು ಕೊಲ್ಲೆನು. ಇನ್ನು ಈ ಭೂಮಿಗಾಗಿ ಕೊಲ್ಲುವುದೆಂತು ?

**ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ ।**
**ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ॥ ೩೬ ॥**

ಎಲೈ ಜನಾರ್ದನನೆ! ಘೋರಹಿಂಸಕರಾದ ಈ ಧೃತರಾಷ್ಟ್ರ ಪುತ್ರರನ್ನು ಕೊಂದರೆ ನಮಗೆ ಬರೀ ಪಾಪ ಬರುವುದೇ ಹೊರತು ಸಂತೋಷವೇನಾದೀತು ?

**ತಸ್ಮಾನ್ನಾರ್ಹಾ ವಯಂ ಹನ್ತುಂ ಧಾರ್ತರಾಷ್ಟ್ರಾನ್ ಸ ಬಾನ್ಧವಾನ್**
**ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ॥ ೩೭ ॥**

ಆದುದರಿಂದ ಈ ಧೃತರಾಷ್ಟ್ರ ಪುತ್ರರನ್ನು ಬಂಧುಸಹಿತ ಕೊಲ್ಲುವುದು ನಮಗೆ ಯೋಗ್ಯವಲ್ಲ. ಸ್ವಜನವನ್ನು ಕೊಲ್ಲುವುದರಿಂದ ಸುಖ ಸಿಗುವುದು?

**ಯದ್ಯಪ್ಯೇತೇ ನ ಪಶ್ಯನ್ತಿ ಲೋಭೋಪಹತಚೇತಸಃ ।**
**ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಂ ॥ ೩೮ ॥**

**ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಂ ।**
**ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ॥ ೩೯ ॥**

ಲೋಭದಿಂದ ಬುದ್ಧಿಗೆಟ್ಟವರಾದ ಇವರು ಈ ಕುಲನಾಶ ಮತ್ತು ಮಿತ್ರದ್ರೋಹಗಳಿಂದ ಬರುವ ಪಾಪವನ್ನರಿಯದಿದ್ದರೆ ಈ ಪಾಪವನ್ನರಿತ ನಾವು ಇದರಿಂದೇಕೆ ಹಿಂದೆಗೆಯಬಾರದು ?

**ಕುಲಕ್ಷಯೇ ಪ್ರಣಶ್ಯನ್ತಿ ಕುಲಧರ್ಮಾಃ ಸನಾತನಾಃ ।**
**ಧರ್ಮೇ ನಷ್ಟೇ ಕುಲಂ ಕೃತ್ಸ್ನಂ ಅಧರ್ಮೋಽಭಿಭವತ್ಯುತ ॥ ೪೦ ॥**

ಕುಲನಾಶದಿಂದ ಸನಾತನವಾದ ಕುಲಧರ್ಮಗಳೂ ನಾಶವಾಗುವುವು ಧರ್ಮನಾಶದಿಂದ ಅಧರ್ಮವು ಕುಲವನ್ನೆಲ್ಲ ಆವರಿಸುವುದು.

**ಅಧರ್ಮಾಭಿಭವಾತ್ ಕೃಷ್ಣ ಪ್ರದುಷ್ಯನ್ತಿ ಕುಲಸ್ತ್ರಿಯಃ ।**
**ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ॥**

ಈ ಅಧರ್ಮವು ಆವರಿಸುವುದರಿಂದ ಕುಲಸ್ತ್ರೀಯರು ದೂಷಿತರಾಗುವರು. ಇದರಿಂದ ಜಾತಿಸಾಂಕರ್ಯವಾಗುವುದು.

**ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।**
**ಪತನ್ತಿ ಪಿತರೋಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ॥ ೪೨ ॥**

ಈ ಸಾಂಕರ್ಯದಿಂದ ಕುಲನಾಶಕರಿಗೂ ಮತ್ತು ಕುಲಕ್ಕೂ ನರಕ ತಪ್ಪದು. ಪಿಂಡೋದಕಗಳಿಲ್ಲದೆ ಅವರ ಪಿತೃಗಳೂ ಕೆಳಗೆ ಬೀಳುವರು.

**ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ ।**
**ಉತ್ಸಾದ್ಯನ್ತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥ ೪೩ ॥**

ವರ್ಣಸಾಂಕರ್ಯವುಂಟುಮಾಡುವ ಕುಲಘಾತಕರ ಈ ದೋಷಗಳಿಂದ ಜಾತಿಯ ಮತ್ತು ಕುಲದ ಸನಾತನ ಧರ್ಮಗಳು ನಾಶವಾಗುವುವು.

**ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ ।**
**ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ ॥ ೪೪ ॥**

ಕುಲಧರ್ಮಗಳನ್ನು ಕಳೆದುಕೊಂಡವರಿಗೆ ನರಕವಾಸವು ನಿಶ್ಚಿತವೆಂದು ಕೇಳಿದ್ದೇವೆ.

**ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಂ ।**
**ಯದ್ರಾಜ್ಯಸುಖಲೋಭೇನ ಹನ್ತುಂ ಸ್ವಜನಮುದ್ಯತಾಃ ॥ ೪೫ ॥**

ಅಹಹಾ ! ರಾಜ್ಯ ಮತ್ತು ಸುಖದ ಆಸೆಗಾಗಿ ಸ್ವಜನರನ್ನು ಕೊಲ್ಲುವ ಮಹಾಪಾಪಕ್ಕೆ ತೊಡಗಿದೆವಲ್ಲಾ !

**ಯದಿ ಮಾಮಪ್ರತೀಕಾರಂ ಅಶಸ್ತ್ರಂ ಶಸ್ತ್ರಪಾಣಯಃ ।**
**ಧಾರ್ತರಾಷ್ಟ್ರಾ ರಣೇ ಹನ್ಯುಃ ತನ್ಮೇ ಕ್ಷೇಮತರಂ ಭವೇತ್ ॥ ೪೬ ॥**

ಆಯುಧಗಳನ್ನು ತೊರೆದು ಕೈ ಮಾಡದ ನನ್ನನ್ನೇ ಯುದ್ಧದಲ್ಲಿ ಧೃತರಾಷ್ಟ್ರ ಪುತ್ರರು ಆಯುಧಗಳಿಂದ ಕೊಂದರೆ, ಅದೇ ನನಗೆ ಹೆಚ್ಚು ಕ್ಷೇಮವಾದೀತು !

**ಸಂಜಯ ಉವಾಚ—**

**ಏವಮುಕ್ತ್ವಾಽರ್ಜುನಸ್ಸಂಖ್ಯೇ ರಥೋಪಸ್ಥ ಉಪಾವಿಶತ್ ।**
**ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ॥ ೪೭ ॥**

ಸಂಜಯ ಹೇಳಿದನು—

ಹೀಗೆಂದು, ದುಃಖದಿಂದ ತಲ್ಲಣಿಸಿದ ಅರ್ಜುನನು ಧನುರ್ಬಾಣಗಳನ್ನೂ ಬದಿಗಿಟ್ಟು ಯುದ್ಧರಂಗದಲ್ಲಿ ರಥದೊಳಗೇ ಕುಳಿತುಬಿಟ್ಟನು.

ಇಲ್ಲಿಗೆ ಅರ್ಜುನನ ವಿಷಾದಯೋಗವೆಂಬ ಮೊದಲನೆಯ ಅಧ್ಯಾಯ ಮುಗಿಯಿತು.

ಅಧ್ಯಾಯ ೨

# ಅರ್ಜುನನ ಮೋಹ ಶಮನ

**ಸಂಜಯ ಉವಾಚ—**

**ತಂ ತಥಾ ಕೃಪಯಾವಿಷ್ಟಂ ಅಶ್ರುಪೂರ್ಣಾಕುಲೇಕ್ಷಣಂ ।**
**ವಿಷೀದನ್ತಮಿದಂ ವಾಕ್ಯಂ ಉವಾಚ ಮಧುಸೂದನಃ ॥ ೧ ॥**

ಸಂಜಯ ಹೇಳಿದನು—

ಹೀಗೆ ಅರ್ಜುನನು ಸಲ್ಲದ ವಿಷಾದದಿಂದ ಕೂಡಿ ಕಂಬನಿತುಂಬಿದ ಕಣ್ಣುಳ್ಳವನಾಗಿ ವ್ಯಥಿತನಾಗಿರಲು, ಶ್ರೀ ಕೃಷ್ಣನು ಅವನಿಗೆ ಕೆಳಗೆ ಕಂಡಂತೆ ಹೇಳಿದನು.

**ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಂ ।**
**ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ॥ ೨ ॥**
**ಮಾ ಕ್ಲೈಬ್ಯಂ ಗಚ್ಛ ಕೌನ್ತೇಯ ನೈತತ್ತ್ವಯ್ಯುಪಪದ್ಯತೇ ।**
**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರನ್ತಪ ॥ ೩ ॥**

ಎಲೈ ಶತ್ರುಸಂತಾಪಕರನಾದ ಅರ್ಜುನನೇ ! ಕುಂತೀಪುತ್ರನಾದ ನಿನಗೆ ಹೇಯವೂ ಸದ್ಗತಿ ಕೆಡಿಸುವುದೂ ಅಪಯಶಸ್ಸು ತರುವುದೂ ಆದ ಈ ಶೋಕವು ಈ ವಿಷಮ ಸಮಯದಲ್ಲಿ ಹೇಗೆ ಒದಗಿತು ? ಹೃದಯ ದಾರ್ಢ್ಯವಿಲ್ಲದುದರಿಂದಾದ ಈ ಶೋಕವನ್ನು ಬಿಟ್ಟು ಯುದ್ಧಕ್ಕೆ ಎದ್ದು ನಿಲ್ಲು.

(ಸಂಗತಿ : ಮತ್ತೊಮ್ಮೆ, ಸ್ನೇಹಕಾರುಣ್ಯ ಧರ್ಮಾಧರ್ಮ ಭಯ ಗಳಿಂದ ತಳಮಳಗೊಂಡು, ಭಗವಂತನೆಂದುದನ್ನು ಹಿತವೆಂದೆಣಿಸದೆ ಅರ್ಜುನನು ಇಂತೆಂದನು ;)

ಅರ್ಜುನ ಉವಾಚ—

ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ ।
ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ॥ ೪ ॥

ಗುರೂನಹತ್ವಾ ಹಿ ಮಹಾನುಭಾವಾನ್
ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ ।
ಹತ್ವಾರ್ಥಕಾಮಾಂಸ್ತು ಗುರೂನಿಹೈವ
ಭುಂಜೀಯ ಭೋಗಾನ್ ರುಧಿರಪ್ರದಿಗ್ಧಾನ್ ॥ ೫ ॥

ಪೂಜೆಗೆ ಯೋಗ್ಯರಾದ ಭೀಷ್ಮ ದ್ರೋಣರೊಡನೆ ಯುದ್ಧವನ್ನು ಹೇಗೆ ಮಾಡಲಿ? ಮಹಾನುಭಾವರಾದ ಗುರುಗಳನ್ನು ಕೊಲ್ಲದೆ ಈ ಲೋಕದಲ್ಲಿ ತಿರಿದುಣ್ಣುವುದೇ ಲೇಸು. ಭೋಗಾಸಕ್ತರಾದ ಅವರನ್ನು ಕೊಂದು ಅವರ ರಕ್ತದಿಂದ ತೊಯ್ದ ಅದೇ ಭೋಗಗಳನ್ನು ಇಲ್ಲಿಯೇ ಹೇಗೆ ಅನುಭವಿಸಲಿ?

(ಸಂಗತಿ: ಹೀಗೆ ಕದನವನ್ನು ಆರಂಭಿಸಿ ಮುಂದುವರಿಸದೆ ಬಿಟ್ಟಲ್ಲಿ ಆ ಧೃತರಾಷ್ಟ್ರ ಪುತ್ರರು ನಿಮ್ಮೆಲ್ಲರನ್ನೂ ಬಲಾತ್ಕಾರದಿಂದ ಕೊಲ್ಲುವರೆಂದರೆ, ಹೇಳುತ್ತಾನೆ;)

ನ ಚೈತದ್ವಿದ್ಮಃ ಕತರನ್ನೋ ಗರೀಯೋ
ಯದ್ವಾ ಜಯೇಮ ಯದಿ ವಾ ನೋ ಜಯೇಯುಃ ।
ಯಾನೇವ ಹತ್ವಾ ನ ಜಿಜೀವಿಷಾಮಃ
ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ ॥ ೬ ॥

ಕಾರ್ಪಣ್ಯದೋಷೋಪಹತಸ್ವಭಾವಃ
ಪೃಚ್ಛಾಮಿ ತ್ವಾ ಧರ್ಮಸಂಮೂಢಚೇತಾಃ ।
ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ
ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಂ ॥ ೭ ॥

ಈ ಎರಡು ಕಡೆಗಳಲ್ಲಿ ಯಾರು ಹೆಚ್ಚೋ ಮತ್ತು ಯಾರು ಗೆಲ್ಲುವರೋ ತಿಳಿಯದು. ಯಾರನ್ನು ಕೊಂದು ನಮಗೆ ಬದುಕಲಿಷ್ಟವಿಲ್ಲವೋ ಅಂತಹ ಧೃತರಾಷ್ಟ್ರ ಪುತ್ರರೇ ನಮ್ಮ ಎದುರಿನಲ್ಲಿ ಇದ್ದಾರೆ. ಅತಿಮಾತ್ರ

ದೈನ್ಯದಿಂದ ಧೈರ್ಯಗೆಟ್ಟವನಾಗಿ, ಧರ್ಮದ ಅರಿವಿಲ್ಲದೆ ನಿನ್ನನ್ನು ಕೇಳುತ್ತೇನೆ. ನನಗೆ ನಿಜವಾಗಿಯೂ ಶ್ರೇಯಸ್ಸಾದುದು ಯಾವುದೋ ಅದನ್ನು ನಿನ್ನ ಮರೆಹೊಕ್ಕ ಶಿಷ್ಯನಾದ ನನಗೆ ಹೇಳು.

**ನ ಹಿ ಪ್ರಪಶ್ಯಾಮಿ ಮಮಾಪನುದ್ಯಾತ್**
**ಯಚ್ಛೋಕಮುಚ್ಛೋಷಣಮಿನ್ದ್ರಿಯಾಣಾಂ ।**
**ಅವಾಪ್ಯ ಭೂಮಾವಸಪತ್ನಮೃದ್ಧಂ**
**ರಾಜ್ಯಂ ಸುರಾಣಾಮಪಿ ಚಾಧಿಪತ್ಯಂ ॥ ೮ ॥**

ಸಮೃದ್ಧವೂ ನಿಷ್ಕಂಟಕವೂ ಆದ ಭೂಮಿಯ ಅಥವಾ ಸ್ವರ್ಗದ ಆಧಿಪತ್ಯವು ದೊರೆತರೂ, ಇಂದ್ರಿಯಗಳನ್ನು ಒಣಗಿಸುವ ಈ ನನ್ನ ದುಃಖವು ಏತರಿಂದ ನೀಗುವುದೋ ಕಾಣೆನು ?

**ಸಂಜಯ ಉವಾಚ—**

**ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರನ್ತಪಃ ।**
**ನ ಯೋತ್ಸ್ಯ ಇತಿ ಗೋವಿನ್ದಂ ಉಕ್ತ್ವಾ ತೂಷ್ಣೀಂ ಬಭೂವ ಹ॥**

ಸಂಜಯ ಹೇಳಿದನು —

ಪ್ರಬುದ್ಧಸ್ವಭಾವನೂ ಶತ್ರುಗಳಿಗೆ ತಾಪವುಂಟುಮಾಡತಕ್ಕವನೂ ಆದ ಅರ್ಜುನನು ಇಂದ್ರಿಯಗಳನ್ನು ಸಂತೋಷಗೊಳಿಸತಕ್ಕ ಶ್ರೀಕೃಷ್ಣನಿಗೆ ತನ್ನ ಅವಸ್ಥೆಯನ್ನು ತಿಳಿಸಿ, ಯುದ್ಧಮಾಡೆನೆಂದೂ ಹೇಳಿ ತೆಪ್ಪಗಾದನು.

**ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ।**
**ಸೇನಯೋರುಭಯೋರ್ಮಧ್ಯೇ ಸೀದಮಾನಮಿದಂ ವಚಃ ॥೧೦॥**

ಹೀಗೆ ದೇಹ ಮತ್ತು ಆತ್ಮರ ನಿಜಸ್ವರೂಪವನ್ನರಿಯದುದರಿಂದ ದುಃಖಿತನೂ, ಧರ್ಮವನ್ನಾಡುವುದರಿಂದ ದೇಹ ಮತ್ತು ಆತ್ಮರು ಬೇರೆ ಬೇರೆ ಯೆಂದು ಅರಿತವನೂ,—ಹೀಗೆ ಪರಸ್ಪರ ವಿರುದ್ಧ ಗುಣಾನ್ವಿತನೂ, ಯುದ್ಧೋದ್ಯುಕ್ತವಾಗಿದ್ದ ಎರಡು ಸೈನ್ಯಗಳ ನಡುವೆ ಅಕಸ್ಮಾತ್ತಾಗಿ ನಿರುದ್ಯೋಗಿಯೂ, ಆದ ಅರ್ಜುನನನ್ನು ನೋಡಿ ನಗುವವನಂತೆ ಶ್ರೀ ಕೃಷ್ಣನು ಮುಂದೆ ಹೇಳುವಂತೆ ಹೇಳಿದನು.

(ಟಿಪ್ಪಣಿ: ಜೀವಾತ್ಮ ಮತ್ತು ಪರಮಾತ್ಮರ ನಿಜ ಸ್ವರೂಪ - ಪರಮಾತ್ಮಪ್ರಾಪ್ತಿಗೆ ಉಪಾಯವಾದ ಕರ್ಮಯೋಗ – ಜ್ಞಾನಯೋಗ – ಭಕ್ತಿಯೋಗಗಳು – ಮುಂತಾದ, " ನ ತ್ವೇವಾಹಂ ಜಾತು ನಾಸಂ" – ಎಂಬುದರಿಂದ " ಅಹಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ " – ಎಂಬುದರ ವರೆಗಿರುವ ವಿಚಾರವನ್ನೆಲ್ಲ ಹೇಳಿದನು.)

**ಶ್ರೀ ಭಗವಾನುವಾಚ—**

**ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ ।**
**ಗತಾಸೂನಗತಾಸೂಂಶ್ಚ ನಾನುಶೋಚನ್ತಿ ಪಂಡಿತಾಃ ॥ ೧೧ ॥**

ಶ್ರೀ ಕೃಷ್ಣ ಹೇಳಿದನು—

ಶೋಕಿಸಲು ಯೋಗ್ಯರಲ್ಲದವರನ್ನು ಕುರಿತು ಶೋಕಿಸುತ್ತಿರುವೆ. (" ಪತನ್ತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕ ಕ್ರಿಯಾಃ "—ಇತ್ಯಾದಿಯಾಗಿ) ದೇಹ ಮತ್ತು ಆತ್ಮರ ಸ್ವಭಾವವರಿತ ಜ್ಞಾನಿಯಂತೆಯೂ ಮಾತಾಡುತ್ತಿರುವೆ. ಆದರೆ ದೇಹ ಮತ್ತು ಆತ್ಮರ ವಿಚಾರ ಬಲ್ಲವರು ಅವನ್ನು ಕುರಿತು ಶೋಕಿಸುವುದಿಲ್ಲ.

(ಸಂಗತಿ : ಮೊದಲು ಆತ್ಮರ ಸ್ವಭಾವವನ್ನು ಕೇಳು.)

**ನ ತ್ವೇವಾಹಂ ಜಾತು ನಾಸಂ ನ ತ್ವಂ ನೇಮೇ ಜನಾಧಿಪಾಃ ।**
**ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಂ ॥ ೧೨ ॥**

ಸರ್ವೇಶ್ವರನಾದ ನಾನೂ ನೀನು ಮತ್ತು ಈ ರಾಜರೇ ಆದಿಯಾದ ಎಲ್ಲ ಚೇತನರೂ ಹಿಂದೆ ಎಂದೂ ಇಲ್ಲದಿರಲಿಲ್ಲ; ಮುಂದೆಯೂ ಇಲ್ಲದೆ ಹೋಗುವುದಿಲ್ಲ.

(ಸಂಗತಿ : ಆತ್ಮರಿಗಾಗಿ ಶೋಕಿಸಬಾರದೆಂಬುದಕ್ಕಾಗಿ ಆತ್ಮರು ನಿತ್ಯರೆಂದು ಹೇಳಲಾಯಿತು. ಹೀಗಾದರೆ, ಅವರಿಗೆ ಜನನ-ಮರಣ ಮುಂತಾದ ವ್ಯವಹಾರಗಳು ಹೇಗಾಗಿವೆಂಬೆಂಬ ಶಂಕೆಯನ್ನು ದೃಷ್ಟಾಂತದಿಂದ ಪರಿಹರಿಸುತ್ತಾನೆ.)

**ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ ।**
**ತಥಾ ದೇಹಾನ್ತರಪ್ರಾಪ್ತಿಃ ಧೀರಸ್ತತ್ರ ನ ಮುಹ್ಯತಿ ॥ ೧೩ ॥**

ಆತ್ಮನು ಒಂದು ದೇಹದಲ್ಲಿರುವಾಗ ಆ ದೇಹಕ್ಕೆ ಬಾಲ್ಯ-ಯೌವನ-ಮುಪ್ಪುಗಳು ಒಂದಾದಮೇಲೆ ಒಂದು ಬರುವಂತೆಯೇ ಒಂದು ದೇಹ ಹೋಗಿ ಮತ್ತೊಂದು ದೇಹ ಬರುವುದು. ಆ ಆತ್ಮನು ಮಾತ್ರ ಸ್ಥಿರವಾಗಿಯೇ ಇದ್ದಾನೆಂದು ತಿಳಿದವನು ಇದಕ್ಕೆ ದುಃಖಿಸುವುದಿಲ್ಲ.

**ಮಾತ್ರಾಸ್ಪರ್ಶಾಸ್ತು ಕೌನ್ತೇಯ ಶೀತೋಷ್ಣಸುಖದುಃಖದಾಃ ।**
**ಆಗಮಾಪಾಯಿನೋಽನಿತ್ಯಾಃ ತಾಂಸ್ತಿತಿಕ್ಷಸ್ವ ಭಾರತ ॥ ೧೪ ॥**

ಎಲೈ ಅರ್ಜುನನೇ ! ಇಂದ್ರಿಯಗಳು ವಿಷಯಗಳಲ್ಲಿ ಸಂಬಂಧಿಸುವುದರಿಂದ ಶೀತ-ಉಷ್ಣ-ಮೃದು-ಕಠಿನ ಮುಂತಾದ ಸುಖದುಃಖಗಳುಂಟಾಗುವುವು. ಇವು ಬರುವುವು, ಹೋಗುವುವು. (ಯುದ್ಧವೇ ಮುಂತಾದ ಶಾಸ್ತ್ರೀಯ ಕರ್ಮಗಳು ಸಮಾಪ್ತವಾಗುವವರಿಗೂ) ಅವನ್ನು ಧೈರ್ಯದಿಂದ ಸೈರಿಸು.

(ಸಂಗತಿ : ಸೈರಿಸುವುದು ಏಕೆಂದರೆ,)

**ಯಂ ಹಿ ನ ವ್ಯಥಯನ್ತ್ಯೇತೇ ಪುರುಷಂ ಪುರುಷರ್ಷಭ ।**
**ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥ ೧೫ ॥**

ಅನಿವಾರ್ಯವಾಗಿ ಬಂದ ದುಃಖವನ್ನು ಸುಖದಂತೆಯೇ ಭಾವಿಸಿ, ತನ್ನ ವರ್ಣೋಚಿತವಾದ ಯುದ್ಧಾದಿ ಕರ್ಮಗಳನ್ನು ನಿಷ್ಕಾಮದಿಂದ ಆಚರಿಸುವ ಯಾವ ಧೀರನನ್ನು ಅದರಲ್ಲಿಯ ಶಸ್ತ್ರಪಾತಾದಿ ಮೃದು ಮತ್ತು ಕ್ರೂರ ಸ್ಪರ್ಶಗಳು ವ್ಯಥೆಗೊಳಿಸುವುದಿಲ್ಲವೋ ಅಂತಹವನೇ ಮೋಕ್ಷವನ್ನು ಸಾಧಿಸುವವನು.

ಸಂಗತಿ : ಶೋಕಿಸಲು ಕಾರಣವಿಲ್ಲವೆಂಬುದಕ್ಕಾಗಿ, ಆತ್ಮರು ನಿತ್ಯರು ದೇಹವು ವಿನಾಶಿ - ಎಂದು "ಗತಾಸೂನಗತಾಸೂಂಶ್ಚ ನಾನುಶೋಚನ್ತಿ ಪಂಡಿತಾಃ" ಎಂಬಲ್ಲಿ ಹೇಳಿದುದನ್ನೇ ಇಲ್ಲಿ ಉಪಪಾದಿಸಲು ಆರಂಭಿಸುತ್ತಾನೆ.

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**
**ಉಭಯೋರಪಿ ದೃಷ್ಟೋಽನ್ತಸ್ತ್ವನಯೋಃ ತತ್ತ್ವದರ್ಶಿಭಿಃ ॥೧೬॥**

ದೇಹವು ನಶ್ವರ. ಆತ್ಮವು ಸ್ಥಿರ–ಎಂದು ಇವುಗಳ ಸ್ವರೂಪವನ್ನು ಬಲ್ಲವರು ನಿಶ್ಚೈಸಿದ್ದಾರೆ.

(ಸಂಗತಿ : ಆತ್ಮ ಅವಿನಾಶಿಯೆಂಬುದು ಹೇಗೆಂದರೆ)

**ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಂ ।**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ ॥ ೧೭ ॥**

ನಾಶಕಗಳೆನಿಸಿದ ಶಸ್ತ್ರ, ಜಲ, ವಾಯು, ಅಗ್ನಿ ಮುಂತಾದುವು ಗಳಲ್ಲೆಲ್ಲ ಆತ್ಮನು ವ್ಯಾಪಿಸಿ ಅವುಗಳಿಗಿಂತ ತಾನು ನಿರತಿಶಯ ಸೂಕ್ಷ್ಮನೆನಿಸಿದ್ದಾನೆ. ಆದುದರಿಂದ ಅವು ಯಾವುವೂ ಇವನನ್ನು ನಾಶಗೊಳಿಸಲಾರವು.

(ನಾಶಕವಾದ ವಸ್ತುವು ನಾಶ್ಯವಾದುದರೊಳಗೆ ವ್ಯಾಪಿಸಿಯೇ ಅದನ್ನು ಶಿಥಿಲಗೊಳಿಸುತ್ತದೆ. ಗಡಾರಿಯೇ ಮುಂತಾದ ಆಯುಧಗಳು ವೇಗವತ್ಸಂಯೋಗದಿಂದ ವಾಯುವನ್ನುಂಟುಮಾಡಿ ಅದರ ಮೂಲಕ ವಸ್ತುಗಳನ್ನು ನಾಶಗೊಳಿಸುತ್ತವೆ. ಪ್ರಕೃತದಲ್ಲಿ ಅವೆಲ್ಲವೂ ಆತ್ಮನಿಗಿಂತ ಸ್ಥೂಲವಾದುವು ಆತ್ಮನಾದರೋ ನಿರತಿಶಯಸೂಕ್ಷ್ಮನು. ಅವನೊಳಗೆ ಅವು ಪ್ರವೇಶಿಸಲಾರವು. ಆದುದರಿಂದ ಆತ್ಮನು ಅವಿನಾಶಿ.)

**ಅನ್ತವನ್ತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।**
**ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥ ೧೮ ॥**

ದೇಹಗಳು (ಸಾವಯವಗಳೂ ಭೂತಸಂಘಾತರೂಪಗಳೂ ಮತ್ತು ಆತ್ಮನಿಗೆ ಕರ್ಮಫಲಭೋಗಕ್ಕಾಗಿ ಬರತಕ್ಕವೂ ಆಗಿವೆ. ಆದುದರಿಂದ ಅವನ ಕರ್ಮಫಲಾವಸಾನದಲ್ಲಿ ಇವು ನಾಶವಾಗುತ್ತವೆ. [illegible] ನಿರವಯವನೂ ಪ್ರಮಾತೃವೂ ವ್ಯಾಪಕನೂ ಆದುದರಿಂದ [illegible].

(ಟಿಪ್ಪಣಿ : ಹೀಗೆ ದೇಹವು ವಿನಾಶಸ್ವಭಾವವು, [illegible] ಸ್ವಭಾವದವನೂ ಆದುದರಿಂದ ಇವನ್ನು ಕುರಿತು ಶೋಕಿಸ[illegible] ಯುದ್ಧವನ್ನು ಮಾಡು.)

**ಯ ಏನಂ ವೇತ್ತಿ ಹನ್ತಾರಂ ಯಶ್ಚೈನಂ ಮನ್ಯತೇ ಹತಂ ।**
**ಉಭೌ ತೌ ನ ವಿಜಾನೀತೋ ನಾಯಂ ಹನ್ತಿ ನ ಹನ್ಯತೇ ॥ ೧೯ ॥**

ಈ ಆತ್ಮನನ್ನು ಕೊಲ್ಲುವವನೆಂದಾಗಲಿ, ಕೊಲ್ಲಿಸಿಕೊಳ್ಳುವವನೆಂದಾಗಲಿ ತಿಳಿಯುವವರು ಅಜ್ಞರು. ಇವನು ಯಾರನ್ನೂ ಕೊಲ್ಲುವುದೂ ಇಲ್ಲ ಮತ್ತು ಯಾವುದರಿಂದಲೂ ಕೊಲ್ಲಿಸಿಕೊಳ್ಳುವುದೂ ಇಲ್ಲ.

(ಟಿಪ್ಪಣಿ : "ಕೊಲೆ" ಎಂಬ ಲೋಕ ವ್ಯವಹಾರಕ್ಕೆ ಆತ್ಮನಿಗೆ ಶರೀರ ವಿಯೋಗವನ್ನುಂಟುಮಾಡುವುದೆಂದು ಮಾತ್ರವೇ ಅರ್ಥ.)

**ನ ಜಾಯತೇ ಮ್ರಿಯತೇ ವಾ ಕದಾಚಿತ್**
**ನಾಯಂ ಭೂತ್ವಾ ಭವಿತಾ ವಾ ನ ಭೂಯಃ ।**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ**
**ನ ಹನ್ಯತೇ ಹನ್ಯಮಾನೇ ಶರೀರೇ ॥ ೨೦ ॥**

(ಆದುದರಿಂದ) ಅಚೇತನವಾದ ದೇಹಕ್ಕೆ ತಟ್ಟುವ ಜನನ-ಮರಣಾವೇ ಮುಂತಾದುವು ಯಾವುವೂ ಆತ್ಮನಿಗೆ ತಟ್ಟುವುದಿಲ್ಲ. ಆದುದರಿಂದಲೇ ಇವನು ಹುಟ್ಟು ಇಲ್ಲದವನು ; ಅದರಿಂದಲೇ ನಿತ್ಯನು, ಪರಿಣಾಮರಹಿತನು. ಪುರಾತನನಾದರೂ ಹೊಸಬನಂತೆಯೇ ತೋರುವನು. ಶರೀರಕ್ಕೆ ಮಾತ್ರ ಪೆಟ್ಟಾಗುವುದೇ ಹೊರತು ಇವನಿಗೇನೂ ಪೆಟ್ಟಾಗುವುದಿಲ್ಲ.

**ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಂ ।**
**ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹನ್ತಿ ಕಂ ॥ ೨೧ ॥**

ಹೀಗೆ ಅವಿನಾಶಿಯೂ, ಜನ್ಮರಹಿತನೂ, ವ್ಯಯಾನರ್ಹನೂ ಆದುದರಿಂದ ಈ ಆತ್ಮನನ್ನು ನಿತ್ಯನೆಂದು ತಿಳಿದವನು ಯಾರನ್ನು ತಾನೆ ಹೇಗೆ ಕೊಲ್ಲುತ್ತಾನೆ ಅಥವಾ ಕೊಲ್ಲಿಸುತ್ತಾನೆ ?

ಆತ್ಮರು ನಿತ್ಯರಾದರೂ, ರಮಣೀಯ ಭೋಗಗಳಿಗೆ ಸಾಧನಗಳಾದ ಶರೀರಗಳನ್ನು ಬಿಡುವುದರಿಂದ ಆತ್ಮರಿಗೆ ದುಃಖವಾಗುವುದಿಲ್ಲವೆ ?–ಎಂದರೆ, ಇಲ್ಲ. ಏಕೆಂದರೆ, ಧರ್ಮಯುದ್ಧದಲ್ಲಿ ದೇಹವನ್ನು ಬಿಡುವವರಿಗೆ ಅದಕ್ಕಿಂತ ಹೆಚ್ಚು ಮಂಗಳಕರವಾದ ದೇಹ ಬರುವುದೆಂದು ಶಾಸ್ತ್ರವಿದೆ.

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ**
**ನವಾನಿ ಗೃಹ್ಣಾತಿ ನರೋಽಪರಾಣಿ ।**
**ತಥಾ ಶರೀರಾಣಿ ವಿಹಾಯ ಜೀರ್ಣಾ-**
**ನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥ ೨೨ ॥**

ಹರಕು ಬಟ್ಟೆಗಳನ್ನು ಬಿಟ್ಟು ಶ್ರೇಷ್ಠವಾದ ಹೊಸ ಬಟ್ಟೆಗಳನ್ನು ಉಡುವವರಿಗೆ ಹೇಗೋ ಹಾಗೆ ಇವರಿಗೂ ಹಳೆಯ ದೇಹಗಳು ಹೋಗಿ ಹೊಸ ದೇಹಗಳು ಬರುವುವು. (ಆದುದರಿಂದ ಇದು ಹರ್ಷಸ್ಥಾನವೇ ಆಗಿರುವುದು.)

(ಸಂಗತಿ : ಹಿಂದೆ "ಅವಿನಾಶಿ ತು ತದ್ವಿದ್ಧಿ"—(2 17) ಎಂಬಲ್ಲಿ ಹೇಳಿದ ಅವಿನಾಶಿತ್ವವನ್ನೇ ಇನ್ನೂ ಸುಲಭವಾಗಿ ತಿಳಿಸುವುದಕ್ಕೋಸ್ಕರ ಮತ್ತೆ ದೃಢಪಡಿಸುತ್ತಾನೆ.)

**ನೈನಂ ಛಿನ್ದನ್ತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।**
**ನ ಚೈನಂ ಕ್ಲೇದಯನ್ತ್ಯಾಪೋ ನ ಶೋಷಯತಿ ಮಾರುತಃ ॥೨೩॥**

**ಅಚ್ಛೇದ್ಯೋಽಯ ಮದಾಹ್ಯೋಽಯ-**
**ಮಕ್ಲೇದ್ಯೋಽಶೋಷ್ಯ ಏವ ಚ ।**
**ನಿತ್ಯಸ್ಸರ್ವಗತಃ ಸ್ಥಾಣು-**
**ರಚಲೋಽಯಂ ಸನಾತನಃ ॥ ೨೪ ॥**

ಶಸ್ತ್ರ-ಅಗ್ನಿ-ಜಲ-ವಾಯು ಮುಂತಾದವು ಆತ್ಮನನ್ನು ಬಾಧಿಸಲಾರವು. ಏಕೆಂದರೆ ಅವನು ಎಲ್ಲ ತತ್ತ್ವಗಳಿಗಿಂತ ಸೂಕ್ಷ್ಮನಾಗಿದ್ದುಕೊಂಡು ಎಲ್ಲದರಲ್ಲಿಯೂ ವ್ಯಾಪಿಸಿರತಕ್ಕವನು. ಆದುದರಿಂದ ಆತ್ಮನು ನಿತ್ಯನೂ ಸ್ಥಿರನೂ ಅಪ್ರಕಂಪ್ಯನೂ ಅನಾದಿಯೂ ಆಗಿರುವನು.

**ಅವ್ಯಕ್ತೋಽಯಮಚಿನ್ತ್ಯೋಽಯ-**
**ಮವಿಕಾರ್ಯೋಽಯಮುಚ್ಯತೇ**
**ತಸ್ಮಾದೇವಂ ವಿದಿತ್ವೈನಂ**
**ನಾನುಶೋಚಿತುಮರ್ಹಸಿ ॥ ೨೫ ॥**

ಇಂದ್ರಿಯಗಳಿಗೆ ಇವನು ಗೋಚರಿಸುವವನಲ್ಲ. (ಎಲ್ಲ ವಸ್ತುಗಳಿಗೂ ವಿಜಾತೀಯನಾದುದರಿಂದ ಇವನು ಇಂತಹ ಸ್ವಭಾವದವನೆಂದು) ಚಿಂತಿಸಲೂ ಸಾಧ್ಯವಿಲ್ಲ. ಆದುದರಿಂದ ಇವನು ವಿಕಾರವಿಲ್ಲದವನು ಇದನ್ನು ತಿಳಿದು ನೀನು ದುಃಖಿಸುವುದು ಯುಕ್ತವಲ್ಲ.

(ಸಂಗತಿ : ಹೀಗೆ ದೇಹ ಆತ್ಮರು ಬೇರೆ ಬೇರೆಯೆಂದು ಒಪ್ಪಿಕೊಂಡು,

ಶೋಕಕ್ಕೆ ಕಾರಣವಿಲ್ಲವೆನ್ನಲಾಯಿತು. ಇನ್ನು ನಾಸ್ತಿಕರಂತೆ ದೇಹವೇ ಆತ್ಮವೆಂದು ವಾದಿಸಿದಾಗ್ಗೂ ಶೋಕಕ್ಕೆ ಕಾರಣವಿಲ್ಲವೆನ್ನುತ್ತಾನೆ.)

**ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಂ ।**
**ತಥಾಪಿ ತ್ವಂ ಮಹಾಬಾಹೋ! ನೈವಂ ಶೋಚಿತುಮರ್ಹಸಿ ॥೨೬॥**

ನಿತ್ಯವೂ ಹುಟ್ಟಿ ಸಾಯುವ ಈ ದೇಹವನ್ನೇ ಆತ್ಮನೆಂದು ತಿಳಿಯುತ್ತೀಯೋ ? ಹಾಗಾದರೂ, ಎಲೈ ಮಹಾಬಾಹುವೇ ! ನೀನು ದುಃಖಿಸ ಕೂಡದು. (ಏಕೆಂದರೆ, ದೇಹವು ಪರಿಣಾಮ ಸ್ವಭಾವವುಳ್ಳದ್ದಾದುದರಿಂದ ಅದಕ್ಕೆ ಹುಟ್ಟುವುದು ಮತ್ತು ನಾಶ ಹೊಂದುವುದು ಅನಿವಾರ್ಯ.)

**ಜಾತಸ್ಯ ಹಿ ಧ್ರುವೋ ಮೃತ್ಯುಃ ಧ್ರುವಂ ಜನ್ಮ ಮೃತಸ್ಯ ಚ ।**
**ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥ ೨೭ ॥**

ಹುಟ್ಟಿದುದು ಸಾಯುವುದೂ, ಸತ್ತದ್ದು ಮತ್ತೆ ಹುಟ್ಟುವುದೂ ಅನಿವಾರ್ಯವಾದುದರಿಂದ ಅದಕ್ಕಾಗಿ ದುಃಖಿಸುವುದು ಯುಕ್ತವಲ್ಲ.

**ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।**
**ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ ॥ ೨೮ ॥**

ಮನುಷ್ಯಾದಿ ಪ್ರಾಣಿಗಳಿಗೆ ಹಿಂದಿನ ಸ್ಥಿತಿಗಳೂ ಮತ್ತು ಮುಂದೆ ಬರುವ ಸ್ಥಿತಿಗಳೂ ಸುಖರೂಪವೋ ದುಃಖರೂಪವೋ ಎಂದು ವಿವೇಚಿಸಲು ಸಾಧ್ಯವಿಲ್ಲ. ಈಗಿನ ಸ್ಥಿತಿ ಮಾತ್ರವೇ ತಿಳಿದಿದೆ. ಆದುದರಿಂದ ಒಂದು ಸ್ಥಿತಿ ಹೋಗಿ ಮತ್ತೊಂದು ಸ್ಥಿತಿಯು ಆತ್ಮನಿಗೆ ಬರುವುದರಿಂದಲೂ ಶೋಕಿಸುವುದೇಕೆ ?

**ಆಶ್ಚರ್ಯವತ್ಪಶ್ಯತಿ ಕಶ್ಚಿದೇನಂ**
**ಆಶ್ಚರ್ಯವದ್ವದತಿ ತಥೈವ ಚಾನ್ಯಃ ।**
**ಆಶ್ಚರ್ಯವಚ್ಚೈನಮನ್ಯಃ ಶೃಣೋತಿ**
**ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್ ॥ ೨೯ ॥**

ದೇಹಕ್ಕಿಂತ ಭಿನ್ನನಾದ ಇಂತಹ ಆಶ್ಚರ್ಯಸ್ವರೂಪನಾದ ಆತ್ಮನ ಸ್ವರೂಪವನ್ನು ಸರಿಯಾಗಿ ನೋಡುವವನೂ ಸರಿಯಾಗಿ ವರ್ಣಿಸುವವನೂ

ಮತ್ತು ಕೇಳುವವನೂ ಅತ್ಯಂತ ದುರ್ಲಭ. ಸರಿಯಾಗಿ ಇದನ್ನು [illegible]
ನಂತೂ ಇಲ್ಲವೇ ಇಲ್ಲ.

(ಸಂಗತಿ : ದೇವ-ಮನುಷ್ಯ-ಮುಂತಾದ ಶಬ್ದಗಳು [illegible] ದೇಹ
ಗಳಿಗೆ ಮಾತ್ರವಲ್ಲದೆ ಆ ದೇಹಗಳಿಂದ ಕೂಡಿದ ಆತ್ಮಗಳ [illegible]
ಯಷ್ಟೆ! ಹೀಗೆಯೇ ಆಯಾ ದೇಹದಲ್ಲಿ ತೋರುವ ಸುಖ, ದುಃಖ, [illegible]
ಅನಿತ್ಯತೆ ಮೊದಲಾದ ವ್ಯತ್ಯಾಸಗಳೂ ಆಯಾ ಆತ್ಮಗಳಿಗೂ [illegible]
ಬೇಕಲ್ಲವೆ ? ಎಂದರೆ, ಹೇಳುತ್ತಾನೆ.)

**ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।**
**ತಸ್ಮಾತ್ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥ ೩೦ ॥**

ದೇವ-ಮನುಷ್ಯಾದಿ ದೇಹಗಳು ಮಾತ್ರ [illegible]
ಹೊರತು ಅವುಗಳೊಳಗಿರುವ ಆತ್ಮನು ಎಂದೂ [illegible].
ಆದುದರಿಂದ, ಭೀಷ್ಮದ್ರೋಣಾದಿಗಳನ್ನು ಕುರಿತು [illegible],
ಯಾವ ಪ್ರಾಣಿಗಳಿಗಾಗಿಯೂ ಶೋಕಿಸುವುದು ಉಚಿತವಲ್ಲ.

(ಟಿಪ್ಪಣಿ : ಏಕೆಂದರೆ, ದೇವ-ಮನುಷ್ಯರೇ ಮುಂತಾದವರೆಲ್ಲ [illegible]
ಬೇರೆ ಆಕಾರವುಳ್ಳವರಾಗಿದ್ದರೂ ಎಲ್ಲರೂ [illegible]
ಸ್ವರೂಪತಃ ಸಮಾನರು. ಆಕಾರವೇ ಮುಂತಾದ ವ್ಯತ್ಯಾಸಗಳು [illegible]
ಮಾತ್ರವೇ ಹೊರತು ಅದರೊಳಗಿರುವ ಆತ್ಮನಿಗೆ [illegible].
ಆ ದೇವ-ಮನುಷ್ಯಾದ್ಯಾಕಾರಗಳು ಅವರವರ ಕರ್ಮಕ್ಕೆ [illegible].

(ಸಂಗತಿ : ಇದುವರೆಗೂ ಅರ್ಜುನನಿಗೆ [illegible]
ಸ್ನೇಹ ಕಾರುಣ್ಯಗಳನ್ನು ಖಂಡಿಸಲಾಯಿತು. ಇನ್ನು [illegible]
ದತಿರಿಚ್ಯತೇ"—31 ಎಂಬಲ್ಲಿಯವರೆಗೆ ಧರ್ಮಾಧರ್ಮ [illegible]
ಸುತ್ತಾನೆ.)

**ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।**
**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ**

ಈಗ ಆರಂಭವಾಗಿರುವ ಯುದ್ಧದಿಂದ [illegible],
ಅಗ್ನೀಷೋಮೀಯವೇ ಮುಂತಾದ ಯಾಗಗಳಂತೆ ಈ ಯುದ್ಧವೂ [illegible]

ಸ್ವಧರ್ಮವೆಂದು ತಿಳಿ. ಆದುದರಿಂದ ಇದಕ್ಕೆ ಹಿಂಜರಿಯುವುದು ಸರಿಯಲ್ಲ. ನ್ಯಾಯ ಪ್ರಾಪ್ತವಾದ ಯುದ್ಧಕ್ಕಿಂತ ಶ್ರೇಯಸ್ಕರವಾದುದು ಕ್ಷತ್ರಿಯನಿಗೆ ಮತ್ತೊಂದಿಲ್ಲ.

[ಟಿಪ್ಪಣಿ : ಅಗ್ನೀಷೋಮೀಯಾದಿಗಳಲ್ಲಿ ಹೇಳಿರುವ ಪಶುಹಿಂಸೆಯು ನಿಜವಾಗಿಯೂ ಹಿಂಸೆಯಲ್ಲ; ಏಕೆಂದರೆ, ನಿಹೀನತರವಾದ ಆ ಪಶು ದೇಹವು ಹೋಗುವುದರ ಮೂಲಕ ಅದರೊಳಗಿರುವ ಆತ್ಮನಿಗೆ ಮಂಗಳ ಕರವಾದ ದೇಹದ ಮತ್ತು ಸ್ವರ್ಗಾದಿಗಳ ಪ್ರಾಪ್ತಿಯುಂಟೆಂದು ಶಾಸ್ತ್ರದಲ್ಲಿ ಹೇಳಿದೆ. ರೋಗಿಗೆ ವೈದ್ಯನ ಶಸ್ತ್ರಾದಿ ಚಿಕಿತ್ಸೆಗಳಂತೆ ಆ ಪಶುವಧೆಯು ಆಯಾ ಪಶುವಿಗೆ ರಕ್ಷಣೆಯೆಂದೇ ಭಾವಿಸಬೇಕು. ಹಾಗೆಯೇ ಯುದ್ಧದಲ್ಲಿ ಸತ್ತವರಿಗೂ ಕಲ್ಯಾಣತರ ದೇಹ ಪ್ರಾಪ್ತಿಯುಂಟೆಂದು "ವಾಸಾಂಸಿ ಜೀರ್ಣಾನಿ ಯಥಾ ವಿಹಾಯ...."—22 ಇತ್ಯಾದಿಯಾಗಿ ಹೇಳಿದೆ.]

(ಸಂಗತಿ : ಯುದ್ಧವು ಪ್ರಾಣಿ ಮಾರಣವೇ ಆದರೂ ಅದನ್ನು ಮತ್ತೆ ಪ್ರಶಂಸೆ ಮಾಡುತ್ತ ಅದು ಅಧರ್ಮವೆಂಬ ಭ್ರಮನನ್ನು ಹೋಗಲಾಡಿಸುತ್ತಾನೆ.)

**ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಂ ।**
**ಸುಖಿನಃ ಕ್ಷತ್ರಿಯಾಃ ಪಾರ್ಥ ಲಭನ್ತೇ ಯುದ್ಧಮೀದೃಶಂ ॥೩೨॥**

ಅಯತ್ನದಿಂದೊದಗಿ, ನಿರತಿಶಯ ಸುಖಕ್ಕೆ ತೆರೆದ ದ್ವಾರದಂತೆ ಇರುವ ಇಂತಹ ಯುದ್ಧವು ಪುಣ್ಯವಂತರಾದ ಕ್ಷತ್ರಿಯರಿಗೆ ಮಾತ್ರ ಲಭ್ಯವು.

(ಸಂಗತಿ : ಹೀಗೆ ಪ್ರಕೃತ ಯುದ್ಧವು ಧರ್ಮವೇ ಆದುದರಿಂದ ಅದನ್ನು ನಡೆಸುವುದರಿಂದ ನಿರತಿಶಯ ಸುಖವುಂಟೆಂದು ಹೇಳಲಾಯಿತು. ಇನ್ನು ಅದನ್ನು ನಡೆಸದಿದ್ದಲ್ಲಿ ಅನರ್ಥವುಂಟೆಂದು ಇಲ್ಲಿ ಹೇಳುತ್ತಾನೆ)

**ಅಥ ಚೇತ್ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ।**
**ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ ॥೩೩॥**

ಧರ್ಮರೂಪವಾದ ಈ ಯುದ್ಧವನ್ನು ನೀನು ಮುಂದುವರಿಸದಿದ್ದರೆ,

ಸ್ವಧರ್ಮಫಲನಾದ ನಿರತಿಶಯಸುಖವನ್ನೂ, ಗೆಲ್ಲುವುದರಿಂದ ಲಭಿಸುವ ಕೀರ್ತಿಯನ್ನೂ ಕಳೆದುಕೊಂಡು ಅತ್ಯಂತ ಪಾಪವನ್ನೇ ಹೊಂದುವೆ.

(ಸಂಗತಿ : ಯುದ್ಧಮಾಡದಿರುವುದರಿಂದ ಸುಖ ಮತ್ತು ಕೀರ್ತಿ ಗಳಿಗೆ ಮಾತ್ರವೇ ಹಾನಿಯಾಗುವುದಿಲ್ಲ. ಮತ್ತೇನೆಂದರೆ ಪ್ರತ್ಯಕ್ಷವಾಗ ಅನಿಷ್ಟಗಳೂ ಉಂಟೆಂದು ಹೇಳುತ್ತಾನೆ.

**ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯನ್ತಿ ತೇಽವ್ಯಯಾಂ ।**
**ಸಂಭಾವಿತಸ್ಯ ಚಾಕೀರ್ತಿಃ ಮರಣಾದತಿರಿಚ್ಯತೇ ॥ ೩೪ ॥**

ಯುದ್ಧದ ಮೊದಲಲ್ಲೇ ಅರ್ಜುನನು ಓಡಿಬಿಟ್ಟನೆಂದು ಎಲ್ಲರೂ ಎಂದೆಂದೂ ಆಡಿಕೊಳ್ಳುವರು. ಶೌರ್ಯ-ವೀರ್ಯ-ಪರಾಕ್ರಮಾದಿಗಳಿಂದ ಮಾನ್ಯನಾಗಿರುವ ನಿನಗೆ ಇಂತಹ ಶಾಶ್ವತ ದುಷ್ಕೀರ್ತಿಗಿಂತ ಮರಣವೇ ಮೇಲಲ್ಲವೇ !

(ಸಂಗತಿ : ಬಂಧುಸ್ನೇಹದಿಂದಲೂ ಕಾರುಣ್ಯದಿಂದಲೂ ಯುದ್ಧ ದಿಂದ ವಿಮುಖನಾದ ನನ್ನಂಥ ಶೂರನಿಗೆ ದುಷ್ಕೀರ್ತಿಯೆಲ್ಲಿಯದು ? ಎಂದರೆ ಹೇಳುತ್ತಾನೆ.)

**ಭಯಾದ್ರಣಾದುಪರತಂ ಮಂಸ್ಯನ್ತೇ ತ್ವಾಂ ಮಹಾರಥಾಃ ।**
**ಯೇಷಾಂ ಚ ತ್ವಂ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಂ ॥**

ಶೂರನಾದ ವೈರಿಯೆಂದು ನಿನ್ನನ್ನು ಇದುವರೆಗೆ ಗೌರವಿಸುತ್ತಿದ್ದ ಕರ್ಣದುರ್ಯೋಧನಾದಿ ಮಹಾರಥರೇ ನೀನು ಯುದ್ಧಕ್ಕೆ ಹೆದರಿ ಸುಮ್ಮನಾದೆ ಯೆಂದು ತಿಳಿದು ನಿಂದಿಸುವರು.

(ಏಕೆಂದರೆ ಶೂರರಾದ ವೈರಿಗಳು ಶತ್ರು ಭಯವೊಂದರಿಂದ ಹೊರತು ಬಂಧುಸ್ನೇಹವೇ ಮೊದಲಾದುದರಿಂದ ಯುದ್ಧವನ್ನು ತ್ಯಜಿಸುವರೇ ?)

(ಸಂಗತಿ : ಇದುವರೆಗೆ ಹಿಂದಿನ ಅಪಕಾರವನ್ನೂ ಮುಂದೆ ಆರೋಪ ವಾಗುವ ಲಾಘವವನ್ನೂ ಹೇಳಿ ಇನ್ನು ಮುಂದೆ ಬರುವ ಅಪಕಾರದಿಂದಲೂ ಕೂಡ ಇವನಿಗೆ ಉಂಟಾಗಿರುವ ಸ್ನೇಹ-ಕಾರುಣ್ಯಗಳು ಅಸಂಗತಗಳೆಂದು ದೃಢಪಡಿಸುತ್ತಾನೆ.)

**ಅವಾಚ್ಯವಾದಾಂಶ್ಚ ಬಹೂನ್ ವದಿಷ್ಯನ್ತಿ ತವಾಹಿತಾಃ ।**
**ನಿನ್ದನ್ತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಂ? ॥೩೬॥**

ಮತ್ತೆ ನಿನ್ನ ಶತ್ರುಗಳು ಆಡಬಾರದುದೆಲ್ಲವನ್ನೂ ಆಡಿ ನಿನ್ನ ಸಾಮರ್ಥ್ಯವನ್ನು ಹಳಿಯುವರು. ಇದಕ್ಕಿಂತ ದುಃಖಕರವಾವುದು? (ಈ ಅವಾಚ್ಯವನ್ನು ಕೇಳುವುದಕ್ಕಿಂತ ಮರಣವೇ ಮೇಲೆಂದು ಭಾವ.)

(ಸಂಗತಿ: ಆದುದರಿಂದ, ಶೂರನಿಗೆ ಶತ್ರುಗಳನ್ನು ಕೊಲ್ಲುವುದೂ ಅಥವಾ ಶತ್ರುಗಳಿಂದಲೇ ಕೊಲ್ಲಿಸಿಕೊಳ್ಳುವುದೂ ಇವೆರಡೂ ಶ್ರೇಯಸ್ಕರ. ಹೇಗೆಂದರೆ,)

**ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಂ।**
**ತಸ್ಮಾದುತ್ತಿಷ್ಠ ಕೌನ್ತೇಯ ಯುದ್ಧಾಯ ಕೃತನಿಶ್ಚಯಃ ॥ ೩೭ ॥**

ಫಲದಲ್ಲಿ ಆಸೆಯಿಲ್ಲದೆ ಯುದ್ಧಮಾಡಿ ಹತನಾದರೂ ಮೋಕ್ಷಹೊಂದುವೆ. ಗೆದ್ದರಂತೂ ರಾಜ್ಯವಾಳುವೆ-ಎಂದು ನಿಶ್ಚೈಸಿ ಯುದ್ಧಕ್ಕೆ ಏಳು.

(ಸಂಗತಿ: ಮುಕ್ತಿಯನ್ನು ಬಯಸುವವನು ಹೇಗೆ ಯುದ್ಧ ಮಾಡ ಬೇಕೆಂದರೆ,)

**ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ ।**
**ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥೩೮॥**

(ದೇಹವು ಬೇರೆ, ಆತ್ಮನು ಬೇರೆ-ಅವನು ದೇಹಕ್ಕಿಂತ ವಿಲಕ್ಷಣನು, ನಿತ್ಯನು ಎಂದರಿತು) ಯುದ್ಧದಲ್ಲಿ ಪರಿಹರಿಸಲಾಗದ ಸುಖ, ದುಃಖ, ಲಾಭ, ನಷ್ಟ, ಗೆಲುವು, ಸೋಲು—ಗಳನ್ನೆಲ್ಲ ಸಮಾನವಾಗಿ ಭಾವಿಸಿ, ಕೇವಲ ಕರ್ತವ್ಯವೆಂದೇ ಯುದ್ಧವನ್ನು ಆರಂಭಿಸು. ಇದರಿಂದ ಮೋಕ್ಷ ಸಿಗುವುದು.

(ಸಂಗತಿ: ಹೀಗೆ ಆತ್ಮದ ಯಥಾರ್ಥಜ್ಞಾನವನ್ನು ಉಪದೇಶಿಸಿ, ಈಗ ಇಂತಹ ಜ್ಞಾನದಿಂದ ನಡೆಸಬೇಕಾದ, ಮೋಕ್ಷ ಸಾಧನವಾಗಿರುವ ಕರ್ಮಯೋಗವನ್ನು ಹೇಳಲಾರಂಭಿಸುತ್ತಾನೆ.

**ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು ।**
**ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬನ್ಧಂ ಪ್ರಹಾಸ್ಯಸಿ ॥**

(ಸಂಖ್ಯಾ = ಬುದ್ಧಿಯು ; ಸಂಖ್ಯೆಯಿಂದ ಅಸಾಧಾರಣರೂಪವಾಗಿ ಆತ್ಮತತ್ತ್ವವೇ ಇಲ್ಲಿ ಸಾಂಖ್ಯವೆನಿಸುವುದು.) ಎಲೈ ಪಾರ್ಥನೆ! ಆತ್ಮತತ್ತ್ವದ ವಿಷಯದಲ್ಲಿ (ಅದರ ಸಾಕ್ಷಾತ್ಕಾರಕ್ಕಾಗಿ) [illegible]ದನ್ನು ನಿನಗೆ ಹೇಳಿಯಾಯಿತು. (ಇನ್ನು) ಕರ್ಮಯೋಗದ ವಿಷಯದಲ್ಲಿ ತಿಳಿಯಬೇಕಾದುದನ್ನು ಕೇಳು. ಇದನ್ನು ತಿಳಿಯುವುದರಿಂದ ಸಂಸಾರ ಬಂಧವನ್ನು ನೀಗುವೆ.

(ಸಂಗತಿ : ಮುಂದೆ ಹೇಳುವ ಕರ್ಮಯೋಗ ವಿಷಯವಾದ ಜ್ಞಾನದಲ್ಲಿ ಅತಿಶಯವಾದ ಆಸೆಯನ್ನು ಉಂಟು ಮಾಡುವುದಕ್ಕಾಗಿ, ಉಪಕ್ರಮದಲ್ಲಿಯೇ ಆ ಕರ್ಮಯೋಗದ ಮಾಹಾತ್ಮ್ಯವನ್ನು ಹೇಳುತ್ತಾನೆ.)

**ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।**
**ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥**

(ಅಭಿಕ್ರಮ = ಆರಂಭ) ಕರ್ಮಯೋಗವನ್ನು ಆರಂಭಿಸಿ ಅದನ್ನು ಪೂರೈಸದೆ ಬಿಟ್ಟು ಬಿಟ್ಟರೂ ಅದು ನಿಷ್ಫಲವಾಗುವುದಿಲ್ಲ; ದೋಷವೂ ಇರುವುದಿಲ್ಲ. ಈ ಕರ್ಮಯೋಗವನ್ನು ಸ್ವಲ್ಪ ಮಾತ್ರ ಆಚರಿಸಿದರೂ ಸಂಸಾರದ ಭಯವು ಅವರಿಗೆ ಇರುವುದಿಲ್ಲ.

**ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನನ್ದನ ।**
**ಬಹುಶಾಖಾ ಹ್ಯನನ್ತಾಶ್ಚ ಬುದ್ಧಯೋಽವ್ಯವಸಾಯಿನಾಂ ॥ ೪೧ ॥**

ಎಲೈ ಅರ್ಜುನನೆ! ವ್ಯವಸಾಯಾತ್ಮಿಕವಾದ ಬುದ್ಧಿಯು (ಮುಮುಕ್ಷುಗಳ ಕರ್ಮಾನುಷ್ಠಾನದಲ್ಲಿರಬೇಕಾದ ಆತ್ಮಯಾಥಾತ್ಮ್ಯ ನಿಶ್ಚಯರೂಪವಾದ ಬುದ್ಧಿಯು) ಒಂದೇ (ಮೋಕ್ಷವೊಂದಕ್ಕೇ [illegible] ಸಾಧನವಾದುದು), ಅವ್ಯವಸಾಯಿಗಳ ಬುದ್ಧಿಗಳು (ಕಾಮ್ಯ ಕರ್ಮಗಳಲ್ಲಿ [illegible], ದೇಹಾತಿರಿಕ್ತವಾದ ಆತ್ಮವೊಂದುಂಟೆಂಬ [illegible] ಕೂಡಿದ ಬುದ್ಧಿಗಳು) ಸ್ವರ್ಗ-ಪುತ್ರ-ಪಶು-ಅನ್ನ-[illegible]

ಪ್ರಧಾನ ಮತ್ತು ಅವಾನ್ತರ ಫಲಭೇದಗಳುಳ್ಳವುಗಳಾದುದರಿಂದ ಬಹು ಶಾಖೆಗಳುಳ್ಳವೂ ಅನನ್ತಗಳೂ ಆಗಿವೆ.

(ಟಿಪ್ಪಣಿ : ಮುಮುಕ್ಷುವು ಆಯಾ ವರ್ಣಾಶ್ರಮೋಚಿತವಾದ ನಿತ್ಯ-ನೈಮಿತ್ತಿಕ ಕರ್ಮಗಳನ್ನೂ ಮತ್ತು ಕಾಮ್ಯಕರ್ಮಗಳನ್ನೂ ಆಯಾ ಪ್ರಕರಣಗಳಲ್ಲಿ ಕಂಡಿರುವ ಫಲಗಳಲ್ಲಿ ಆಸೆಯಿಲ್ಲದೆ ಮೋಕ್ಷಸಾಧನವಾಗಿ ಮಾತ್ರವೇ ಯಥಾಶಾಸ್ತ್ರ ಮತ್ತು ಯಥಾಶಕ್ತಿ ಆಚರಿಸಬೇಕು.)

**ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದನ್ತ್ಯವಿಪಶ್ಚಿತಃ ।**
**ವೇದವಾದರತಾಃ ಪಾರ್ಥ ನಾನ್ಯದಸ್ತೀತಿ ವಾದಿನಃ ॥ ೪೨ ॥**

**ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಂ ।**
**ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥ ೪೩ ॥**

**ಭೋಗೈಶ್ವರ್ಯಪ್ರಸಕ್ತಾನಾಂ ತಯಾಪಹೃತಚೇತಸಾಂ ।**
**ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥ ೪೪ ॥**

(ಈಗ ಕಾಮ್ಯ ಕರ್ಮಗಳನ್ನು ಮಾಡುವವರನ್ನು ನಿಂದಿಸುತ್ತಾನೆ.) ಎಲೈ ಪಾರ್ಥನೆ! ವೇದಗಳಲ್ಲಿ ಸ್ವರ್ಗಾದಿಫಲವಾದಗಳು ಯಾವುವು ಇವೆಯೋ ಅವುಗಳಲ್ಲಿ ಆಸಕ್ತರಾದ ಅಲ್ಪಜ್ಞರು ವೇದದಲ್ಲಿ ಹೇಳಿರುವ ಕ್ರಿಯೆಗಳಿಗೆಲ್ಲ ನಶ್ವರವಾದ ಸ್ವರ್ಗಾದಿ ಭೋಗೈಶ್ವರ್ಯಗಳೇ ಪರಮಫಲ ; ಇವಕ್ಕೆ ಇದಕ್ಕಿಂತ ಅಧಿಕವಾದ ಫಲ ಮತ್ತೆ ಯಾವುದೂ ಇಲ್ಲವೆಂದು ವಾದಿಸುವರು. ಈ ವಾದವು ಕೇವಲ ಆಪಾತರಮಣೀಯ ; ಈ ವಾದಿಗಳು ಭೋಗ-ಐಶ್ವರ್ಯಗಳಲ್ಲಿ ಮಾತ್ರವೇ ಪ್ರಸಕ್ತರು ; ಭೋಗೈಶ್ವರ್ಯ ವಿಷಯವಾದ ವಾದದಿಂದ ಅವರ ಮನಸ್ಸು ಅಪಹೃತವಾಗಿ ಕಾಮದಲ್ಲಿಯೇ ಪ್ರವಣವಾಗಿದೆ. ಆದುದರಿಂದ ಅವರೆಲ್ಲರೂ ಸ್ವರ್ಗ ಮಾತ್ರದಲ್ಲಿಯೇ ಪರಾಯಣರಾಗಿದ್ದಾರೆ. (ತತ್ತ್ವಜ್ಞಾನರಹಿತರಾದುದರಿಂದ) ಅಂಥ ಕಾಮಾಸಕ್ತರ ಮನಸ್ಸಿನಲ್ಲಿ ಆತ್ಮಸ್ವರೂಪದ ನಿಶ್ಚಯದಿಂದ ಕೂಡಿರುವ ಮೋಕ್ಷ ಸಾಧನವಾದ ಕರ್ಮಗಳ ವಿಚಾರವು ಎಂದೂ ಮೂಡುವುದಿಲ್ಲ. (ಆದುದರಿಂದ ಮೋಕ್ಷವನ್ನು ಬಯಸುವವನು ಸ್ವರ್ಗಾದಿ ಕಾಮ್ಯ ಕರ್ಮಗಳಲ್ಲಿ ಆಸಕ್ತನಾಗಕೂಡದು.)

(ಸಂಗತಿ : ಹೀಗೆ ಅತ್ಯಲ್ಪ ಫಲಗಳನ್ನೂ, ಪುನರ್ಜನ್ಮಗಳನ್ನೂ ತರುವಂತಹ ಕರ್ಮಗಳನ್ನು, ಸಾವಿರಾರು ಮಾತಾ ಪಿತೃಗಳ ವಾತ್ಸಲ್ಯಕ್ಕಿಂತ ಮಿಗಿಲಾದ ವಾತ್ಸಲ್ಯವುಳ್ಳವುಗಳಾಗಿ ಆತ್ಮೋಜ್ಜೀವನದಲ್ಲಿ ಪ್ರವೃತ್ತಗಳಾದ ವೇದಗಳು ಏಕೆ ಹೇಳುತ್ತವೆ? ವೇದಗಳು ಹೇಳುವುದನ್ನು ಬಿಡುವುದು ತಾನೆ ಹೇಗೆ ?—ಎಂದರೆ, ಹೇಳುತ್ತಾನೆ.)

**ತ್ರೈಗುಣ್ಯ ವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।**
**ನಿರ್ದ್ವನ್ದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥**
**ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ ।**
**ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಪಶ್ಚಿತಃ ॥ ೪೬ ॥**

(ನಿರತಿಶಯವಾತ್ಸಲ್ಯವುಳ್ಳವುಗಳಾದುದರಿಂದಲೇ,) ವೇದಗಳು ಸತ್ತ್ವರಜಸ್ತಮೋಗುಣ ಪ್ರಚುರರಾದವರೆಲ್ಲರಿಗೂ ಆಯಾ ಅಧಿಕಾರಕ್ಕೆ ತಕ್ಕಂತೆ ಹಿತವನ್ನೇ ಬೋಧಿಸುತ್ತವೆ. (ಈಗ ಸತ್ತ್ವ ಗುಣ ಪ್ರಚುರನಾದ ನೀನು) ಆ ಸತ್ತ್ವಗುಣವನ್ನೇ ವೃದ್ಧಿಪಡಿಸಿಕೋ. ಆತ್ಮಸ್ವರೂಪ ಮತ್ತು ಅದರ ಪ್ರಾಪ್ತಿಗೆ ಉಪಾಯವಲ್ಲದುದನ್ನೆಲ್ಲ ಬಿಟ್ಟು ಆತ್ಮಸ್ವರೂಪಾನ್ವೇಷಣದಲ್ಲಿಯೇ ತೊಡಗಿದವನಾಗಿ ಸಕಲ ಸಾಂಸಾರಿಕಸ್ವಭಾವಗಳನ್ನು ಬಿಟ್ಟವನೂ ಸತ್ತ್ವ ಗುಣವೊಂದನ್ನೇ ವೃದ್ಧಿಪಡಿಸಿಕೊಳ್ಳುವವನೂ ಆಗು.

[ವೇದಗಳಲ್ಲಿ ಹೇಳಿರುವುದೆಲ್ಲವೂ ಎಲ್ಲರಿಗೂ ಗ್ರಾಹ್ಯವಲ್ಲ]

ಎಲ್ಲರಿಗಾಗಿಯೂ ಪರಿಕಲ್ಪಿತವಾಗಿ ನೀರಿನಿಂದ ತುಂಬಿ ತುಳುಕುತ್ತಿರುವ ಜಲಾಶಯದಲ್ಲಿ, ಬಾಯಾರಿದವನಿಗೆ ಹೇಗೆ ನೀರು ಮಾತ್ರವೇ ಗ್ರಾಹ್ಯವೋ ಹಾಗೆಯೇ ವೇದಗಳೊಳಗೆ ಮೋಕ್ಷಸಾಧಕವು ಯಾವುದೋ ಅದೊಂದೇ ಮೋಕ್ಷವನ್ನು ಬಯಸುವವನಿಗೆ ಗ್ರಾಹ್ಯವು.

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।**
**ಮಾ ಕರ್ಮಫಲಹೇತುರ್ಭೂಃ ಮಾ ತೇ ಸಂಗೋಽಸ್ತ್ವಕರ್ಮಣಿ ॥**

ಯಾವಾಗಲೂ ಸಾತ್ತ್ವಿಕನಾಗಿರುವ ನಿನಗೆ ವೇದೋಕ್ತವಾದ ಕರ್ಮಗಳಲ್ಲಿ ಮಾತ್ರವೇ, ಅಧಿಕಾರವೇ ಹೊರತು ಆ ಕರ್ಮಫಲಗಳಲ್ಲಿ

ಅಲ್ಲ. "ನಾನು ಕರ್ತೃವಲ್ಲ"ವೆಂಬ ನೆನಪಿನಿಂದ ಕೂಡಿ ಯುದ್ಧಾದಿ ಕರ್ಮಗಳನ್ನೇ ಮಾಡು, ಬಿಡಬೇಡ.

(ಸಂಗತಿ : ಇದನ್ನೇ ಸ್ಫುಟವಾಗಿ ಹೇಳುತ್ತಾನೆ)

**ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।**
**ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ॥**

ರಾಜ್ಯ-ಬಂಧು ಪ್ರಭೃತಿಗಳಲ್ಲಿ ಸಂಗವನ್ನು ಬಿಟ್ಟು, ಜಯ-ಅಪಜಯಗಳನ್ನು ಸಮವಾಗಿ ಭಾವಿಸಿ, (ಯುದ್ಧಾದಿ) ಕರ್ಮಗಳನ್ನು ಮಾಡು. ಈ ವಿಧವಾದ ಚಿತ್ತಸಾಮ್ಯವೇ ಯೋಗವೆನಿಸುವುದು.

(ಸಂಗತಿ : ಸಾಮ್ಯಾನುಸನ್ಧಾನ ರೂಪವಾದ ಈ ಚಿತ್ತಸಮಾಧಾನವನ್ನೇ ಮತ್ತೆ ಮತ್ತೆ ಏಕೆ ಹೇಳಿದೆ? ಎಂದರೆ ಹೇಳುತ್ತಾನೆ.)

**ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ ।**
**ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ॥ ೪೯ ॥**

ಇಂತಹ ಸಮತ್ವರೂಪ ಬುದ್ಧಿಯೋಗದಿಂದ ಆಚರಿಸುವ ಕರ್ಮವು ಸಾಂಸಾರಿಕ ದುಃಖಗಳನ್ನೆಲ್ಲ ನೀಗಿಸಿ ಮೋಕ್ಷವನ್ನು ದೊರಕಿಸುತ್ತದೆ. ಇತರ ವಿಧದ ಕರ್ಮಗಳು ಅಪರಿಮಿತ ದುಃಖ ರೂಪವಾದ ಸಂಸಾರದಲ್ಲಿ ಮುಳುಗಿಸುತ್ತವೆ. ಇವೆರಡಕ್ಕೂ ಇಷ್ಟೊಂದು ಅಂತರ ವಿರುವುದರಿಂದ, (ಮೇಲೆ ಹೇಳಿದ) ಚಿತ್ತ ಸಮಾಧಾನಕ್ಕೆ ಪ್ರಯತ್ನಿಸು. ಫಲದಲ್ಲಿ ಆಸೆಯಿಂದ ಕರ್ಮ ಮಾಡುವವರು ಸಂಸಾರ ಹೊಂದುವರು.

**ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ ।**
**ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಂ ॥**

(ಇಂತಹ) ಬುದ್ಧಿಯೋಗದಿಂದ ಕರ್ಮ ಮಾಡುವವನು ಬಂಧಕವಾದ ಪುಣ್ಯ ಪಾಪಗಳಿಂದ ಪಾರಾಗುವನು. ಆದುದರಿಂದ ನೀನು ಈ ಬುದ್ಧಿಯೋಗದಲ್ಲಿಯೇ ಉದ್ಯುಕ್ತನಾಗು ; ಇದು ಅತಿ ಸಾಮರ್ಥ್ಯದಿಂದ ಮಾತ್ರವೇ ಸಾಧ್ಯವಾದುದು.

**ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ ।**
**ಜನ್ಮಬನ್ಧವಿನಿರ್ಮುಕ್ತಾಃ ಪದಂ ಗಚ್ಛನ್ತ್ಯನಾಮಯಂ ॥ ೫೧ ॥**

ಬುದ್ಧಿಯೋಗದಿಂದ ಕರ್ಮಮಾಡುವವರು ಫಲದಲ್ಲಿ ಆಸೆಯಿಲ್ಲದೆ ಮಾಡುವವರಾದುದರಿಂದ ಸಂಸಾರವನ್ನು ನೀಗಿ ಮೋಕ್ಷವನ್ನು ಪಡೆಯುವರಷ್ಟೆ !

**ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ।**
**ತದಾ ಗನ್ತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥ ೫೨ ॥**

(ಈ ಪ್ರಕಾರದಿಂದ ಕರ್ಮಗಳನ್ನು ಆಚರಿಸುತ್ತ ಅದರಿಂದ ಕಲ್ಮಷಗಳನ್ನು ನೀಗಿದ) ನಿನ್ನ ಬುದ್ಧಿಯು ಮೋಹದಿಂದ ಯಾವಾಗ ಪಾರಾಗುವುದೋ ಆಗ ನಿನಗೇ, ಇದುವರಿಗೂ ತ್ಯಾಜ್ಯವೆಂದು ನಮ್ಮಿಂದ ಕೇಳಿದ ಫಲಗಳ ವಿಷಯದಲ್ಲಿಯೂ ಮತ್ತು ಇನ್ನೂ ಮುಂದೆ ಕೇಳಬೇಕಾಗಿರುವ ವಿಷಯದಲ್ಲಿಯೂ ನಿರ್ವೇದ ಹುಟ್ಟುವುದು.

(ಟಿಪ್ಪಣಿ : ಎಂದರೆ, ತ್ಯಾಜ್ಯದಲ್ಲಿಯ ಸಂಗ, ಗ್ರಾಹ್ಯವಾದುದರಲ್ಲಿರುವ ವೈತೃಷ್ಣ್ಯ–ಇವನ್ನು ಚಿಂತಿಸಿ ನಿನ್ನನ್ನೇ ನೀನು ನಿಂದಿಸಿಕೊಳ್ಳುವೆ ನಿರ್ವೇದ= ಸ್ವಾವಜ್ಞೆ ಅಥವಾ ಸ್ವಾವಮಾನನ)

(ಸಂಗತಿ : " ಯೋಗೇ ತ್ವಿಮಾಂ ಶೃಣು "—(2-39) ಮುಂತಾದುದರಿಂದ ಹೇಳಿದ ಆತ್ಮಯಾಥಾತ್ಮ್ಯ ಜ್ಞಾನ ಪೂರ್ವಕ ಬುದ್ಧಿ ವಿಶೇಷ ಸಂಸ್ಕೃತವಾದ ಧರ್ಮಾನುಷ್ಠಾನಕ್ಕೆ ಉದ್ದೇಶ್ಯ ಭೂತವಾದ ಆತ್ಮಾವಲೋಕನವೆಂಬ ಫಲವನ್ನು ಹೇಳುತ್ತಾನೆ.)

**ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯತಿ-ನಿಶ್ಚಲಾ ।**
**ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ॥ ೫೩ ॥**

ನನ್ನಿಂದ ಕೇಳಿ ದೃಢವಾಗಿ ನಿನಗೆ ತಿಳಿದಿರುವ ಆತ್ಮ ತತ್ತ್ವವು (ಅಸಂಗ ಕರ್ಮಾಚರಣೆಯಿಂದ ನಿರ್ಮಲವಾದ) ನಿನ್ನ ಮನಸ್ಸಿನಲ್ಲಿ ಎಂದು ನಿಶ್ಚಲವಾಗಿ ನಿಲ್ಲುವುದೋ ಅಂದು ಆತ್ಮಾವಲೋಕನವನ್ನು ಪಡೆಯುವೆ.

(ಟಿಪ್ಪಣಿ : ಶಾಸ್ತ್ರದಿಂದ ಆತ್ಮಜ್ಞಾನ ಹುಟ್ಟುವುದು. ಈ ಆತ್ಮಜ್ಞಾನ ಪೂರ್ವಕವಾಗಿ ಮಾಡುವ ಕರ್ಮಯೋಗದಿಂದ ಸ್ಥಿತಪ್ರಜ್ಞತೆಯೆಂಬ ಜ್ಞಾನನಿಷ್ಠೆಯುಂಟಾಗುವುದು. ಈ ಸ್ಥಿತಪ್ರಜ್ಞತೆಯು ಆತ್ಮಾವ

ಲೋಕನ (ಯೋಗ) ವನ್ನು ಸಾಧಿಸುವುದು. ಇದರಿಂದ, ಮೊದಲು ಶಾಸ್ತ್ರತಃ ತತ್ತ್ವಜ್ಞಾನ ಅನಂತರ ಸ್ಮೃತಿಸಂತತಿ ರೂಪವಾದ ಉಪಾಸನ, ಅನಂತರ ಸಾಕ್ಷಾತ್ಕಾರಗಳೆಂಬ ಜ್ಞಾನದ ಪರ್ವ ಭೇದಗಳನ್ನು ತಿಳಿಸಿದಂತಾಯಿತು.)

(ಸಂಗತಿ: ಈಗ, ಈ ಸ್ಥಿತಪ್ರಜ್ಞತೆಯ ಸ್ವರೂಪವನ್ನೂ, ಸ್ಥಿತಪ್ರಜ್ಞನ ಅನುಷ್ಠಾನ ಪ್ರಕಾರವನ್ನೂ ಅರ್ಜುನನು ಪ್ರಶ್ನಿಸುತ್ತಾನೆ.)

**ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ ।**
**ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಂ ? ॥ ೫೪ ॥**

ಮನಸ್ಸನ್ನು ವಶಪಡಿಸಿ ಕೊಂಡಿರುವ ಸ್ಥಿತ ಪ್ರಜ್ಞನ ಸ್ವರೂಪವಾವುದು ? ಅವನು ಹೇಗೆ ಮಾತಾಡುವನು ? ಹೇಗೆ ಕುಳಿತು ಕೊಳ್ಳುವನು ? ಹೇಗೆ ನಡೆಯುವನು ? (ಎಂದರೆ, ಸ್ಥಿತಪ್ರಜ್ಞನ ವಾಚಿಕ, ಮಾನಸಿಕ, ಕಾಯಿಕ ಪ್ರವೃತ್ತಿಗಳನ್ನು ಕೇಳಿದಂತಾಯಿತು.)

(ಸಂಗತಿ: ಸ್ಥಿತಪ್ರಜ್ಞನ ಪ್ರವೃತ್ತಿಗಳನ್ನು ಹೇಳುವುದರಿಂದ ಅವನ ಸ್ವರೂಪವನ್ನೂ ಹೇಳಿದಂತಾಗುತ್ತದೆಯೆಂದು, ಅವನ ವೃತ್ತಿವಿಶೇಷವನ್ನು ಭಗವಂತನು ಹೇಳುತ್ತಾನೆ )

**ಶ್ರೀ ಭಗವಾನುವಾಚ—**

**ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್ ।**
**ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥ ೫೫ ॥**

ಭಗವಂತನೆಂದನು—

ಆತ್ಮವೊಂದರಲ್ಲಿಯೇ ನೆಲೆಸಿದ ಮನಸ್ಸಿನಿಂದ ಸಂತೋಷಗೊಂಡು ಮನಸ್ಸಿನಲ್ಲಿರುವ ಬೇರೆ ಕಾಮಗಳನ್ನೆಲ್ಲ ಅವು ಮತ್ತೆ ತಲೆಯೆತ್ತದಂತೆ ಯಾವಾಗ ಬಿಟ್ಟು ಬಿಡುತ್ತಾನೆಯೋ, ಆಗ ಸ್ಥಿತಪ್ರಜ್ಞನೆನಿಸುತ್ತಾನೆ.

[ಟಿಪ್ಪಣಿ: ಈ ವಿಧವಾದ ಜ್ಞಾನನಿಷ್ಠೆಗೆ ವಶೀಕಾರ ಸಂಜ್ಞೆಯೆಂದು ಹೆಸರು. ಆತ್ಮೈಕರತಿತ್ವವೇ ಅದರ ಸ್ವರೂಪ. ಇದು ಜ್ಞಾನನಿಷ್ಠೆಯ (ಮೇರೆ) ಕಾಷ್ಠೆ. ಅಂದರೆ ಜ್ಞಾನನಿಷ್ಠೆಯ 4 ನೆಯ ಪರ್ವವಿದು.]

(ಸಂಗತಿ : ಅನಂತರ ಜ್ಞಾನನಿಷ್ಠೆಯ ಕಾಷ್ಠೆಯಾದ ವಶೀಕಾರ ಸಂಜ್ಞೆಗಿಂತ ಕೆಳಮಟ್ಟದ್ದಾದ ಅಂದರೆ ಮೂರನೆಯ ಅವಸ್ಥೆಯಾದ ಏಕೇಂದ್ರಿಯ ಸಂಜ್ಞೆಯನ್ನು ಮುಂದೆ ಹೇಳುತ್ತಾನೆ.)

**ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।**
**ವೀತರಾಗಭಯಕ್ರೋಧಃ ಸ್ಥಿರಧೀರ್ಮುನಿರುಚ್ಯತೇ ॥ ೫೬ ॥**

ದುಃಖಕ್ಕೆ ಕಾರಣಗಳು ಒದಗಿದಾಗ ಕುಗ್ಗದೆ ಪ್ರಿಯವಾದುದಕ್ಕೆ ಮನಸೋತು ಹಿಗ್ಗದೆ, ಆಸೆ, ಭಯ, ಕೋಪಗಳನ್ನು ತಾಳದೆ, ಆತ್ಮವನ್ನೇ ನೆನೆಯುತ್ತಿರುವವನು ಸ್ಥಿತಪ್ರಜ್ಞನೆನಿಸುತ್ತಾನೆ.

(ಟಿಪ್ಪಣಿ : ರಾಗ = ಲಭಿಸದುದಕ್ಕೆ ಆಸೆಪಡುವುದು. ಪ್ರಿಯ ವಿಶ್ಲೇಷ ಮತ್ತು ಅಪ್ರಿಯಾಗಮನಗಳಿಗೆ ಕಾರಣಗಳನ್ನು ಕಾಣುವುದರಿಂದ ಉಂಟಾಗುವ ದುಃಖವೇ ಭಯವೆನಿಸುವುದು. ಈ ಭಯಕ್ಕೆ ಕಾರಣವಾದ ವ್ಯಕ್ತಿಯ ವಿಷಯದಲ್ಲಿ ಉಂಟಾಗುವ ಮನೋವಿಕಾರವೇ ಕ್ರೋಧವೆನಿಸುವುದು.)

(ಸಂಗತಿ : ಈ ಮೂರನೆಯದಾದ ಏಕೇಂದ್ರಿಯ ಸಂಜ್ಞೆಗಿಂತಲೂ ಕೆಳಮಟ್ಟದ್ದಾದ ವ್ಯತಿರೇಕಸಂಜ್ಞೆಯನ್ನು ಎಂದರೆ ಜ್ಞಾನನಿಷ್ಠೆಯ ಎರಡನೆಯ ಅವಸ್ಥೆಯನ್ನು ಮುಂದೆ ಹೇಳುತ್ತಾನೆ.)

**ಯಸ್ಸರ್ವತ್ರಾನಭಿಸ್ನೇಹಃ ತತ್ತತ್ಪ್ರಾಪ್ಯ ಶುಭಾಶುಭಂ ।**
**ನಾಭಿನನ್ದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೭ ॥**

ಯಾವನು ಪ್ರಿಯಗಳೆಲ್ಲದರಲ್ಲಿಯೂ ಆಸಕ್ತಿಯನ್ನಿಡದೆ ಶುಭವನ್ನು ಪಡೆದು ಹರ್ಷಿತನಾಗನೋ ಮತ್ತು ಅಶುಭವನ್ನು ಪಡೆದು ದ್ವೇಷಿಸನೋ ಅವನೂ ಸ್ಥಿತಪ್ರಜ್ಞನು.

(ಸಂಗತಿ : ಮೇಲೆ ಹೇಳಿದ ವ್ಯತಿರೇಕ ಸಂಜ್ಞೆಗಿಂತ ಕೆಳಮಟ್ಟದ್ದಾದ ಯತಮಾನ ಸಂಜ್ಞೆಯೆಂಬ, ಜ್ಞಾನನಿಷ್ಠೆಯ ಮೊದಲನೆಯ ಅವಸ್ಥೆಯನ್ನು ಮುಂದೆ ಹೇಳುತ್ತಾನೆ.)

**ಯದಾ ಸಂಹರತೇ ಚಾಯಂ ಕೂರ್ಮೋಽಂಗಾನೀವ ಸರ್ವಶಃ ।**
**ಇನ್ದ್ರಿಯಾಣೀನ್ದ್ರಿಯಾರ್ಥೇಭ್ಯಃ ತಸ್ಯ ಪ್ರಜ್ಞಾ ಪ್ರತಿಷ್ಠಿತಾ॥೫೮॥**

ಆವೆಯು ತನ್ನ ಅವಯವಗಳನ್ನು ಎಲ್ಲ ಕಡೆಯಿಂದ ಹಿಂದೆಗೆಯುವಂತೆ, ಯಾವಾಗ ಇವನು ಇಂದ್ರಿಯಗಳನ್ನು ಅವುಗಳ ವಿಷಯಗಳಿಂದ ಹಿಂದೆಗೆದು, ಮನಸ್ಸನ್ನು ಆತ್ಮದಲ್ಲಿಯೇ ನಿಲ್ಲಿಸಿಕೊಳ್ಳುತ್ತಾನೆಯೋ, ಆಗ ಅವನ ಬುದ್ಧಿಯು ಸ್ಥಿರವಾದುದು.

(ಟಿಪ್ಪಣಿ: ಸ್ಥಿತಪ್ರಜ್ಞನ ವಿಷಯವಾದ ಈ ನಾಲ್ಕು ಶ್ಲೋಕಗಳೂ ಅವನ ನಾಲ್ಕು ಅವಸ್ಥಾ ವಿಷಯಗಳೆಂದು ಭಾವಿಸಿ, ಆ ನಾಲ್ಕು ಅವಸ್ಥೆ (ಪರ್ವ) ಗಳನ್ನೂ ಒಂದೊಂದಾಗಿ ಅವರೋಹಣ ಕ್ರಮದಲ್ಲಿ ಹೇಳಿವೆ–ಆ ನಾಲ್ಕು ಅವಸ್ಥೆಗಳು ಯಾವುವೆಂದರೆ; (i) ವಶೀಕಾರಸಂಜ್ಞೆ (ii) ಏಕೇಂದ್ರಿಯಸಂಜ್ಞೆ (iii) ವ್ಯತಿರೇಕಸಂಜ್ಞೆ (iv) ಯತಮಾನಸಂಜ್ಞೆ. ಇವುಗಳಲ್ಲಿ ವಶೀಕಾರಸಂಜ್ಞೆಯೇ ಸ್ಥಿತಪ್ರಜ್ಞನ ಪರಿಪಕ್ವವಾದ ಅವಸ್ಥೆ-ಆತ್ಮರತಿತ್ವವೇ ಇದರ ಸ್ವರೂಪ. "ದೃಷ್ಟಾನುಶ್ರವಿಕವಿಷಯವಿತೃಷ್ಣಸ್ಯ ವಶೀಕಾರ ಸಂಜ್ಞಾ ವೈರಾಗ್ಯಂ" (ಪಾ.ಸೂ. 1–16) ಐಹಿಕಾಮುಷ್ಮಿಕ ಸಕಲ ಫಲಗಳಿಂದ ವಿಮುಖನಾದವನಿಗೆ ಆ ಫಲಗಳಲ್ಲಿ ವಾಸನೆಯ ಸಹಿತ ರಾಗವನ್ನು ಬಿಟ್ಟು ಇರುವುದೇ ವಶೀಕಾರ ಸಂಜ್ಞೆಯೆನಿಸುವುದು. ಏಕೇಂದ್ರಿಯ ಸಂಜ್ಞೆಯೆಂಬ ಮೂರನೆಯ ಅವಸ್ಥೆಯಲ್ಲಿ, ಉದ್ವೇಗ, ಸ್ಪೃಹೆ ಮುಂತಾದುವು ಇಲ್ಲದುದರಿಂದ ನಾಲ್ಕನೆಯ ಅವಸ್ಥೆಯಾದ ವಶೀಕಾರಸಂಜ್ಞೆಯ ಸಾಮ್ಯವಿದ್ದರೂ, ಔತ್ಸುಕ್ಯ ಮಾತ್ರ ಕ್ಷಮವಾದ ವಾಸನಾಶೇಷವು ಬೂದಿ ಮುಚ್ಚಿದ ಕೆಂಡದಂತೆ ಉಳಿದಿರುವುದರಿಂದ, ಈ ಏಕೇಂದ್ರಿಯಸಂಜ್ಞೆಯೆಂಬುದು ವಶೀಕಾರಸಂಜ್ಞೆಗಿಂತ ಕೆಳಮಟ್ಟದ್ದಾಗಿರುವುದು. ಇದಕ್ಕಿಂತ ಕೆಳಮಟ್ಟದ್ದು ಎರಡನೆಯದಾದ ವ್ಯತಿರೇಕಸಂಜ್ಞೆಯೆಂಬುದು. ಇದರ ಮೇಲಿನ ಏಕೇಂದ್ರಿಯ ಸಂಜ್ಞೆಯಲ್ಲಿ ದೃಶ್ಯಮಾನವಾದ ಪ್ರಿಯಾದಿಗಳಲ್ಲಿಯೂ ನಿಸ್ಸಂಗತೆಯಿರುವುದು. ಈ ವ್ಯತಿರೇಕಸಂಜ್ಞೆಯಾದರೋ-ಸಂಗಲೇಶದಿಂದ ಅನುಭವಿಸುತ್ತಿರುವ ಪ್ರಿಯಾದಿಗಳಲ್ಲಿ ಅತಿ ಸ್ನೇಹವಿಲ್ಲದಿರುವಿಕೆ. ಹೀಗೆ ನಿಸ್ಸಂಗತೆ ಸಂಗಲೇಶವಿರುವುದು–ಇವೇ ಈ ಎರಡು ಅವಸ್ಥೆಗಳಿಗೂ ಭೇದ. ಇವೆಲ್ಲಕ್ಕೂ

ಕೆಳಗಿನದು ಯತಮಾನಸಂಜ್ಞೆ ಯೆಂಬ ಪ್ರಥಮಾವಸ್ಥೆ. ರಾಗವು ಪ್ರಚುರ ವಾಗಿದ್ದರೂ, ಅದನ್ನು ತಡೆಯುವುದರಲ್ಲಿ ಉದ್ಯೋಗಿಸುವಿಕೆಯೇ ಯತ ಮಾನಸಂಜ್ಞೆಯೆನಿಸುವುದು. ಹೀಗೆ (i) ಕಾಮಗಳಿದ್ದರೂ ಅವು ಹಾಗೆ ತೋರದಿರುವುದು, (ii) ಕಾಮಗಳಲ್ಲಿ ಕಾಮಗಳೆಂಬ ಭಾವನೆ ತೋರಿ ದರೂ ಅದರಲ್ಲಿ ನಿಸ್ಸಂಗತೆ, (iii) ಸಂಗಲೇಶದಿಂದ ಕಾಮಗಳನ್ನು ಅನುಭವಿಸುತ್ತಿರುವಾಗಲೂ ಅವುಗಳಲ್ಲಿ ಅತಿ ಸ್ನೇಹವಿಲ್ಲದಿರುವುದು (iv) ರಾಗವು ಪ್ರಚುರವಾಗಿದ್ದರೂ ಅದರ ನಿರೋಧ ಸಂರಂಭ—ಇವೇ ಸ್ಥಿತ ಪ್ರಜ್ಞನ ಈ ನಾಲ್ಕು ಅವಸ್ಥೆಗಳಿಗೂ ಪರಸ್ಪರ ವ್ಯತ್ಯಾಸ.)

(ಸಂಗತಿ: ಈಗ, ಜ್ಞಾನ ನಿಷ್ಠೆಯನ್ನು ಪಡೆಯುವುದು ಬಹು ಕಷ್ಟವೆಂದೂ, ಅದನ್ನು ಪಡೆಯುವ ಉಪಾಯವು ಯಾವುದೆಂದೂ ತಿಳಿಸುತ್ತಾನೆ.)

**ವಿಷಯಾ ವಿನಿವರ್ತನ್ತೇ ನಿರಾಹಾರಸ್ಯ ದೇಹಿನಃ ।**
**ರಸವರ್ಜಂ ರಸೋऽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥ ೫೯ ॥**

ಇಂದ್ರಿಯಗಳನ್ನು ಬಿಗಿಹಿಡಿಯುವುದರಿಂದ ವಿಷಯಗಳೇನೋ ದೂರ ವಾಗುತ್ತವೆ. ಆದರೆ ಅವುಗಳ ಮೇಲಿನ ಆಸೆಯಾದರೋ ಉಳಿದಿರುವುದು. ಆತ್ಮನ ದರ್ಶನವಾದಲ್ಲಿ ಈ ಆಸೆಯೂ ಹೋಗುತ್ತದೆ. (ಆತ್ಮದ ದರ್ಶನ ವಾದ ಹೊರತು ವಿಷಯರಾಗ ಹೋಗುವುದಿಲ್ಲವೆಂದು ಭಾವ. ಏಕೆಂದರೆ, ಈ ಆತ್ಮವು ಸುಖತರವಾದುದು.)

(ಸಂಗತಿ: ವಿಷಯರಾಗವು ನಿವೃತ್ತವಾಗದೆ, ಇಂದ್ರಿಯ ಜಯವು ಸಾಧ್ಯವಿಲ್ಲವೆನ್ನುತ್ತಾನೆ.)

**ಯತತೋऽಹ್ಯಪಿ ಕೌನ್ತೇಯ ಪುರುಷಸ್ಯ ವಿಪಶ್ಚಿತಃ ।**
**ಇಂದ್ರಿಯಾಣಿ ಪ್ರಮಾಥೀನಿ ಹರನ್ತಿ ಪ್ರಸಭಂ ಮನಃ ॥ ೬೦ ॥**

(ವಿಷಯರಾಗವು ನಿವೃತ್ತವಾಗದಿದ್ದಾಗ) ಇಂದ್ರಿಯ ನಿಗ್ರಹಕ್ಕೆ ಯತ್ನಿಸುವ ಪುರುಷನು ಜ್ಞಾನಿಯಾಗಿದ್ದರೂ, ಬಲಾಢ್ಯವಾದ ಇಂದ್ರಿಯ ಗಳು ಅವನ ಮನಸ್ಸನ್ನು ಬಲಾತ್ಕಾರವಾಗಿ ಎಳೆದೊಯ್ಯುವುವು.

(ಟಿಪ್ಪಣಿ : ಹೀಗೆ ಇಂದ್ರಿಯಜಯವು ಆತ್ಮದರ್ಶನದ ಅಧೀನ. ಆತ್ಮದರ್ಶನವು ಇಂದ್ರಿಯಜಯದ ಅಧೀನ. ಆದುದರಿಂದ ಜ್ಞಾನನಿಷ್ಠೆಯನ್ನು ಪಡೆಯುವುದು ಅಸಾಧ್ಯವೆಂದು ಭಾವ.)

(ಸಂಗತಿ : ಹೀಗೆ ಅನ್ಯೋನ್ಯಾಶ್ರಯದೋಷವಿರುವಾಗ, ಇಂದ್ರಿಯ ಜಯದಿಂದಲೇ ಆತ್ಮದರ್ಶನವು ಸಾಧ್ಯವೆಂದು ಹಿಂದೆ ಹೇಳಿದುದೇಕೆ ? - ಎಂದರೆ, ಆತ್ಮದರ್ಶನವಿಲ್ಲದೆಯೇ ಇಂದ್ರಿಯಜಯವು ಸಿದ್ಧಿಸುವ ಉಪಾಯವನ್ನು ಹೇಳಿ, ಅನ್ಯೋನ್ಯಾಶ್ರಯ ದೋಷವೆಂಬ ಶಂಕೆಯನ್ನು ಈಗ ಪರಿಹರಿಸುತ್ತಾನೆ.)

**ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರಃ ।**
**ವಶೇ ಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೬೧ ॥**

(ವಿಷಯರಾಗವುಳ್ಳೋಣದರಿಂದ ದುರ್ಜಯಗಳಾದ) ಆ ಎಲ್ಲ ಇಂದ್ರಿಯಗಳನ್ನೂ ವಿಷಯಸ್ಪರ್ಶಮಾಡದ ಹಾಗೆ ತಡೆದು, ಶುಭಾಶ್ರಯನಾದ ನನ್ನಲ್ಲಿ ಮನಸ್ಸನ್ನು ನೆಲೆಗೊಳಿಸಿ ಸಮಾಧಾನಚಿತ್ತನಾಗಿರಬೇಕು.) (ಇದರಿಂದ ಮನಸ್ಸಿನ ಕಲ್ಮಷಗಳೆಲ್ಲ ದಗ್ಧವಾಗಿ ಅದು ವಿಷಯರಾಗದಿಂದ ನಿವೃತ್ತವಾಗುವುದು. ಆಗ ಅದಕ್ಕೆ ಇಂದ್ರಿಯಗಳನ್ನು ವಶಪಡಿಸಿಕೊಳ್ಳಲು ಸಾಧ್ಯ. ಈ ಇಂದ್ರಿಯ ಜಯದಿಂದ ಆತ್ಮದರ್ಶನವೂ ಸಾಧ್ಯವಾಗುವುದು. ಆದುದರಿಂದ) ಇಂದ್ರಿಯಗಳು ವಶವಾದವನ ಪ್ರಜ್ಞೆಯು ಸ್ಥಿರವಾದುದು.

**ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ ।**
**ಸಂಗಾತ್ಸಂಜಾಯತೇಕಾಮಃಕಾಮಾತ್ ಕ್ರೋಧೋಽಭಿಜಾಯತೇ**
**ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿವಿಭ್ರಮಃ ।**
**ಸ್ಮೃತಿಭ್ರಂಶಾತ್ ಬುದ್ಧಿನಾಶಃ ಬುದ್ಧಿನಾಶಾತ್ ಪ್ರಣಶ್ಯತಿ ॥೬೩॥**

ಹೀಗೆ ಮನಸ್ಸನ್ನು ನನ್ನಲ್ಲಿರಿಸದೆ ಕೇವಲ ಸ್ವಪ್ರಯತ್ನವನ್ನೇ ನಂಬಿ ಇಂದ್ರಿಯಗಳನ್ನು ಜಯಿಸತೊಡಗಿದವನಿಗೆ ವಿಷಯಗಳ ಚಿಂತೆಯು ತಪ್ಪದು. ಇದರಿಂದ ವಿಷಯಗಳಲ್ಲಿ ಸಂಗವು ಹೆಚ್ಚುವುದು. ಈ ವಿಷಯ ಸಂಗದಿಂದ ಕಾಮವೂ, ಕಾಮದಿಂದ ಕೋಪವೂ, ಕೋಪದಿಂದ ಕಾರ್ಯಾ

ಕಾರ್ಯ ವಿವೇಕ ಶೂನ್ಯತೆಯೂ, ಇದರಿಂದ ಸ್ಮೃತಿ ತಪ್ಪುವಿಕೆಯೂ, ಈ ಸ್ಮೃತಿ ತಪ್ಪುವಿಕೆಯಿಂದ ಆತ್ಮಜ್ಞಾನ ವ್ಯವಸಾಯ ರೂಪವಾದ ಬುದ್ಧಿಯ ನಾಶವೂ ಉಂಟಾಗುವುದು. ಬುದ್ಧಿನಾಶದಿಂದ ಕೆಟ್ಟು ಹೋಗುವನು. (ಮತ್ತೆ ಸಂಸಾರದಲ್ಲಿಯೇ ಮಗ್ನನಾಗುವನು.)

**ರಾಗದ್ವೇಷವಿಯುಕ್ತೈಸ್ತು ವಿಷಯಾನಿನ್ದ್ರಿಯೈಶ್ಚರನ್ ।**
**ಆತ್ಮವಶ್ಯೈರ್ವಿಧೇಯಾತ್ಮಾ ಪ್ರಸಾದಮಧಿಗಚ್ಛತಿ ॥ ೬೪ ॥**

(ಹಾಗಲ್ಲದೆ ಸರ್ವೇಶ್ವರನೂ ಶುಭಾಶ್ರಯನೂ ಆದ ನನ್ನಲ್ಲಿ ಮನಸ್ಸಿಟ್ಟು ನಿಷ್ಕಲ್ಮಷವಾಗಿರೋಣದರಿಂದ) ರಾಗ ದ್ವೇಷಗಳಿಲ್ಲದೆ ವಶ್ಯವಾಗಿರುವ ಇಂದ್ರಿಯಗಳಿಂದ ವಿಷಯಗಳನ್ನು ಅನಾದರಿಸಿ ಮನಸ್ಸನ್ನು ವಶಪಡಿಸಿಕೊಂಡಿರುವವನು ಮನಶ್ಶುದ್ಧಿಯನ್ನು ಪಡೆಯುವನು.

**ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ ।**
**ಪ್ರಸನ್ನಚೇತಸೋಹ್ಯಾಶು ಬುದ್ಧಿಃ ಪರ್ಯವತಿಷ್ಠತೇ ॥ ೬೫ ॥**

ಮನಶ್ಶುದ್ಧಿಯಿಂದ ಇವನಿಗೆ ದುಃಖಗಳೆಲ್ಲ ನೀಗುವುವು. ಆತ್ಮ ಸಂದರ್ಶನಕ್ಕೆ ವಿರೋಧವಾದ ದೋಷಗಳಿಂದ ಪಾರಾದ ಮನಸ್ಸಿಗೆ ಆತ್ಮವನ್ನು ವಿಶದವಾಗಿ ತೋರಿಸಿಕೊಡುವ ಬುದ್ಧಿಯು ಬೇಗನೆ ಉಂಟಾಗುವುದು.

**ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।**
**ನ ಚಾಭಾವಯತಃ ಶಾನ್ತಿರಶಾನ್ತಸ್ಯ ಕುತಃ ಸುಖಂ ॥ ೬೬ ॥**

ನನ್ನಲ್ಲಿ ಮನಸ್ಸಿಡದೆ ಸ್ವತಂತ್ರವಾಗಿ ಇಂದ್ರಿಯ ನಿಯಮನದಲ್ಲಿ ತೊಡಗಿದವನಿಗೆ ಆತ್ಮವನ್ನು ವಿಶದವಾಗಿ ತೋರಿಸಿಕೊಡುವ ಬುದ್ಧಿಯು ಇರುವುದಿಲ್ಲ. ಇಂತಹ ಬುದ್ಧಿಯಿಲ್ಲದುದರಿಂದಲೇ ಅವನಿಗೆ ಅದರ ಭಾವನೆಯೂ ಇರುವುದಿಲ್ಲ. ಭಾವನೆಯಿಲ್ಲದವನಿಗೆ ವಿಷಯಾಸಕ್ತಿ ಶಾಂತವಾಗದು. ಅಶಾಂತನಿಗೆ ನಿತ್ಯವೂ ನಿರತಿಶಯವೂ ಆದ ಸುಖವೆಲ್ಲಿಯದು ?

(ಸಂಗತಿ : ಮೇಲೆ ಹೇಳಿದ ರೀತಿಯಲ್ಲಿ ಇಂದ್ರಿಯ ನಿಯಮನವನ್ನು ಮಾಡದವನಿಗೆ ಬರುವ ಅನರ್ಥವನ್ನೇ ಮತ್ತೆಯೂ ಹೇಳುತ್ತಾನೆ.)

**ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನುವಿಧೀಯತೇ ।**
**ತದಸ್ಯ ಹರತಿ ಪ್ರಜ್ಞಾಂ ವಾಯುರ್ನಾವಮಿವಾಮ್ಭಸಿ ॥ ೬೭ ॥**

ವಿಷಯಾಸಕ್ತವಾದ ಇಂದ್ರಿಯಗಳ ಹಿಂದೆ ಹರಿಯುವ ಮನಸ್ಸು ನೀರಿನಲ್ಲಿ ಗಾಳಿಯು ನಾವೆಯನ್ನು ಎಳೆದೊಯ್ಯುವಂತೆ ಇವನ ಬುದ್ಧಿಯನ್ನು ಎಳೆದೊಯ್ಯುವುದು.

**ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ ।**
**ಇನ್ದ್ರಿಯಾಣೀನ್ದ್ರಿಯಾರ್ಥೇಭ್ಯಃ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥**

ಆದುದರಿಂದ, ಎಲೈ ಮಹಾಬಾಹುವೇ! (ಶುಭಾಶ್ರಯನಾದ ನನ್ನಲ್ಲಿ ನೆಟ್ಟ ಮನಸ್ಸಿನಿಂದ) ಇಂದ್ರಿಯಗಳನ್ನು ಎಲ್ಲ ವಿಷಯಗಳ ಕಡೆಯಿಂದಲೂ ನಿಗ್ರಹಿಸುವವನ ಬುದ್ಧಿಯು ಆತ್ಮ ವಿಷಯದಲ್ಲಿ ಸ್ಥಿರವಾಗಿ ನಿಲ್ಲುವುದು.

(ಸಂಗತಿ: ಹೀಗೆ ನಿಯತೇಂದ್ರಿಯನೂ ಪ್ರಸನ್ನ ಮನಸ್ಕನೂ ಆದವನಿಗೆ ಸಿದ್ಧಿಸುವ ಫಲವನ್ನು ಹೇಳುತ್ತೇನೆ.)

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ ।**
**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ ॥**

ಇಂದ್ರಿಯಗಳನ್ನು ವಶಗೈದ ಇಂತಹ ಯೋಗಿಯು, ಮಿಕ್ಕವರಿಗೆ ರಾತ್ರಿಯಂತೆ ಅಪ್ರಕಾಶವಾಗಿರುವ ಆತ್ಮವನ್ನು ಅನುಭವಿಸುತ್ತಿರುವನು ಮಿಕ್ಕವರು ಅನುಭವಿಸುವ ಶಬ್ದಾದಿ ವಿಷಯಗಳಾದರೋ ಅವನಿಗೆ ರಾತ್ರಿಯಂತೆ ಅಪ್ರಕಾಶವಾಗಿರುವುದು.

**ಆಪೂರ್ಯಮಾಣಮಚಲಪ್ರತಿಷ್ಠಂ**
**ಸಮುದ್ರಮಾಪಃ ಪ್ರವಿಶನ್ತಿ ಯದ್ವತ್ ।**
**ತದ್ವತ್ಕಾಮಾ ಯಂ ಪ್ರವಿಶನ್ತಿ ಸರ್ವೇ**
**ಸ ಶಾನ್ತಿಮಾಪ್ನೋತಿ ನ ಕಾಮಕಾಮೀ ॥೭೦॥**

ತಾನಾಗಿ ತುಂಬುತ್ತಿರುವ ಏಕಾಕಾರವಾದ ಸಮುದ್ರವು ನದಿಗಳ ನೀರು ಬಂದು ಸೇರಲಿ, ಸೇರದಿರಲಿ, ಏರು ತಗ್ಗುಗಳಿಲ್ಲದಿರುವಂತೆಯೇ, ಆತ್ಮಾವಲೋಕನದಿಂದಲೇ ತೃಪ್ತನಾದವನು ಶಬ್ದಾದಿವಿಷಯಗಳು

ಗೋಚರಿಸಲಿ, ಗೋಚರಿಸದಿರಲಿ, ಯಾವ ವಿಕಾರವನ್ನೂ ಹೊಂದುವುದಿಲ್ಲ. ಅವನಿಗೇನೇ ಶಾಂತಿ ಲಭಿಸುವುದು. ಯಾವನು ಶಬ್ದಾದಿಗಳಿಂದ ವಿಕಾರ ಹೊಂದುವನೋ ಅವನಿಗೆ ಎಂದೂ ಶಾಂತಿಯಿರದು.

**ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾಂಶ್ಚರತಿ ನಿಸ್ಪೃಹಃ ।**
**ನಿರ್ಮಮೋ ನಿರಹಂಕಾರಃ ಸ ಶಾನ್ತಿಮಧಿಗಚ್ಛತಿ ॥ ೭೧ ॥**

ಶಬ್ದಾದಿ ಸಕಲ ವಿಷಯಗಳನ್ನೂ ಬಿಟ್ಟು ಅವಲ್ಲಿ ಮಮತೆ ಮತ್ತು ಆಸೆಗಳಿಲ್ಲದವನಾಗಿ, ಆತ್ಮವಲ್ಲದ ದೇಹದಲ್ಲಿ ಆತ್ಮವೆಂಬ ಅಭಿಮಾನವಿಡದೆ ಯಾವನಿದ್ದಾನೋ ಅವನು ಆತ್ಮವನ್ನು ಕಂಡು ಶಾಂತಿ ಪಡೆಯುವನು.

**ಏಷಾ ಬ್ರಾಹ್ಮೀಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।**
**ಸ್ಥಿತ್ವಾಽಸ್ಯಾಮನ್ತಕಾಲೇಽಪಿ ಬ್ರಹ್ಮ ನಿರ್ವಾಣಮೃಚ್ಛತಿ ॥ ೭೨ ॥**

(ನಿತ್ಯಾತ್ಮ ಜ್ಞಾನಪೂರ್ವಕವೂ ಸ್ಥಿತಪ್ರಜ್ಞತೆಯನ್ನೇ ಗುರಿಯಾಗಿ ಉಳ್ಳುದೂ ಆದ) ಈ ಅಸಂಗ ಕರ್ಮಾಚರಣೆಯು ಬ್ರಹ್ಮಪ್ರಾಪ್ತಿಗೆ ಸಾಧಕ ವಾದುದು. ಇದರಲ್ಲಿ ಉದ್ಯುಕ್ತನಾದವನು ಮತ್ತೆ ಜನ್ಮವೆತ್ತುವುದಿಲ್ಲ. ಕಡೆಯ ವಯಸ್ಸಿನಲ್ಲಿ ಇದರಲ್ಲಿ ತೊಡಗಿದರೂ ಕೇವಲ ಸುಖಮಯವಾದ ಆತ್ಮಾನುಭವವನ್ನೇ ಪಡೆಯುವನು !

(ಟಿಪ್ಪಣಿ : ಹೀಗೆ ಈ ಎರಡನೆಯ ಅಧ್ಯಾಯದಲ್ಲಿ ಆತ್ಮದ ನಿಜ ಸ್ವರೂಪವನ್ನೂ ಅದನ್ನು ಪಡೆಯಲು ಯುದ್ಧವು ಸಾಧನವೆಂಬುದನ್ನೂ ಅರಿಯದೆ ದೇಹವೇ ಆತ್ಮವೆಂಬ ಜ್ಞಾನದಿಂದ ಮೋಹಿತನಾಗಿ ಯುದ್ಧದಿಂದ ನಿವೃತ್ತನಾಗಿದ್ದ ಅರ್ಜುನನ ಮೋಹ ಶಮನಕ್ಕಾಗಿ, ಆತ್ಮವು ನಿತ್ಯವೆಂದು ಪ್ರತಿಪಾದಿಸುವ ಸಾಂಖ್ಯಯೋಗವನ್ನೂ ಆ ಜ್ಞಾನ ಪೂರ್ವಕವಾಗಿ, ಫಲದಲ್ಲಿ ಆಸೆಯಿಲ್ಲದ ಕರ್ಮಾನುಷ್ಠಾನರೂಪವಾದ ಕರ್ಮಯೋಗವನ್ನೂ, ಆತ್ಮಾವಲೋಕನಕ್ಕೆ ಸಾಧನವಾದ ಸ್ಥಿತಪ್ರಜ್ಞತೆಯನ್ನೂ ಉಪದೇಶಿಸಲಾಯಿತು.)

ಇಲ್ಲಿಗೆ ಸಾಂಖ್ಯಯೋಗವೆಂಬ ಎರಡನೆಯ ಅಧ್ಯಾಯವು
ಸಮಾಪ್ತವಾಯಿತು.

# ಅಧ್ಯಾಯ ೩
# ಕರ್ಮ ಕರ್ತವ್ಯತೆ

(ಸಂಗತಿ : ನಿರ್ದೋಷವೂ ಸಕಲಕಲ್ಯಾಣಗುಣಾಕರವೂ ಆದ ಪರಬ್ರಹ್ಮವೇ ಮುಮುಕ್ಷುಗಳಿಗೆ ಪ್ರಾಪ್ಯ. ಭಕ್ತಿಯೋಗವೇ ಇದಕ್ಕೆ ಉಪಾಯ. ಪ್ರಾಪ್ತೃವಾದ ಜೀವಾತ್ಮನ ಯಾಥಾತ್ಮ್ಯದರ್ಶನವು ಈ ಭಕ್ತಿಯೋಗದ ಅಂಗ. ಜೀವಾತ್ಮನ ಯಾಥಾತ್ಮ್ಯದರ್ಶನವು–ಆತ್ಮನು ನಿತ್ಯನೆಂಬ ಜ್ಞಾನದೊಡನೆ ಅನುಷ್ಠಿಸತಕ್ಕ ನಿಷ್ಕಾಮಕರ್ಮದಿಂದ ಸಾಧ್ಯ–ಇತ್ಯಾದಿಯಾಗಿ ವೇದಾನ್ತದಲ್ಲಿ ಹೇಳಿರುವುದನ್ನು ಇದುವರಿಗೆ ಇಲ್ಲಿಯೂ ಹೇಳಲಾಯಿತು. ಇನ್ನು ಮುಂದೆ ನಾಲ್ಕು ಅಧ್ಯಾಯಗಳಿಂದ, ಹಿಂದೆ ಹೇಳಿದ ಪ್ರಾಪ್ತೃವಾದ ಜೀವಾತ್ಮನ ದರ್ಶನವನ್ನೂ ಅದರ ಸಾಧನವನ್ನೂ ವಿಸ್ತರಿಸುತ್ತಾನೆ.)

**ಅರ್ಜುನ ಉವಾಚ—**

**ಜ್ಯಾಯಸೀ ಚೇತ್ಕರ್ಮಣಸ್ತೇ ಮತಾ ಬುದ್ಧಿಃ ಜನಾರ್ದನ ।**
**ತತ್ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ॥೧॥**

**ವ್ಯಾಮಿಶ್ರೇಣೈವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ ।**
**ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಂ ॥೨॥**

ಅರ್ಜುನನೆಂದನು—

ಎಲೈ ಕೃಷ್ಣನೇ ! (" ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ "(2–49)-ಇತ್ಯಾದಿಯಾಗಿ ಉಪದೇಶಿಸಿದಂತೆ)-ಕರ್ಮಕ್ಕಿಂತ ಜ್ಞಾನವೇ ದೊಡ್ಡದು ಎಂದು ನಿನ್ನ ಮತವಾದರೆ, ಘೋರವಾದ ಕರ್ಮದಲ್ಲಿ ನನ್ನನ್ನೇಕೆ ತೊಡಗಿಸುವೆ? ಮಿಶ್ರವಾದ ನುಡಿಯಿಂದ ನನ್ನ ಬುದ್ಧಿಗೆ ಭ್ರಮೆಯುಂಟುಮಾಡುವಂತಿರುವೆ! ಆದುದರಿಂದ, ಯಾವುದನ್ನು ನಿಶ್ಚೈಸಿ ಅದರಿಂದ ನಾನು ಶ್ರೇಯಸ್ಸನ್ನು ಸಾಧಿಸಬಹುದೋ ಅದೊಂದನ್ನೇ ಹೇಳು.

(ಟಿಪ್ಪಣಿ : ಕರ್ಮಯೋಗ ಜ್ಞಾನಯೋಗಗಳೆರಡೂ ಭಕ್ತಿಯೋಗದ ಸಾಧನಗಳು. ಕರ್ಮಯೋಗವು ಪ್ರವೃತ್ತಿರೂಪ–ಜ್ಞಾನಯೋಗವು ನಿವೃತ್ತಿರೂಪ. ಪ್ರಕೃತದಲ್ಲಿ ಅರ್ಜುನನು ಮೊದಲೇ ಯುದ್ಧೋದ್ಯೋಗದಿಂದ ನಿವೃತ್ತನಾಗಿದ್ದನು. ಆ ನಿವೃತ್ತಿವಾಸನೆಯ ಬಲದಿಂದ, ಈಗ ಶ್ರೀಕೃಷ್ಣನು ಉಪದೇಶಿಸಿದ ಈ ಎರಡು ಯೋಗಗಳೊಳಗೆ, ನಿವೃತ್ತ್ಯಂಶದಲ್ಲಿಯೇ (ಜ್ಞಾನಯೋಗದಲ್ಲಿಯೇ) ರಸಿಕನಾಗಿ ಹೀಗೆ ಚೋದ್ಯಮಾಡುತ್ತಾನೆ.

ಪ್ರಕೃತದಲ್ಲಿ ಸಾಧಿಸಬೇಕಾದುದು ಆತ್ಮದರ್ಶನ. ಇದಕ್ಕೆ ಸಾಧನವು ಜ್ಞಾನಯೋಗ. ಇದರ ಸಾಧನವು ಕರ್ಮಯೋಗ. ಜ್ಞಾನಯೋಗವು ನಿಷ್ಪನ್ನವಾಗಬೇಕಾದರೆ ಎಲ್ಲ ಇಂದ್ರಿಯಗಳೂ ಮನಸ್ಸೂ ಶಬ್ದಾದಿ ವಿಷಯ ವ್ಯಾಪಾರಗಳಿಂದ ಉಪರತವಾಗಬೇಕು. ಕರ್ಮಯೋಗವಾದರೋ–ಎಲ್ಲ ಇಂದ್ರಿಯಗಳನ್ನೂ ವ್ಯಾಪಾರದಲ್ಲಿಯೇ ತೊಡಗಿಸತಕ್ಕುದು.

ಈಗ ಆತ್ಮಾವಲೋಕನವನ್ನು ಸಾಧಿಸಬೇಕಾದರೆ, ಸಕಲ ಕರ್ಮ ನಿವೃತ್ತಿಪೂರ್ವಕವಾದ ಜ್ಞಾನಯೋಗದಲ್ಲಿಯೇ ನನ್ನನ್ನು ನಿಯಮಿಸ ಬೇಕಲ್ಲವೇ ! ಅದರ ವಿರುದ್ಧವಾಗಿ, ಸಕಲಕರ್ಮಪ್ರವೃತ್ತಿರೂಪವಾದ ಕರ್ಮಯೋಗದಲ್ಲಿ ನನ್ನನ್ನು ನಿಯಮಿಸುತ್ತಿರುವೆಯಲ್ಲ ! ಸರ್ವೇಂದ್ರಿಯ ವ್ಯಾಪಾರಗಳ ಉಪರತಿರೂಪವಾದ ಜ್ಞಾನಯೋಗಕ್ಕೆ ಅದರ ವಿರುದ್ಧ ರೂಪವಾದ ಕರ್ಮವೇ ಸಾಧನ. ಅದನ್ನೇ ಮಾಡು–ಎಂಬ ಮಾತು ವಿರುದ್ಧವೂ ಮಿಶ್ರವೂ ಆದುದು–ಎಂದು ಅರ್ಜುನನ ಭಾವ.)

(ಸಂಗತಿ : ಪರಸ್ಪರ ವಿರುದ್ಧವಲ್ಲದ ವಾಕ್ಯವನ್ನು ಅರ್ಜುನನು ತಿಳಿಯಲಿಚ್ಛಿಸಲಾಗಿ, ಹಿಂದೆ ಹೇಳಿದುದು ಪರಸ್ಪರ ವಿರುದ್ಧವೇ ಅಲ್ಲವೆಂದು ಶ್ರೀಕೃಷ್ಣನು ಪ್ರಕಟಿಸುತ್ತಿದ್ದಾನೆ.)

**ಶ್ರೀ ಭಗವಾನುವಾಚ—**

**ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾಽನಘ ।**
**ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಂ॥**

ಎಲೈ ನಿರ್ದೋಷಿಯಾದ ಅರ್ಜುನನೆ !

ವಿಚಿತ್ರಾಧಿಕಾರಿಗಳಿಂದ ತುಂಬಿದ ಈ ಲೋಕದಲ್ಲಿ ಜ್ಞಾನಯೋಗ–ಕರ್ಮಯೋಗಗಳೆಂಬ ಎರಡು ವಿಧವಾದ ಉಪಾಯಗಳು ಆಯಾ ಅಧಿ

ಕಾರಿಗೆ ತಕ್ಕಂತೆ, ಮಿಶ್ರವಿಲ್ಲದಂತೆಯೇ ನನ್ನಿಂದ ಹೇಳಲ್ಪಟ್ಟವು. (ಮೋಕ್ಷೇಚ್ಛೆಯುಂಟಾದವರೆಲ್ಲರಿಗೂ ಆಗಲೇ ಜ್ಞಾನಯೋಗದಲ್ಲಿ ಅಧಿಕಾರ ವುಂಟಾಗುವುದಿಲ್ಲ. ಮತ್ತೇನೆಂದರೆ, ಅಸಂಗಕರ್ಮಾನುಷ್ಠಾನದಿಂದ ಮನಸ್ಸು ನಿರ್ಮಲವಾದಮೇಲೆಯೇ ಅವರಿಗೆ ಜ್ಞಾನಯೋಗದಲ್ಲಿ ಅಧಿಕಾರ ಸಿದ್ಧಿಸುವುದು.) ಆದುದರಿಂದ ಸಾಂಖ್ಯರಿಗೆ (ಆತ್ಮೈಕವಿಷಯವಾದ ಬುದ್ಧಿಯುಳ್ಳವರಿಗೆ) ಜ್ಞಾನಯೋಗದಲ್ಲಿ ಅಧಿಕಾರ. ಅದರಲ್ಲಿ ಅರ್ಹತೆಯಿಲ್ಲದ ಕರ್ಮಯೋಗಿಗಳಿಗೆ ಕರ್ಮಯೋಗದಲ್ಲಿ ಅಧಿಕಾರ. (ವಿಷಯವ್ಯಾಕುಲ ಬುದ್ಧಿಯುಳ್ಳವರಿಗೆ ಕರ್ಮಯೋಗವೂ ಅವ್ಯಾಕುಲ ಬುದ್ಧಿಯುಳ್ಳವರಿಗೆ ಜ್ಞಾನಯೋಗವೂ ವಿಹಿತವಾಗಿವೆ.)

(ಸಂಗತಿ : ಕರ್ಮಯೋಗದಲ್ಲಿ ತೊಡಗಬೇಕಾದರೂ ಮೋಕ್ಷೇಚ್ಛೆಯೇ ಅಲ್ಲವೆ ಕಾರಣ! ಆ ಮೋಕ್ಷೇಚ್ಛೆಯುಂಟಾದರೆ ನೇರವಾಗಿ ಜ್ಞಾನಯೋಗ ದಲ್ಲಿಯೇ ಏಕೆ ತೊಡಗಬಾರದು ? ಇವುಗಳ ಮಧ್ಯೆ ಕರ್ಮಯೋಗ ಬೇರೆ ಏಕೆ ?—ಎಂದರೆ ಹೇಳುತ್ತಾನೆ ;)

**ನ ಕರ್ಮಣಾಮನಾರಂಭಾತ್ ನೈಷ್ಕರ್ಮ್ಯಂ ಪುರುಷೋಽಶ್ನುತೇ ।**
**ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ॥ ೪ ॥**

ಶಾಸ್ತ್ರೀಯ ಕರ್ಮಗಳನ್ನು ಆರಂಭಿಸದೆ ಇರುವುದರಿಂದಲಾಗಲಿ, ಆರಂಭಿಸಿದುದನ್ನು ಬಿಡುವುದರಿಂದಲಾಗಲಿ ಜ್ಞಾನನಿಷ್ಠೆ ಸಿದ್ಧಿಸದು.

(ಟಿಪ್ಪಣಿ : ಫಲದಾಸೆಯಿಲ್ಲದ ಕರ್ಮಗಳಿಂದ ಭಗವಂತನನ್ನು ಆರಾಧಿಸಿ ಅನಾದಿಕಾಲದಿಂದ ಬಂದ ಪಾಪಸಂಚಯವನ್ನು ಕಳೆದುಕೊಂಡವರಿಗೆ ಮಾತ್ರವೇ ಜ್ಞಾನನಿಷ್ಠೆಯು ಸಾಧ್ಯವೆಂದು ಭಾವ.)

(ಸಂಗತಿ : ಇದನ್ನೇ ಮುಂದೆ ಉಪಪಾದಿಸುತ್ತಾನೆ.)

**ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥ ೫ ॥**

ಒಂದು ಕ್ಷಣವಾದರೂ ಕೆಲಸಮಾಡದೆ ಯಾವನೂ ಇರನು. (ನಾನೇನೂ ಮಾಡುವುದಿಲ್ಲವೆಂದು ಸಂಕಲ್ಪ ಮಾಡಿಕೊಂಡಿದ್ದರೂ) ಪ್ರತಿ

ಯೊಬ್ಬನೂ ಪ್ರಾಚೀನ ಕರ್ಮಾನುಗುಣವಾಗಿ ವೃದ್ಧಿಹೊಂದಿದ ಸತ್ತ್ವ ರಜಸ್ತಮೋಗುಣಗಳಿಗೆ ವಶನಾಗಿ ಅದಕ್ಕೆ ತಕ್ಕಂತೆ ಕೆಲಸ ಮಾಡುತ್ತಲೇ ಇರುವನು.

(ಸಂಗತಿ: ಕರ್ಮಯೋಗವನ್ನು ಮಾಡದೆಯೇ ಜ್ಞಾನಯೋಗಕ್ಕೆ ತೊಡಗಿದಲ್ಲಿ ಉಂಟಾಗುವ ಬಾಧಕವನ್ನೂ ತಿಳಿಸುತ್ತಾನೆ.)

**ಕರ್ಮೇನ್ದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।**
**ಇನ್ದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥**

ಕರ್ಮಯೋಗದಿಂದ ಪಾಪವು ಕ್ಷಯಿಸಿ ಮನಸ್ಸು ನಿರ್ಮಲವಾಗ ಗೊಡದೆಯೇ ಕರ್ಮೇಂದ್ರಿಯಗಳನ್ನು ನಿಗ್ರಹಿಸಿ ಜ್ಞಾನಯೋಗಕ್ಕೆ ತೊಡಗಿ ದವನಿಗೆ ಆ ಮನಸ್ಸು ವಿಷಯಲೋಲವಾದುದರಿಂದ ವಿಷಯಗಳ ಕಡೆಗೇ ಹೋಗತಕ್ಕದ್ದಾಗಿ ಆತ್ಮವಿಚಾರಕ್ಕೆ ವಿಮುಖನೇ ಆಗುವುದು. ಹೀಗೆ ಯಾವ ವಿಷಯಗಳ ಆಸೆಯಿಂದ ಇಂದ್ರಿಯಗಳನ್ನು ನಿರೋಧಿಸಲು ಸಂಕಲ್ಪಿ- ಸಿದ್ದಾನೆಯೋ ಅಂಥ ವಿಷಯಗಳ ಕಡೆಗೇ ಮನಸ್ಸು ಹೋಗುವುದರಿಂದ ಇವನು ಸಂಕಲ್ಪಕ್ಕೆ ವಿರುದ್ಧವಾಗಿ ಆಚರಿಸಿದಂತಾಗಿ ಮಿಥ್ಯಾಚಾರಿಯಾಗಿ ಕೆಟ್ಟುಹೋಗುವನು. (ಸಂಕಲ್ಪವೊಂದು, ಆಚರಣೆಯೇ ಒಂದು—ಆಗವನು ಮಿಥ್ಯಾಚಾರಿ.)

(ಸಂಗತಿ: ಮೊದಲೇ ಜ್ಞಾನಯೋಗಕ್ಕೆ ತೊಡಗುವವನನ್ನು ನಿಂದಿಸಿ ಕರ್ಮಯೋಗಿಯನ್ನು ಹೊಗಳುತ್ತಾನೆ.)

**ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।**
**ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಸ್ಸ ವಿಶಿಷ್ಯತೇ ॥ ೭ ॥**

ಆದುದರಿಂದ, ಎಲೈ ಅರ್ಜುನನೆ! ಸ್ವತಃ ಕರ್ಮಮಾಡುವ ಅಭ್ಯಾಸ ವುಳ್ಳ ಇಂದ್ರಿಯಗಳನ್ನು ಆತ್ಮಾವಲೋಕನದಲ್ಲಿ ಪ್ರವೃತ್ತವಾದ ಮನಸ್ಸಿನಿಂದ ಶಾಸ್ತ್ರೀಯ ಕರ್ಮದಲ್ಲಿ ಪ್ರೇರಿಸಿ, ಕರ್ಮಮಾಡುವುದೇ ಸ್ವಭಾವವಾದ ಆ ಇಂದ್ರಿಯಗಳಿಂದ ಫಲದಲ್ಲಿ ಆಸೆಯಿಲ್ಲದೆ ಕರ್ಮಯೋಗವನ್ನು ಆರಂಭಿಸು ವವನು ಜ್ಞಾನಯೋಗಿಗಿಂತ ಶ್ರೇಷ್ಠನು. (ಏಕೆಂದರೆ, ಅವನಿಗೆ ಅಪಾಯ ಸಂಭವವಿರುವುದಿಲ್ಲ.)

**ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋಹ್ಯಕರ್ಮಣಃ ।**
**ಶರೀರಯಾತ್ರಾಽಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ॥ ೮ ॥**

ಪ್ರಕೃತಿಸಂಬಂಧಹೊಂದಿರುವ ನೀನು ಅನಾದಿವಾಸನೆಯಿಂದ ವ್ಯಾಪ್ತವಾಗಿ ಸುಕರವೂ ನಿರಪಾಯವೂ ಆದ ಕರ್ಮಯೋಗವನ್ನೇ ಮಾಡು ಆ ಕರ್ಮ (ಜ್ಞಾನಯೋಗ)ಕ್ಕಿಂತ ಕರ್ಮಯೋಗವೇ ಮೇಲು. (ಏಕೆಂದರೆ, ಜ್ಞಾನಯೋಗಕ್ಕೆ ಯೋಗ್ಯನಾದವನಿಗೂ ಹಿಂದಿನಿಂದ ಅದು ಅಭ್ಯಾಸವಿಲ್ಲದುದರಿಂದ ಆ ಜ್ಞಾನಯೋಗವು ದುಷ್ಕರ ಮತ್ತು ಇಂದ್ರಿಯಗಳು ದುರ್ಜಯವಾದುದರಿಂದ ಅದರಲ್ಲಿ ಅಪಾಯ ಸಂಭವವಿದೆ. ಅಲ್ಲದೆ ದೇಹ ಧಾರಣಕ್ಕಾಗಿ ನಿತ್ಯನೈಮಿತ್ತಿಕಕರ್ಮಗಳನ್ನು ಅವನೂ ಮಾಡಲೇ ಬೇಕು. ಕರ್ಮಯೋಗದಲ್ಲಿಯಾದರೋ — ಆತ್ಮಜ್ಞಾನವೂ ಅಡಗಿರುವುದರಿಂದ, ಅದನ್ನು ಮಾಡುವವನು ಮತ್ತೆ ಜ್ಞಾನಯೋಗವನ್ನು ಬೇರೆ ಮಾಡಬೇಕಾಗಿರುವುದಿಲ್ಲ—ಎಂದರೆ, ಜ್ಞಾನಯೋಗವು ಕರ್ಮಸಾಪೇಕ್ಷ, ಕರ್ಮಯೋಗವು ನಿರಪೇಕ್ಷ.) ಈ ಕಾರಣಗಳಿಂದ, ಕರ್ಮವೆಲ್ಲವನ್ನೂ, ಬಿಟ್ಟು ಜ್ಞಾನಯೋಗವೊಂದನ್ನು ಮಾತ್ರವೇ ಆಚರಿಸುವೆಯಾದರೆ ಆಗ ಜ್ಞಾನಯೋಗಿಯಾದ ನಿನಗೆ ದೇಹಯಾತ್ರೆಯೂ ಶಕ್ಯವಲ್ಲ.

(ಟಿಪ್ಪಣಿ : ಹೀಗೆ, ಕರ್ಮಯೋಗವು ಸುಕರ, ಅಪ್ರಮಾದ, ನಿರಪೇಕ್ಷ; ಜ್ಞಾನಯೋಗವಾದರೋ, ದುಷ್ಕರ, ಸಪ್ರಮಾದ, ಸಾಪೇಕ್ಷ, ಆದುದರಿಂದ ಜ್ಞಾನಯೋಗಕ್ಕಿಂತ ಕರ್ಮಯೋಗವೇ ದೊಡ್ಡದು. ಅದನ್ನೇ ಮಾಡು–ಎಂದು ಭಾವ.)

(ಸಂಗತಿ : ಹೀಗಾದರೆ, ದ್ರವ್ಯಾರ್ಜನಾದಿ ಕರ್ಮಗಳೆಲ್ಲವೂ ಅಹಂಕಾರ ಮಮಕಾರಾದಿಗಳಿಂದ ಸರ್ವೇಂದ್ರಿಯಗಳನ್ನೂ ವ್ಯಾಕುಲಗೊಳಿಸುತ್ತವೆಯಾಗಿ, ಕರ್ಮವಾಸನೆಯಿಂದ ಬಂಧನವೇ ಉಂಟಾಗುವುದಲ್ಲವೇ! ಎಂದರೆ, ಹೇಳುತ್ತಾನೆ.)

**ಯಜ್ಞಾರ್ಥಾತ್ ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬನ್ಧನಃ ।**
**ತದರ್ಥಂ ಕರ್ಮ ಕೌನ್ತೇಯ ಮುಕ್ತಸಂಗಸ್ಸಮಾಚರ ॥ ೯ ॥**

ಯಜ್ಞಾದಿ ಶಾಸ್ತ್ರೀಯಕರ್ಮಗಳಿಗಾಗಿಯಲ್ಲದೆ, ಸ್ವಂತ ಪ್ರಯೋಜನಕ್ಕಾಗಿ ಮಾಡುವ ದ್ರವ್ಯಾರ್ಜನಾದಿ ಕರ್ಮಗಳಾದರೆ, ಅವು ಮನುಷ್ಯನನ್ನು ಬಂಧಿಸುತ್ತವೆ. ಆದುದರಿಂದ ಎಲೈ ಅರ್ಜುನನೆ! ಸ್ವಂತ ಪ್ರಯೋಜನವನ್ನು ಉದ್ದೇಶಿಸದೆ ಯಜ್ಞಾದಿಗಳಿಗಾಗಿ ದ್ರವ್ಯಾರ್ಜನಾದಿ ಕರ್ಮಗಳನ್ನು ಮಾಡು.

(ಟಿಪ್ಪಣಿ: ಹೀಗಾದರೆ, ಆ ಯಜ್ಞಾದಿಗಳಿಂದ ಆರಾಧಿತನಾದ ಪರಮಪುರುಷನು ಅನಾದಿಕಾಲದಿಂದ ಬಂದ ನಿನ್ನ ಕರ್ಮವಾಸನೆಯನ್ನು ಛೇದಿಸಿ ಅವ್ಯಾಕುಲವಾದ ಆತ್ಮದರ್ಶನವನ್ನು ಕೊಡುತ್ತಾನೆ.)

(ಸಂಗತಿ: ಎಲ್ಲ ಪುರುಷಾರ್ಥಗಳನ್ನು ಸಾಧಿಸತಕ್ಕವರೂ ಯಜ್ಞಶಿಷ್ಟವಾದ ದ್ರವ್ಯದಿಂದಲೇ ಜೀವನ ಮಾಡಬೇಕೆಂದೂ, ಹಾಗಿಲ್ಲದವರಿಗೆ ದೋಷವುಂಟೆಂದೂ ಹೇಳುತ್ತಾನೆ.)

**ಸಹ ಯಜ್ಞೈಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।**
**ಅನೇನ ಪ್ರಸವಿಷ್ಯಧ್ವಂ ಏಷವೋಽಸ್ತ್ವಿಷ್ಟಕಾಮಧುಕ್ ॥ ೧೦ ॥**

ಪೂರ್ವದಲ್ಲಿ, ಪರಮ ಕಾರುಣಿಕನಾದ ಭಗವಂತನು ಅಚೇತನರಂತಿದ್ದ ಪ್ರಜೆಗಳನ್ನು ನೋಡಿ, ತನ್ನ ಆರಾಧನ ರೂಪವಾದ ಯಜ್ಞಗಳಿಂದ ಅವರನ್ನು ಉಜ್ಜೀವಿಸುವಂತೆ ಮಾಡಲು, ಆ ಯಜ್ಞಗಳೊಡನೆಯೇ ಅವರನ್ನೂ ಸೃಷ್ಟಿಸಿ, "ಈ ಯಜ್ಞಗಳಿಂದ ನೀವು ಉತ್ಕರ್ಷವನ್ನು ಪಡೆಯಿರಿ; ಇವು ನಿಮ್ಮ ಪುರುಷಾರ್ಥಗಳನ್ನೆಲ್ಲ ಈಡೇರಿಸಲಿ"—ಎಂದು ಅವರಿಗೆಂದನು.

(ಸಂಗತಿ: ಯಜ್ಞದಿಂದ ಮನುಷ್ಯನು ವೃದ್ಧಿಹೊಂದುವುದು ಹೇಗೆ? ಯಜ್ಞಗಳು ಕ್ರಿಯಾರೂಪಗಳಾದುದರಿಂದ ಕೂಡಲೆ ನಾಶಹೊಂದುವುವು: ಇವು ಕಾಲಾಂತರದಲ್ಲಿ ದೊರಕುವ ಫಲಕ್ಕೆ ಹೇಗೆ ಸಾಧನ? ಅಲ್ಲದೆ, "ನಾನ್ಯಃ ಪನ್ಥಾ"---ಮುಂತಾದ ಶ್ರುತಿಗಳಿಂದ ಜ್ಞಾನವೇ ಮೋಕ್ಷಕ್ಕೆ ಸಾಧನವೆನಿಸಿರಲಾಗಿ ಸ್ವರ್ಗಾದಿಗಳಿಗೆ ಸಾಧನವಾದ ಯಜ್ಞವು ಮೋಕ್ಷಸಾಧಿಸುವುದೆಂತು? ಅಲ್ಲದೆ, ಮೋಕ್ಷಕ್ಕೆ ಹೊರಚ್ಚಾದ ವಿಚಿತ್ರ ಸಾಂಸಾರಿಕ

ಕಾಮಗಳು ಮೋಕ್ಷಕ್ಕೆ ಅನುಗುಣವಾಗುವುದು ಹೇಗೆ?—ಎಂಬ ಶಂಕೆಗಳನ್ನು ಪರಿಹರಿಸುತ್ತಾನೆ.)

**ದೇವಾನ್ ಭಾವಯತಾನೇನ ತೇ ದೇವಾ ಭಾವಯನ್ತು ವಃ ।**
**ಪರಸ್ಪರಂ ಭಾವಯನ್ತಃ ಶ್ರೇಯಃ ಪರಮವಾಪ್ಸ್ಯಥ ॥ ೧೧ ॥**

ಈ ಯಜ್ಞದಿಂದ (ನನ್ನ ಶರೀರಗಳಾದ) ದೇವತೆಗಳನ್ನು ಪೂಜಿಸಿರಿ. ಇದರಿಂದ ಪ್ರೀತಿಪಡೆದ ಆ ದೇವತೆಗಳು ತಮ್ಮ ಪೂಜೆಗೆ ಬೇಕಾದ ಅನ್ನ-ಪಾನಾದಿಗಳಿಂದ ನಿಮ್ಮನ್ನು ಪೋಷಿಸಲಿ. ಹೀಗೆ ಪರಸ್ಪರ ತೃಪ್ತಿಪಡಿಸುತ್ತ ಮೋಕ್ಷ ಪಡೆಯಿರಿ.

**ಇಷ್ಟಾನ್ ಭೋಗಾನ್ ಹಿ ವೋ ದೇವಾ ದಾಸ್ಯನ್ತೇ ಯಜ್ಞಭಾವಿತಾಃ।**
**ತೈರ್ದತ್ತಾನ ಪ್ರದಾಯೈಭ್ಯೋ ಯೋ ಭುಙ್ಕ್ತೇ ಸ್ತೇನ ಏವ ಸಃ॥**

ಯಜ್ಞಗಳಿಂದ ಪ್ರೀತರಾದ ದೇವತೆಗಳು ಮುಂದಿನ ಪೂಜೆಗೆ ಬೇಕಾದ ಸಕಲ ಭೋಗಗಳನ್ನೂ ಕೊಡುವರು. ತಮ್ಮ ಪೂಜೆಗಾಗಿ ಅವರು ಕೊಟ್ಟ ಭೋಗಗಳನ್ನು ಅವರಿಗೆ ಅರ್ಪಿಸದೆ ತಾನೇ ಭೋಗಿಸುವವನು ಕಳ್ಳನೇ! (ಅವನಿಗೆ ಮೋಕ್ಷವಿಲ್ಲದುದು ಮಾತ್ರವಲ್ಲದೆ ನರಕವೂ ಉಂಟಾಗುವುದೆಂದು ಭಾವ.)

(ಸಂಗತಿ : ಅದನ್ನೇ ವಿವರಿಸುತ್ತಾನೆ.)

**ಯಜ್ಞಶಿಷ್ಟಾಶಿನಸ್ಸನ್ತೋ ಮುಚ್ಯನ್ತೇ ಸರ್ವಕಿಲ್ಬಿಷೈಃ ।**
**ತೇ ತ್ವಘಂ ಭುಂಜತೇ ಪಾಪಾ ಯೇ ಪಚನ್ತ್ಯಾತ್ಮಕಾರಣಾತ್ ॥**

ಇಂದ್ರಾದಿ ರೂಪದಲ್ಲಿರುವ ಭಗವಂತನನ್ನು ಪೂಜಿಸಿ ಅದರ ಶೇಷವನ್ನು ಭುಜಿಸುವ ಸತ್ಪುರುಷರು ಆತ್ಮಜ್ಞಾನಕ್ಕೆ ವಿರೋಧಿಯಾದ ಎಲ್ಲ ಪಾಪಗಳಿಂದಲೂ ಬಿಡುಗಡೆಹೊಂದುತ್ತಾರೆ. ತಮಗಾಗಿಯೇ ಅನ್ನವನ್ನು ಕುದಿಸುವ ಪಾಪಿಗಳಾದರೋ ಪಾಪವನ್ನೇ ತಿನ್ನುತ್ತಾರೆ. (ಇನ್ನೂ ಪಾಪಿಗಳಾಗಿ ಆತ್ಮಜ್ಞಾನಕ್ಕೆ ವಿಮುಖರಾಗುವರೆಂದು ಭಾವ.)

(ಸಂಗತಿ : ಮತ್ತೆಯೂ ಲೋಕರೀತಿಯಾಗಿಯೂ ಶಾಸ್ತ್ರರೀತಿಯಾಗಿಯೂ, ಯಜ್ಞವೇ ಎಲ್ಲಕ್ಕೂ ಮೂಲವೆಂದು ತೋರಿಸಿ ಅದನ್ನು

ಎಲ್ಲರೂ ಅನುವರ್ತಿಸಬೇಕೆಂದೂ, ಇಲ್ಲದಿದ್ದಲ್ಲಿ ದೋಷವುಂಟೆಂದೂ ಹೇಳುತ್ತಾನೆ.)

**ಅನ್ನಾದ್ಭವನ್ತಿ ಭೂತಾನಿ ಪರ್ಜನ್ಯಾದನ್ನಸಂಭವಃ ।**
**ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥೧೪॥**
**ಕರ್ಮ ಬ್ರಹ್ಮೋದ್ಭವಂ ವಿದ್ಧಿ ಬ್ರಹ್ಮಾಕ್ಷರಸಮುದ್ಭವಂ ।**
**ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಂ ॥ ೧೫ ॥**
**ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ ।**
**ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ ॥**

ಅನ್ನದಿಂದ ಪ್ರಾಣಿಗಳು ಆಗುತ್ತವೆ. ಮಳೆಯಿಂದ ಅನ್ನವೂ ಯಜ್ಞದಿಂದ ಮಳೆಯೂ ದ್ರವ್ಯಾರ್ಜನಾದಿ ರೂಪವಾದ ಕರ್ಮದಿಂದ ಯಜ್ಞವೂ ಆಗುವುವು. ಶರೀರದಿಂದ ದ್ರವ್ಯಾರ್ಜನಾದಿ ಕರ್ಮವೂ ಜೀವಾತ್ಮನಿಂದ ಶರೀರವೂ ಉದ್ಭವಿಸುವುದೆಂದು ತಿಳಿ. ಆ ಜೀವಾತ್ಮನು ತೃಪ್ತನಾಗುವುದು ಅನ್ನದಿಂದ (ಅನ್ನಪಾನಾದಿಗಳಿಂದ ತೃಪ್ತನಾದ ಜೀವನ ಆಧಾರದಿಂದ ಶರೀರವು ಕಾರ್ಯಸಮರ್ಥವಾಗುತ್ತದೆಂದು ಭಾವ.) ಹೀಗೆ ಎಲ್ಲಕ್ಕೂ ಯಜ್ಞವೇ ಮೂಲ. ಎಲೈ ಅರ್ಜುನನೆ! ಹೀಗೆ ಪರಸ್ಪರ ಕಾರ್ಯಕಾರಣ ಭಾವದಿಂದ ಸುತ್ತುತ್ತಿರುವ ಯಜ್ಞಚಕ್ರವನ್ನು ಇಲ್ಲಿ ಅನುಸರಿಸದವನು ಕೇವಲ ವಿಷಯಾಸಕ್ತನಾಗಿ ಪಾಪಿಯಾಗುತ್ತಾನೆ. ಅವನು ಜೀವಿಸಿರುವುದು ವ್ಯರ್ಥ.

(ಸಂಗತಿ: ಆತ್ಮದರ್ಶನವು ಸಿದ್ಧಿಸಿರುವವನಿಗೆ ಸೂತ್ರನೇ ಮಹಾಯಜ್ಞಾದಿ ವರ್ಣಾಶ್ರಮೋಚಿತ ಕರ್ಮಗಳು ಬೇಕಿಲ್ಲವೆನ್ನುತ್ತಾನೆ.)

**ಯಸ್ತ್ವಾತ್ಮರತಿರೇವ ಸ್ಯಾತ್ ಆತ್ಮತೃಪ್ತಶ್ಚ ಮಾನವಃ ।**
**ಆತ್ಮನ್ಯೇವ ಚ ಸನ್ತುಷ್ಟಃ ತಸ್ಯ ಕಾರ್ಯಂ ನ ವಿದ್ಯತೇ ॥ ೧೭ ॥**

**ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।**
**ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥ ೧೮ ॥**

**ತಸ್ಮಾದಸಕ್ತಸ್ಸತತಂ ಕಾರ್ಯಂ ಕರ್ಮ ಸಮಾಚರ ।**
**ಅಸಕ್ತೋಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ॥ ೧೯ ॥**

(ಜ್ಞಾನಯೋಗ ಕರ್ಮಯೋಗಗಳ ಅಪೇಕ್ಷೆಯಿಲ್ಲದೇ ಸ್ವತಃ) ಆತ್ಮದಲ್ಲಿಯೇ ಸುಖಿಸುವವನೂ (ಅನ್ನಪಾನಾದಿಗಳ ಅಪೇಕ್ಷೆಯಿಲ್ಲದೆ) ಆತ್ಮದಿಂದಲೇ ತೃಪ್ತಿಪಡೆದಿರುವವನೂ (ಪುಷ್ಪಗಂಧಾದಿಗಳಿಲ್ಲದೆ) ಆತ್ಮದಲ್ಲಿಯೇ ಸಂತುಷ್ಟನಾಗಿರುವವನೂ ಆದವನು ಆತ್ಮದರ್ಶನಕ್ಕಾಗಿ ಮಾಡಬೇಕಾದ ಕಾರ್ಯವಿರುವುದಿಲ್ಲ.

ಇಲ್ಲಿ ಕರ್ಮಮಾಡುವುದರಿಂದ ಅಥವಾ ಮಾಡದಿರುವುದರಿಂದ ಅವನು ಪಡೆಯುವುದೇನೂ ಇಲ್ಲ. ಎಲ್ಲ ಭೂತಗಳಲ್ಲಿಯೂ ಅವನು ಯಾವುದನ್ನೂ ಪಡೆಯಲು ಹವಣಿಸುವುದಿಲ್ಲ. ಆದುದರಿಂದ ಆತ್ಮದರ್ಶನ ಸಿದ್ಧಿಸುವವರಿಗೂ ಫಲಾಸಕ್ತಿಯಿಲ್ಲದೆ ಕರ್ಮಯೋಗವನ್ನೇ ಮಾಡು. ಅದರಿಂದಲೇ ಆತ್ಮಪ್ರಾಪ್ತಿಯಾಗುವುದು.

(ಸಂಗತಿ: ಜ್ಞಾನಯೋಗಕ್ಕಿಂತ ಕರ್ಮಯೋಗವೇ ಮೇಲೆಂಬುದನ್ನು ಶಿಷ್ಟಾನುಷ್ಠಾನದಿಂದ ಉದಾಹರಿಸುತ್ತಾನೆ.)

**ಕರ್ಮಣೈವ ಹಿ ಸಂಸಿದ್ಧಿಂ ಆಸ್ಥಿತಾ ಜನಕಾದಯಃ ।**

ಜನಕನೇ ಮುಂತಾದ ರಾಜರ್ಷಿಗಳೂ ಕರ್ಮಯೋಗದಿಂದಲೇ ಆತ್ಮಸಿದ್ಧಿಯನ್ನು ಪಡೆದಿದ್ದಾರೆ.

(ಸಂಗತಿ: ಮುಮುಕ್ಷುವಿಗೆ ಆರಂಭದಲ್ಲಿಯೇ ಜ್ಞಾನಯೋಗಕ್ಕೆ ಅರ್ಹತೆಯಿರುವುದಿಲ್ಲವಾಗಿ ಕರ್ಮಯೋಗವೇ ಕರ್ತವ್ಯವೆನ್ನಲಾಯಿತು. ಜ್ಞಾನಯೋಗಾಧಿಕಾರಿಗೂ, ಜ್ಞಾನಯೋಗಕ್ಕಿಂತ ಕರ್ಮಯೋಗವನ್ನು ಆಚರಿಸುವುದೇ ಮೇಲೆಂದೂ ಸಕಾರಣವಾಗಿ ಹೇಳಲಾಯಿತು. ಈಗ ಶ್ರೇಷ್ಠನಾದವನಿಗೆ ಸರ್ವಥಾ ಕರ್ಮಯೋಗವೇ ಆಚರಣೀಯವೆಂದು ಹೇಳುತ್ತಾನೆ.)

**ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ ॥ ೨೦ ॥**

**ಯದ್ಯದಾಚರತಿ ಶ್ರೇಷ್ಠಃ ತತ್ತದೇವೇತರೋ ಜನಃ ।**
**ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ ೨೧ ॥**

ಲೋಕವನ್ನು ರಕ್ಷಿಸುವ ದೃಷ್ಟಿಯಿಂದಲಾದರೂ ನೀನು ಕರ್ಮಯೋಗ

ಮಾಡುವುದೇ ಉಚಿತವು. ಉತ್ತಮನಾದವನು ಏನೇನನ್ನು ಹೇಗೆಹೇಗೆ ಆಚರಿಸುತ್ತಾನೆಯೋ ಅದದನ್ನು ಹಾಗೆ ಹಾಗೆಯೇ ಇತರರೂ ಆಚರಿಸುತ್ತಾನೆ. (ಆದುದರಿಂದ ಶಿಷ್ಟನೆಂದು ಪ್ರಸಿದ್ಧಿಪಡೆದವನು ಕರ್ಮಯೋಗವನ್ನೇ ಆತ್ಮಪ್ರಾಪ್ತಿಪರ್ಯಂತವೂ ಆಚರಿಸಬೇಕು. ಹಾಗಲ್ಲದೆ, ತಾನು ಜ್ಞಾನಯೋಗಕ್ಕೆ ಅಧಿಕಾರಿಯೆಂದು ಕರ್ಮಯೋಗವನ್ನು ಬಿಟ್ಟು ಜ್ಞಾನಯೋಗವನ್ನೇ ಅವನು ಆಚರಿಸಿದರೆ, ಅವನ ಅನುಷ್ಠಾನವನ್ನೇ ಜ್ಞಾನಯೋಗಕ್ಕೆ ಶಕ್ತಿಯಿಲ್ಲದವರೂ ಆರಂಭಿಸಿ, ಅದನ್ನು ಸಾಧಿಸಲಾರದೆ ನಾಶಹೊಂದುವರು. ಹೀಗೆ ಲೋಕನಾಶನ ಜನಿತನಾದ ಪಾಪವು ಜ್ಞಾನಯೋಗಕ್ಕೆ ಶಕ್ತನಾದ ಶಿಷ್ಟನನ್ನೂ ಜ್ಞಾನಯೋಗದಿಂದ ಕೆಳಗೆ ಬೀಳಿಸುವುದೆಂದು ಭಾವ.)

(ಸಂಗತಿ: ನಾನು ನಿರಪೇಕ್ಷನಾದರೂ, ಲೋಕಕ್ಷೋಭದಿಂದ ನನಗೆ ದೋಷಬರುವುದಿಲ್ಲವಾದರೂ, ಪರಮಕಾರುಣಿಕನಾದುದರಿಂದ, ಲೋಕ ರಕ್ಷಣೆಗಾಗಿ, ಕರ್ಮವನ್ನೇ ಆಚರಿಸುತ್ತಿದ್ದೇನೆ. ನೀನಾದರೋ-ಸಾಪೇಕ್ಷನು ಲೋಕಕ್ಷೋಭೆಯಿಂದ ನಿನಗೆ ದೋಷವೂ ತಪ್ಪದು. ಆದುದರಿಂದ ನೀನು ಕರ್ಮವನ್ನು ಬಿಡದೆ ಮಾಡಬೇಕೆಂದು ಹೇಳಬೇಕಾದುದೇನು!—ಎಂದು ಮುಂದಿನ ಮೂರು ಶ್ಲೋಕಗಳಿಂದ ಹೇಳುತ್ತಾನೆ.)

**ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।**
**ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥ ೨೨ ॥**

ಎಲೈ ಅರ್ಜುನನೇ! (ನಿರಪೇಕ್ಷನೂ, ಪರಿಪೂರ್ಣನೂ, ಸತ್ಯಸಂಕಲ್ಪನೂ ಆದ) ನಾನು ಮೂರು ಲೋಕಗಳಲ್ಲಿಯೂ ಮಾಡಬೇಕಾದುವೇನೂ ಇಲ್ಲ. ಕರ್ಮ ಮಾಡುವುದರಿಂದ ಹೊಸದಾಗಿ ಹೊಂದಬೇಕಾದುದು ಯಾವುದೂ ಇಲ್ಲ. (ಆದರೂ ಲೋಕ ರಕ್ಷಣೆಗಾಗಿ) ಕರ್ಮದಲ್ಲಿಯೇ ತೊಡಗಿದ್ದೇನೆ.

**ಯದಿಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ ।**
**ಮಮ ವರ್ತ್ಮಾನುವರ್ತನ್ತೇ ಮನುಷ್ಯಾಃ ಪಾರ್ಥ ಸರ್ವಶಃ ॥ ೨೩ ॥**

**ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಂ**
**ಸಂಕರಸ್ಯ ಚ ಕರ್ತಾ ಸ್ಯಾಂ ಉಪಹನ್ಯಾಮಿಮಾಃ ಪ್ರಜಾಃ ॥ ೨೪ ॥**

ಎಲೈ ಅರ್ಜುನನೇ! ಶಿಷ್ಟಜನಾಗ್ರೇಸರನಾದ ವಸುದೇವನ ಮಗನಾಗಿದ್ದು ಅವನ ಕುಲಕ್ಕೆ ತಕ್ಕ ಶಾಸ್ತ್ರೀಯಾಚಾರದಲ್ಲಿ ಒಂದುವೇಳೆ ಉದಾಸೀನಮಾಡದೆ ನಾನು ತೊಡಗದಿದ್ದರೆ, ಇದನ್ನೇ ಧರ್ಮವೆಂದು ತಿಳಿದು ಮನುಷ್ಯರು ಎಲ್ಲ ಬಗೆಯಿಂದ ಅನುಸರಿಸುವರು. ಕುಲಾಚಾರವನ್ನು ಪಾಲಿಸದ ದೋಷದಿಂದ ಇವರೆಲ್ಲರೂ ನಾಶಹೊಂದುವರು. ನಾನು ಕರ್ಮವನ್ನು ಮಾಡದಿದ್ದಲ್ಲಿ ಸಂಕರಮಾಡಿದಂತಾಗಿ ಈ ಪ್ರಜೆಗಳನ್ನೆಲ್ಲ ನರಕಕ್ಕೂ ತಳ್ಳಿದಂತಾಗುವುದು.

(ಟಿಪ್ಪಣಿ : ಹೀಗೆಯೇ ಶಿಷ್ಟ ಜನಾಗ್ರೇಸರನಾದ ಪಾಂಡುವಿನ ಪುತ್ರನೂ ರಣಯಜ್ಞವೆಂಬ ಕ್ಷತ್ರಧರ್ಮದಲ್ಲಿ ನಿಷ್ಠನಾದ ಯುಧಿಷ್ಠಿರನ ತಮ್ಮನೂ ಸ್ವತಃ ಅರ್ಜುನನೂ (ಶುದ್ಧನೂ) ಆದ ನೀನು ನಿನ್ನ ಅಧಿಕಾರವನ್ನೇ ಆದರಿಸಿ ಜ್ಞಾನಯೋಗವನ್ನೇ ಹಿಡಿದೆಯಾದರೆ, ತಮ್ಮ ಅಧಿಕಾರವನ್ನು ತಿಳಿಯದ ಇತರ ಮುಮುಕ್ಷುಗಳೂ ನಿನ್ನನ್ನೇ ಅನುವರ್ತಿಸಿ ಕರ್ಮಮಾರ್ಗವನ್ನು ಬಿಟ್ಟು ನಾಶಹೊಂದುವರು. ಆದುದರಿಂದ ಶಿಷ್ಟನೂ ಜ್ಞಾನಿಯೂ ಆದವನು ತನ್ನ ಅಧಿಕಾರವನ್ನು ಆದರಿಸದೆ, ಲೋಕಾನುವರ್ತನಕ್ಕಾಗಿ ಅವಶ್ಯವಾಗಿ ಕರ್ಮವನ್ನು ಮಾಡಬೇಕೆಂಬೇಕು ಎಂದು ಭಾವ.)

**ಸಕ್ತಾಃ ಕರ್ಮಣ್ಯವಿದ್ವಾಂಸಃ ಯಥಾ ಕುರ್ವನ್ತಿ ಭಾರತ ।**
**ಕುರ್ಯಾದ್ವಿದ್ವಾಂಸ್ತಥಾಽಸಕ್ತಃ ಚಿಕೀರ್ಷುರ್ಲೋಕಸಂಗ್ರಹಂ ॥**
**ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಂ ।**
**ಜೋಷಯೇತ್ ಸರ್ವಕರ್ಮಾಣಿ ವಿದ್ವಾನ್ ಯುಕ್ತಸ್ಸಮಾಚರನ್ ॥**

ಎಲೈ ಅರ್ಜುನನೆ! ಆತ್ಮವನ್ನು ಚೆನ್ನಾಗಿ ತಿಳಿಯದವರು ಆತ್ಮದರ್ಶನಕ್ಕಾಗಿ ಕರ್ಮಯೋಗದಲ್ಲಿಯೇ ತೊಡಗುವಂತೆ, ಜ್ಞಾನಯೋಗಕ್ಕೆ ಶಕ್ತನಾಗಿ ಕರ್ಮಸಂಗವಿಲ್ಲದವನೂ ಕರ್ಮಯೋಗವೇ ಆತ್ಮದರ್ಶನಕ್ಕೆ ಸ್ವತಂತ್ರವಾದ ಸಾಧನವೆಂದು ಇತರರಿಗೂ ನಿಶ್ಚಯಮಾಡಿ ಅದರಲ್ಲಿ ಪ್ರೀತಿಯುಂಟುಮಾಡುವುದರ ಮೂಲಕ ಅವರನ್ನು ಕಾಪಾಡುವುದಕ್ಕಾಗಿ ಕರ್ಮಯೋಗವನ್ನೇ ಆಚರಿಸಬೇಕು. ಅನಾದಿ ಕರ್ಮವಾಸನೆಯಿಂದ ಕರ್ಮದಲ್ಲಿ ಸಂಗವುಳ್ಳ ಕರ್ಮಯೋಗಾಧಿಕಾರಿಗಳಾದ ಮುಮುಕ್ಷುಗಳಿಗೆ, ಕರ್ಮ

ಯೋಗಕ್ಕಿಂತ ಬೇರೊಂದು ಸಾಧನವು ಆತ್ಮಾವಲೋಕನಕ್ಕಿದೆಯೆಂದು ತೋರಿಸಿ ಅವರ ಬುದ್ಧಿಯು ಕರ್ಮಯೋಗದಿಂದ ಕದಲುವಂತೆ ಮಾಡ ಬಾರದು. ಜ್ಞಾನಯೋಗಕ್ಕೆ ಶಕ್ತನಾದವನೂ ಕರ್ಮಯೋಗವೇ ಆತ್ಮಾ ವಲೋಕನಕ್ಕೆ ನೇರವಾದ ಸಾಧನವೆಂಬ ಬುದ್ಧಿಯಿಂದ ಕರ್ಮಮಾಡುತ್ತ ಅವರಿಂದ ಎಲ್ಲ ಕರ್ಮಗಳನ್ನೂ ಮಾಡಿಸಬೇಕು.

(ಸಂಗತಿ: ಕರ್ಮಯೋಗವನ್ನು ಆಚರಿಸುವ ಅಜ್ಞರಿಗೂ ಪ್ರಾಜ್ಞ ರಿಗೂ ವ್ಯತ್ಯಾಸವೇನೆಂದರೆ.)

**ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ ।**
**ಅಹಂಕಾರವಿಮೂಢಾತ್ಮಾ ಕರ್ತಾಽಹಮಿತಿ ಮನ್ಯತೇ ॥ ೨೭ ॥**

**ತತ್ತ್ವವಿತ್ತು ಮಹಾಬಾಹೋ ಗುಣಕರ್ಮವಿಭಾಗಯೋಃ ।**
**ಗುಣಾಗುಣೇಷು ವರ್ತನ್ತ ಇತಿ ಮತ್ವಾ ನ ಸಜ್ಜತೇ ॥ ೨೮ ॥**

ಆತ್ಮಸ್ವರೂಪವನ್ನು ಅರಿಯದೆ ದೇಹವೇ ಆತ್ಮವೆಂದು ಭ್ರಮಿಸಿರು ವವನು ಪ್ರಕೃತಿಯಲ್ಲಿರುವ ಸತ್ತ್ವಾದಿಗುಣಗಳಿಂದ ಆದ ಕಾರ್ಯಗಳಿಗೆ ತಾನೇ ಕರ್ತೃವೆಂದು ತಿಳಿಯುತ್ತಾನೆ. ಸತ್ತ್ವಾದಿಗುಣಗಳ ಸ್ವರೂಪ ವನ್ನೂ ಅವು ನಡೆಸುವ ಆಯಾ ಕರ್ಮಗಳ ವಿಭಾಗವನ್ನೂ ಅರಿತವ ನಾದರೋ ಸತ್ತ್ವಾದಿಗುಣಗಳೇ ತಮ್ಮ ತಮ್ಮ ಕಾರ್ಯಗಳಲ್ಲಿ ಪ್ರವರ್ತಿ ಸುತ್ತಿವೆಯೆಂದು ಬಗೆದು ತಾನು ಅದರಲ್ಲಿ ಆಸಕ್ತನಾಗನು.

**ಪ್ರಕೃತೇರ್ಗುಣಸಂಮೂಢಾಸ್ಸಜ್ಜನ್ತೇ ಗುಣಕರ್ಮಸು ।**
**ತಾನಕೃತ್ಸ್ನವಿದೋ ಮನ್ದಾನ್ ಕೃತ್ಸ್ನವಿನ್ನ ವಿಚಾಲಯೇತ್ ॥**

ಆತ್ಮದರ್ಶನದಲ್ಲಿ ಪ್ರವೃತ್ತರಾಗಿ ಪ್ರಕೃತಿಯಲ್ಲಿರುವ ಸತ್ತ್ವಾದಿ ಗುಣ ಗಳಿಂದ ಮೋಹಿತರಾಗಿ ಆತ್ಮಸ್ವರೂಪವನ್ನು ವಿಶದವಾಗಿ ಅರಿಯದವರು ಗುಣಾನುರೂಪಗಳಾದ ಕರ್ಮಗಳಲ್ಲಿಯೇ ಸಕ್ತರಾಗುತ್ತಾರೆಯೇ ಹೊರತು ವಿಶದವಾದ ಆತ್ಮಸ್ವರೂಪದಲ್ಲಿ ಸಕ್ತರಾಗುವುದಿಲ್ಲ. (ಆದುದರಿಂದ ಅವರಿಗೆ ಕರ್ಮಯೋಗದಲ್ಲಿಯೇ ಅಧಿಕಾರ.) ಆತ್ಮಸ್ವರೂಪವನ್ನು ವಿಶದವಾಗಿ ತಿಳಿದವನೂ ಕರ್ತೃತ್ವವು ತನಗೆ ಗುಣಸಂಪರ್ಕದಿಂದ ಬಂದುದೇ ಹೊರತು

ಸ್ವರೂಪತಃ ಬಂದುದಲ್ಲವೆಂದು ತಿಳಿದು ಕರ್ಮಯೋಗವನ್ನೇ ಮಾಡಬೇಕು. ಇಲ್ಲದೆ, ತನಗೆ ಶಕ್ತಿ ಇದೆಯೆಂದು ಜ್ಞಾನಯೋಗದಲ್ಲಿಳಿದರೆ, ಕರ್ಮಯೋಗವು ನಿಕೃಷ್ಟವಾದುದೆಂದು ಭ್ರಮೆಯುಂಟುಮಾಡಿ, ಕರ್ಮದಲ್ಲಿ ಸಕ್ತರಾಗಿರುವ ಅಜ್ಞರ ಬುದ್ಧಿಯನ್ನು ಕದಲಿಸಿದಂತಾಗುತ್ತದೆ; ಹಾಗೆ ಮಾಡಕೂಡದು.

**ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ ।**
**ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥ ೩೦ ॥**

ಎಲ್ಲಕ್ಕೂ ನಾನು ಅಂತರಾತ್ಮನು ಮತ್ತು ನಿಯಾಮಕನು ಎಂದು ಅರಿತು ಸರ್ವೇಶ್ವರನಾದ ನನ್ನಲ್ಲಿ ಮೇಲೆ ಹೇಳಿದ ಗುಣದಿಂದಾದ ಕರ್ತೃತ್ವ ವನ್ನು ಆರೋಪಿಸಿ, ಆಸೆ, ಮಮಕಾರ, ಉದ್ವೇಗಗಳಿಲ್ಲದವನಾಗಿ ಯುದ್ಧಾದಿ ಕರ್ಮಗಳನ್ನು ಮಾಡು.

**ಯೇ ಮೇ ಮತಮಿದಂ ನಿತ್ಯಮನುತಿಷ್ಠನ್ತಿ ಮಾನವಾಃ ।**
**ಶ್ರದ್ಧಾವನ್ತೋಽನಸೂಯನ್ತೋ ಮುಚ್ಯನ್ತೇ ತೇಽಪಿ ಕರ್ಮಭಿಃ ॥**

(ಎಲ್ಲ ಉಪನಿಷತ್ತುಗಳ ಸಾರಭೂತವಾದ) ಈ ಕರ್ಮಯೋಗವನ್ನು ಶಾಸ್ತ್ರಾಧಿಕಾರಿಗಳೆನಿಸಿದ ಮನುಷ್ಯರೊಳಗೆ ತಪ್ಪದೆ ಆಚರಿಸುವವರೂ ಅನಾದಿಯಾದ ಕರ್ಮಬಂಧದಿಂದ ಮುಕ್ತರಾಗುವರು.

ಈಗ ಆಚರಿಸಲಾರದೆ ಈ ಶಾಸ್ತ್ರಾರ್ಥದಲ್ಲಿ ಶ್ರದ್ಧೆಯನ್ನು ಮಾತ್ರ ಇಟ್ಟಿರುವವರೂ, ಅಥವಾ ದೋಷವನ್ನಾದರೂ ಆರೋಪಿಸದಿರುವವರೂ (ಈ ಶ್ರದ್ಧೆ ಮತ್ತು ಅನಸೂಯೆಗಳಿಂದಲೇ ನಿಷ್ಕಲ್ಮಷರಾಗಿ,) ಶೀಘ್ರ ದಲ್ಲಿಯೇ ಈ ನನ್ನ ಮತವನ್ನಾಚರಿಸಿ ಅನಾದಿ ಕರ್ಮಬಂಧನದಿಂದ ಮುಕ್ತ ರಾಗುವರು.

**ಯೇ ತ್ವೇತದಭ್ಯಸೂಯನ್ತೋ ನಾನುತಿಷ್ಠನ್ತಿ ಮೇ ಮತಂ ।**
**ಸರ್ವಜ್ಞಾನವಿಮೂಢಾಂಸ್ತಾನ್ ವಿದ್ಧಿ ನಷ್ಟಾನಚೇತಸಃ ॥ ೩೨ ॥**

(ಚೇತನರೆಲ್ಲ ನನ್ನ ಶರೀರವಾದುದರಿಂದ ನಾನೇ ಅವಕ್ಕೆಲ್ಲ ಆಧಾರ, ಶೇಷಿ, ನಿಯಾಮಕನೆಂದು ಚಿಂತಿಸದೆ) ದೋಷದೃಷ್ಟಿಯುಳ್ಳವರಾಗಿ ನನ್ನ

ಮತವಾದ ಈ ಕರ್ಮಯೋಗವನ್ನು ಅನುಸರಿಸದವರೂ ವಸ್ತು ತತ್ತ್ವವನ್ನು ಅರಿಯದೆ ವ್ಯತಿರಿಕ್ತಜ್ಞಾನದಿಂದ ನಾಶಹೊಂದುವರೆಂದು ತಿಳಿ.

(ಸಂಗತಿ : ಹೀಗೆ, ಪ್ರಕೃತಿಸಂಸರ್ಗವುಳ್ಳವರೆಲ್ಲರಿಗೂ ಕರ್ತೃತ್ವ ವೆಂಬುದು ಆಯಾ ಸತ್ತ್ವಾದಿಗುಣಗಳ ಉದ್ರೇಕದಿಂದ ಬಂದುದು. ಅದೂ ಪರಮಪುರುಷನಿಗೇ ಅಧೀನ–ಎಂದು ಭಾವಿಸಿ, ಕರ್ಮಯೋಗಾಧಿಕಾರಿ ಗಳೂ ಜ್ಞಾನಯೋಗಾಧಿಕಾರಿಗಳೂ ಕರ್ಮಯೋಗವನ್ನೇ ಆಚರಿಸಬೇಕು. ಏಕೆಂದರೆ, ಕರ್ಮಯೋಗವು ಸುಕರವೂ ಅಪ್ರಮಾದವೂ ಆತ್ಮಜ್ಞಾನ ವನ್ನೊಳಗೊಂಡಿರುವುದರಿಂದ ನಿರಪೇಕ್ಷವೂ ಆದುದು. ಜ್ಞಾನಯೋಗ ವಾದರೋ ದುಷ್ಕರವೂ ಸಪ್ರಮಾದವೂ ಶರೀರಧಾರಣಾದಿಗಳಿಗಾಗಿ ಕರ್ಮ ಸಾಪೇಕ್ಷವೂ ಆದುದು. ಶಿಷ್ಟನಾದವನಂತೂ ವಿಶೇಷವಾಗಿ ಕರ್ಮಯೋಗ ವನ್ನೇ ಆಚರಿಸತಕ್ಕದ್ದು ಎಂದು ಹೇಳಿ, ಇನ್ನು ಮುಂದೆ ಜ್ಞಾನಯೋಗವು ದುಷ್ಕರವಾದುದರಿಂದ ಸಪ್ರಮಾದವೆಂದು ಹೇಳುತ್ತಾನೆ.)

**ಸದೃಶಂ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।**
**ಪ್ರಕೃತಿಂ ಯಾನ್ತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥ ೩೩ ॥**

ಆತ್ಮಜ್ಞಾನಿಯೂ ಕೂಡ ಪ್ರಾಚೀನ ವಾಸನಾನುಗುಣವಾದ ಪ್ರಾಕೃತ ವಿಷಯಗಳಲ್ಲಿಯೇ ವರ್ತಿಸುತ್ತಾನೆ. ಏಕೆಂದರೆ, ಪ್ರಕೃತಿಯ ಸಂಪರ್ಕ ದಿಂದ ಪ್ರಾಚೀನ ವಾಸನೆಯನ್ನು ಅನುಸರಿಸುವುದೇ ಜಂತುಗಳ ಸ್ವಭಾವ. ಶಾಸ್ತ್ರದಲ್ಲಿ ಹೇಳಿರುವ ಇಂದ್ರಿಯನಿಗ್ರಹವು ಮಾಡುವುದೇನು ?

(ಸಂಗತಿ : ಪ್ರಕೃತಿಯನ್ನು ಅನುಸರಿಸುವ ಬಗೆ ಹೇಗೆಂದರೆ ? ಹೇಳುತ್ತಾನೆ.)

**ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ ।**
**ತಯೋರ್ನ ವಶಮಾಗಚ್ಛೇತ್ತೌ ಹ್ಯಸ್ಯ ಪರಿಪನ್ಥಿನೌ ॥ ೩೪ ॥**

ಜ್ಞಾನೇಂದ್ರಿಯ ಕರ್ಮೇಂದ್ರಿಯಗಳಿಗೆ ವಿಷಯವಾದ ರೂಪವಾಕ್ಕು ಮುಂತಾದುವುಗಳಲ್ಲಿ ಪ್ರಾಚೀನವಾಸನಾನುಗುಣವಾಗಿ ಆಸೆಯೂ ಅನಕ್ಕ ಅಡ್ಡಿಯುಂಟಾದಲ್ಲಿ ದ್ವೇಷವೂ ವ್ಯವಸ್ಥಿತವಾಗಿವೆ. ಈ ರಾಗದ್ವೇಷ

ಗಳೆರಡೂ ಜ್ಞಾನಯೋಗಕ್ಕೆ ತೊಡಗುವವನಿಗೆ ದುರ್ಜಯವಾದ ಶತ್ರುಗಳು. ಆದುದರಿಂದ ಜ್ಞಾನಯೋಗಕ್ಕೆ ತೊಡಗುವುದರ ಮೂಲಕ ಇವುಗಳಿಗೆ ಸಿಕ್ಕಿ ಕೆಡಬಾರದು.)

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।**
**ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥೩೫॥**

(ಟಿಪ್ಪಣಿ: ಇಲ್ಲಿ ಸ್ವಧರ್ಮವೆಂದರೆ, ಕರ್ಮಯೋಗ, ಏಕೆಂದರೆ ಇದು ಪ್ರಕೃತಿಗೆ ಸಜಾತೀಯವಾದ ವ್ಯಾಪಾರ, ಸ್ವಭಾವವಾಗಿಯೇ ಆಚರಿಸಲು ಸುಲಭ. ಪರಧರ್ಮವೆಂದರೆ–ಜ್ಞಾನಯೋಗ–ಏಕೆಂದರೆ ಪ್ರಕೃತಿ ಸಂಸರ್ಗವುಳ್ಳವರಿಗೆ ಸ್ವತಃ ಇದು ಆಚರಿಸಲು ದುಷ್ಕರ.)

ಸ್ವಲ್ಪಕಾಲ ಉತ್ತಮವಾಗಿ ಆಚರಿಸಿದ ಜ್ಞಾನಯೋಗಕ್ಕಿಂತಲೂ, ಸಾಂಗವಾಗಿ ಆಚರಿಸಲ್ಪಡದ ಕರ್ಮಯೋಗವೇ ಮೇಲು. (ಏಕೆಂದರೆ ಕರ್ಮಯೋಗವು ಮನುಷ್ಯನ ಪ್ರಕೃತಿಗೆ ಸದೃಶವಾದ ವ್ಯಾಪಾರ.) ಕರ್ಮಯೋಗಿಯು ಮಧ್ಯದಲ್ಲಿ ಮೃತನಾದರೂ ಮುಂದಿನ ಜನ್ಮದಲ್ಲಿ ವ್ಯಾಕುಲವಿಲ್ಲದೆ ಇದನ್ನು ಸಾಂಗವಾಗಿ ನೆರವೇರಿಸಬಹುದು. ಜ್ಞಾನಯೋಗವಾದರೋ ಭಯವನ್ನು ಒದಗಿಸುವುದು.

(ಟಿಪ್ಪಣಿ: ಇದು ಪ್ರಾಕೃತಿಗೆ ವಿಸದೃಶವಾದುದು. ಆದುದರಿಂದ ಸಪ್ರಮಾದ. ಕಡೆಯವರಿಗೂ ವ್ಯಾಕುಲವಿಲ್ಲದೆ ಇದನ್ನು ಸಾಧಿಸಲಾಗುವುದಿಲ್ಲ. ಮಧ್ಯದಲ್ಲಿ ಅಡ್ಡಿಯುಂಟಾದರೆ, ಅದರ ಸ್ವರೂಪವೇ ಅಳಿದು ಹೋಗುವುದು. ಹೀಗೆ ಸಗುಣವಾದರೂ ಸ್ವರೂಪವಿಚ್ಛೇದದ ಭಯವುಳ್ಳ ಜ್ಞಾನಯೋಗಕ್ಕಿಂತ ವೈಗುಣ್ಯಮಾತ್ರ (ಅಂಗವೈಕಲ್ಯ) ವುಳ್ಳ ಕರ್ಮಯೋಗವೇ ಮೇಲು, ಎಂದು ಭಾವ.)

**ಅರ್ಜುನ ಉವಾಚ—**

**ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ ।**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ ॥ ೩೬ ॥**

ಅರ್ಜುನನು ಹೇಳಿದನು—

ಎಲೈ ಕೃಷ್ಣನೇ! ತಾನು ಇಚ್ಛಿಸದಿದ್ದರೂ ಜ್ಞಾನಯೋಗಿಯು

ಬಲಾತ್ಕಾರದಿಂದ ತೊಡಗಿಸಲ್ಪಟ್ಟವನಂತೆ, ಏತರಿಂದ ಪ್ರೇರಿತನಾಗಿ ಪಾಪವನ್ನು ಮಾಡುವನು ?

(ಟಿಪ್ಪಣಿ : " ಸದೃಶಂ ಚೇಷ್ಟತೇ ಸ್ವಸ್ಯಾಃ— " ಎಂಬಲ್ಲಿ ಚೇತನನು ವಾಸನೆಯನ್ನು ಅನುವರ್ತಿಸುವನೆನ್ನಲಾಯಿತು. ಆದರೆ, ವಾಸನೆಯಾದರೋ ಚೇತನನಿಗೆ ಇಚ್ಛೆಯನ್ನುಂಟುಮಾಡಿ ಅದರ ಮೂಲಕ ಅವನನ್ನು ವಿಷಯಗಳಲ್ಲಿ ಪ್ರವರ್ತನಗೊಳಿಸುವುದು. ಜ್ಞಾನಯೋಗವನ್ನು ಇಚ್ಛಿಸುವವನಿಗಾದರೋ ಅದರ ವಿರುದ್ಧವಾದ ವಿಷಯಾನುಭವದಲ್ಲಿ ಇಚ್ಛೆಯೇ ಇಲ್ಲದುದರಿಂದ, ವಾಸನಾವಿಷಯವಾದ ಅನುಭವದಲ್ಲಿ ಅವನನ್ನು ಬಲಾತ್ಕರಿಸುವುದಾವುದು ? ಎಂದು ಪ್ರಶ್ನೆ ಮಾಡುವುದರ ಭಾವ.)

**ಶ್ರೀ ಭಗವಾನುವಾಚ—**

**ಕಾಮ ಏಷ ಕ್ರೋಧ ಏಷ ರಜೋಗುಣ ಸಮುದ್ಭವಃ ।**
**ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಂ ॥ ೩೭ ॥**

ಭಗವಂತನು ಹೇಳಿದನು—

ರಜೋಗುಣದಿಂದ ಉತ್ಪನ್ನವಾದ ಈ ಕಾಮ (ವಿಷಯಾಸಕ್ತಿ) ವು ಜ್ಞಾನಯೋಗಿಯನ್ನು ವಿಷಯಗಳ ಕಡೆಗೇ ಸೆಳೆಯುವುದು. ಇದಕ್ಕೆ ಅಡ್ಡಿಯಾದರೆ ಆಗ ಕೋಪವಾಗಿ ಪರಿಣಮಿಸಿ ಪರಹಿಂಸೆ ಮಾಡಿಸುವ ಮಹಾಪಾಪಿ ಇದು. ಇದರ ಹಸಿವು ಹಿಂಗದು. ಇದನ್ನು ಇಲ್ಲಿ ಸಹಜವಾದ ಶತ್ರುವೆಂದು ತಿಳಿ.

**ಧೂಮೇನಾವ್ರಿಯತೇ ವಹ್ನಿರ್ಯಥಾದರ್ಶೋ ಮಲೇನ ಚ ।**
**ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಂ ॥ ೩೮ ॥**

ಹೊಗೆ ಅಗ್ನಿಯನ್ನೂ ಕೊಳೆ ಕನ್ನಡಿಯನ್ನೂ ಪೊರೆ ಗರ್ಭವನ್ನೂ ಮುಚ್ಚುವಂತೆ ಕಾಮವು ಜಂತುವನ್ನು ಮುಚ್ಚಿದೆ.

(ಸಂಗತಿ : ಆವರಣಪ್ರಕಾರ ಹೇಗೆಂದರೆ,)

**ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ ।**
**ಕಾಮರೂಪೇಣ ಕೌನ್ತೇಯ ದುಷ್ಪೂರೇಣಾನಲೇನ ಚ ॥ ೩೯ ॥**

ಎಲೈ ಅರ್ಜುನನೇ! ನಿತ್ಯಶತ್ರುವಾದ ಈ ಕಾಮದಿಂದ ಜ್ಞಾನಿಯಾದವನ ಆತ್ಮವಿಷಯಜ್ಞಾನವು ಮುಸುಕಿ ಹೋಗಿದೆ. ಇದೊಂದು ಎಂದಿಗೂ ತೃಪ್ತಿಗೊಳಿಸಲಾಗದ ಅಗ್ನಿಯಂತೆ.

(ಸಂಗತಿ : ಹೇಗೆ ಆವರಿಸುವುದು ? ಎಂದರೆ

**ಇಂದ್ರಿಯಾಣಿ ಮನೋ ಬುದ್ಧಿರಸ್ಯಾಧಿಷ್ಠಾನಮುಚ್ಯತೇ ।**
**ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಂ ॥ ೪೦ ॥**

ಇಂದ್ರಿಯಗಳು, ಮನಸ್ಸು, ಬುದ್ಧಿ ಇವು ಈ ಶತ್ರುವಿಗೆ ವಾಸಸ್ಥಳಗಳು. ಇವುಗಳ ಮೂಲಕ ಈ ಕಾಮವು ಜ್ಞಾನವನ್ನು ಮುಸುಕಿ ಮನುಷ್ಯನನ್ನು ಮೋಹಕ್ಕೀಡುಮಾಡುವುದು (ಆತ್ಮಜ್ಞಾನಕ್ಕೆ ವಿಮುಖನನ್ನಾಗಿ ಮಾಡುವುದೆಂದು ಭಾವ.)

**ತಸ್ಮಾತ್ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ ।**
**ಪಾಪ್ಮಾನಂ ಪ್ರಜಹಿ ಹ್ಯೇನಂ ಜ್ಞಾನವಿಜ್ಞಾನನಾಶನಂ ॥ ೪೧ ॥**

ಆದುದರಿಂದ, ಎಲೈ ಭರತಶ್ರೇಷ್ಠನಾದ ಅರ್ಜುನನೆ! ನೀನು ಮೋಕ್ಷೋಪಾಯಕ್ಕೆ ಯತ್ನಿಸುವಾಗಲೇ ಇಂದ್ರಿಯಗಳನ್ನು ನಿಗ್ರಹಿಸಿ ಕರ್ಮಯೋಗವನ್ನು ಮಾಡು. ಆತ್ಮದ ಸ್ವರೂಪವನ್ನೂ ಅದರ ವಿವೇಚನ ರೂಪವಾದ ಜ್ಞಾನವನ್ನೂ ಹೋಗಲಾಡಿಸುವ ಈ ಪಾಪಿಯಾದ ಕಾಮವನ್ನು ಕೊಲ್ಲು.

**ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।**
**ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥ ೪೨ ॥**

ಜ್ಞಾನ ವಿರೋಧಿಗಳಲ್ಲಿ ಪ್ರಧಾನವಾದುವು–ಇಂದ್ರಿಯಗಳು (ಏಕೆಂದರೆ, ಇಂದ್ರಿಯಗಳು ವಿಷಯಗಳಲ್ಲಿ ವ್ಯಾಪರಿಸಿದರೆ ಆತ್ಮಜ್ಞಾನವುಂಟಾಗುವುದಿಲ್ಲ.) ಇಂದ್ರಿಯಗಳಿಗಿಂತ ಹೆಚ್ಚಿನದು–ಮನಸ್ಸು. (ಏಕೆಂದರೆ, ಇಂದ್ರಿಯಗಳು ವಿಷಯಗಳಿಗೆ ವಿಮುಖವಾದರೂ ಮನಸ್ಸು ವಿಷಯಪ್ರವಣವಾದಲ್ಲಿ ಆತ್ಮಜ್ಞಾನವು ಉಂಟಾಗದು) ಮನಸ್ಸಿಗಿಂತ ಹೆಚ್ಚಿನದು ಬುದ್ಧಿ (ಏಕೆಂದರೆ ಮನಸ್ಸು ಆತ್ಮ ವ್ಯತಿರಿಕ್ತ ವಿಷಯದಲ್ಲಿ ವರ್ತಿಸದಿದ್ದರೂ,

ಅದಕ್ಕೆ ವಿರುದ್ಧವಾದ ನಿಶ್ಚಯವೊದಗಲಾಗಿ ಆತ್ಮಜ್ಞಾನವು ಉದಯಿಸುವುದಿಲ್ಲ.) ಈ ಬುದ್ಧಿಗಿಂತ ಹೆಚ್ಚಿನದು–ಕಾಮ; [ಏಕೆಂದರೆ, ಇಂದ್ರಿಯಾದಿಗಳೆಲ್ಲ ವೃತ್ತ್ಯಂತರ ವಿಮುಖವಾಗಿದ್ದರೂ ರಜೋಗುಣದಿಂದುಂಟಾದ ಕಾಮ (ಇಚ್ಛೆ) ವೆಂಬುದು ಇರುವಲ್ಲಿ, ಅದೇ ಈ ಇಂದ್ರಿಯಾದಿಗಳನ್ನೆಲ್ಲ ತನ್ನಕಡೆಗೇ ತಿರುಗಿಸಿ ಆತ್ಮಜ್ಞಾನವನ್ನು ಉಂಟಾಗದಂತೆ ಮಾಡುತ್ತದೆ.]

**ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ ।**
**ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಂ ॥೪೩॥**

ಎಲೈ ಮಹಾಬಾಹುವೇ! ಜ್ಞಾನಯೋಗದ ವಿರೋಧಿಗಳಲ್ಲಿ ಬುದ್ಧಿಗಿಂತಲೂ ಈ ಕಾಮವು ಹೆಚ್ಚಿನದೆಂದು ಅರಿತು, ಬುದ್ಧಿಯಿಂದ ಮನಸ್ಸನ್ನು ಕರ್ಮಯೋಗದಲ್ಲಿ ತಡೆದಿರಿಸಿ ಕಾಮವೆಂಬ ದುಸ್ಸಹವಾದ ಶತ್ರುವನ್ನು ನಾಶಗೊಳಿಸು.

ಇಲ್ಲಿಗೆ ಶ್ರೀ ಗೀತಾಭಾಷ್ಯದೀಪಿಕೆಯಲ್ಲಿ ಕರ್ಮಯೋಗವೆಂಬ
ಮೂರನೆಯ ಅಧ್ಯಾಯ ಮುಗಿಯಿತು.



ಅಧ್ಯಾಯ ೪

# ಕರ್ಮಯೋಗದ ಒಳಭೇದಗಳು

(ಸಂಗತಿ : ಮೂರನೆಯ ಅಧ್ಯಾಯದಲ್ಲಿ ಜ್ಞಾನಯೋಗ–ಕರ್ಮಯೋಗಗಳಲ್ಲಿ ಅಧಿಕಾರವಿರುವವರಿಗೆಲ್ಲ ಕರ್ಮಯೋಗವೇ ಅವಶ್ಯ ಕರ್ತವ್ಯವೆಂದು ಸಕಾರಣವಾಗಿ ಹೇಳಲಾಯಿತು. ಅದನ್ನೇ ಮತ್ತೆ ದೃಢಪಡಿಸುವುದಕ್ಕಾಗಿ, ಈ ನಾಲ್ಕನೆಯ ಅಧ್ಯಾಯದಲ್ಲಿ ಭಗವಂತನಾದ ತಾನು ಈ ಕರ್ಮಯೋಗವನ್ನು ಜಗತ್ತುಗಳನ್ನೆಲ್ಲ ಉದ್ಧರಿಸಲು ಮನ್ವನ್ತರಾದಿಯಲ್ಲಿಯೇ ಉಪದೇಶಿಸಿದುದೆಂದೂ ಇದರೊಳಗೇ ಜ್ಞಾನವೂ ಸೇರಿರುವುದರಿಂದ ಇದು ಜ್ಞಾನಾಕಾರವಾದುದೆಂದೂ ಪ್ರದರ್ಶಿಸುತ್ತಾನೆ. ಅಲ್ಲದೆ ಕರ್ಮಯೋಗದಲ್ಲಿ ಜ್ಞಾನಾಂಶಕ್ಕೇ ಪ್ರಾಧಾನ್ಯವನ್ನೂ ಕರ್ಮಯೋಗದ ಸ್ವರೂಪವನ್ನೂ ಭೇದಗಳನ್ನೂ ಮತ್ತು ಪ್ರಾಸಂಗಿಕವಾಗಿ, ತನ್ನ ಅವತಾರದ ರಹಸ್ಯವನ್ನೂ ಕೂಡ ಭಗವಂತನು ಇಲ್ಲಿ ಹೇಳಿರುತ್ತಾನೆ.)

ಶ್ರೀ ಭಗವಾನುವಾಚ—

**ಇಮಂ ವಿವಸ್ವತೇ ಯೋಗಂ ಪ್ರೋಕ್ತವಾನಹಮವ್ಯಯಂ ।**
**ವಿವಸ್ವಾನ್ಮನವೇ ಪ್ರಾಹ ಮನುರಿಕ್ಷ್ವಾಕವೇಽಬ್ರವೀತ್ ॥ ೧ ॥**

**ಏವಂ ಪರಂಪರಾಪ್ರಾಪ್ತಮಿಮಂ ರಾಜರ್ಷಯೋ ವಿದುಃ ।**
**ಸ ಕಾಲೇನೇಹ ಮಹತಾ ಯೋಗೋ ನಷ್ಟಃ ಪರನ್ತಪ ॥ ೨ ॥**

**ಸ ಏವಾಯಂ ಮಯಾ ತೇಽದ್ಯ ಯೋಗಃ ಪ್ರೋಕ್ತಃ ಪುರಾತನಃ ।**
**ಭಕ್ತೋಽಸಿ ಮೇ ಸಖಾ ಚೇತಿ ರಹಸ್ಯಂ ಹ್ಯೇತದುತ್ತಮಂ ॥ ೩ ॥**

(ಈ ಕರ್ಮಯೋಗವು ಈಗ ಯುದ್ಧ ಪ್ರೋತ್ಸಾಹಕ್ಕಾಗಿಯಾಗಲಿ ನಿನಗೆ ಮಾತ್ರವಾಗಲಿ ಹೇಳಿದುದಲ್ಲ. ಎಲ್ಲ ಜಗತ್ತುಗಳ ಉದ್ಧಾರಕ್ಕಾಗಿ) ಮೋಕ್ಷಸಾಧನವಾದ ಈ ಕರ್ಮಯೋಗವನ್ನು ನಾನು (ಮನ್ವಂತರಾದಿಯಲ್ಲಿಯೇ) ಸೂರ್ಯನಿಗೆ ಹೇಳಿದೆನು. ಸೂರ್ಯನು ಮನುವಿಗೆ ಹೇಳಿದನು.

ಮನುವಿನಿಂದ ಇಕ್ಷ್ವಾಕು—ಹೀಗೆ ಉಪದೇಶ ಪರಂಪರೆಯಿಂದ ಬಂದ ಇದು ರಾಜರ್ಷಿಗಳಿಗೂ ತಿಳಿಯಿತು. (ಬುದ್ಧಿಮಾಂದ್ಯದಿಂದ) ದೀರ್ಘ ಕಾಲದ ನಂತರ ಇದು ನಷ್ಟಪ್ರಾಯವಾಯಿತು. ಪುರಾತನವಾದ ಈ ಉತ್ತಮ ರಹಸ್ಯವನ್ನೇ ಸ್ನೇಹದಿಂದಲೂ ಅತಿಮಾತ್ರ ಭಕ್ತಿಯಿಂದಲೂ ನನ್ನಲ್ಲಿ ಶರಣಾಗತನಾಗಿರುವ ನಿನಗೆ ಈಗ (ಸಾಂಗವಾಗಿಯೂ, ವಿಸ್ತಾರವಾಗಿಯೂ) ಹೇಳಿರುವೆನು. (ಇದು ವೇದಾಂತೋದಿತವಾದ ಅತ್ಯುತ್ತಮ ರಹಸ್ಯವಾದುದರಿಂದ ನನ್ನನ್ನು ಹೊರತು ಬೇರೆ ಯಾರಿಂದಲೂ ಇದನ್ನು ತಿಳಿಯಲೂ, ಹೇಳಲೂ ಸಾಧ್ಯವಿಲ್ಲವೆಂದು ಭಾವ.)

(ಸಂಗತಿ: ಈ ಪ್ರಸಂಗದಲ್ಲಿ ಭಗವಂತನ ಅವತಾರದ ತತ್ತ್ವವನ್ನು ತಿಳಿಯಲು ಅರ್ಜುನನು ಹೇಳಿದನು.)

**ಅರ್ಜುನ ಉವಾಚ—**

**ಅಪರಂ ಭವತೋ ಜನ್ಮ ಪರಂ ಜನ್ಮ ವಿವಸ್ವತಃ ।**
**ಕಥಮೇತದ್ವಿಜಾನೀಯಾಂ ತ್ವಮಾದೌ ಪ್ರೋಕ್ತವಾನಿತಿ ॥**

ನಿನ್ನ ಜನ್ಮವು ಈಗಿನದು. ಸೂರ್ಯನದು ನಿನಗಿಂತ 28 ಚತುರ್ಯುಗಗಳಷ್ಟು ಹಿಂದಿನದು. ಮನ್ವಂತರಾದಿಯಲ್ಲಿ ಅವನಿಗೆ ನೀನು ಈ ಕರ್ಮಯೋಗವನ್ನು ಉಪದೇಶಿಸಿದೆ ಎಂಬುದನ್ನು ಹೇಗೆ ನಾನು (ನಿಜವೆಂದು) ತಿಳಿಯಲಿ!

(ಟಿಪ್ಪಣಿ: ಇಲ್ಲಿ ಬಹುಕಾಲದ ಹಿಂದೆ ಹೇಳಿದ್ದೆನೆಂದರೆ ಅದು ಅಸಂಭವವು ಹೇಗೆ? ಜನ್ಮಾಂತರದಲ್ಲಿ ಅದು ನಡೆದಿರಬಹುದಲ್ಲವೆ? ಜನ್ಮಾಂತರ ಸ್ಮೃತಿಯೂ ಮಹಾತ್ಮರಿಗೆ ಇರಬಹುದಲ್ಲವೆ? ಪ್ರಕೃತದಲ್ಲಿ ವ್ಯಕ್ತ್ಯವಾದವನು ಸರ್ವೇಶ್ವರನೆಂಬುದೂ ಅರ್ಜುನನಿಗೆ ತಿಳಿಯದೆ ಇಲ್ಲ. ಮುಂದೆ,

"ಪರಂಬ್ರಹ್ಮ ಪರಂಧಾಮ ಪವಿತ್ರಂ ಪರಮಂ ಭವಾನ್ ।
ಪುರುಷಂ ಶಾಶ್ವತಂ ದಿವ್ಯಂ ಆದಿದೇವಮಜಂ ವಿಭುಂ ॥
ಆಹುಸ್ತ್ವಾಂ ಋಷಯಸ್ಸರ್ವೇ ದೇವರ್ಷಿರ್ನಾರದಸ್ತಥಾ ।
ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ॥"

10–12–13 ಎಂದು ತಾನೇ ಹೇಳುತ್ತಾನೆ.

ಅಲ್ಲದೆ ಯುಧಿಷ್ಠಿರನ ರಾಜಸೂಯಾದಿಗಳಲ್ಲಿಯೂ ಭೀಷ್ಮಾದಿಗಳಿಂದ
" ಕೃಷ್ಣ ಏವ ಹಿ ಲೋಕಾನಾಂ ಉತ್ಪತ್ತಿರಪಿ ಚಾಪ್ಯಯಃ ।
ಕೃಷ್ಣಸ್ಯ ಹಿ ಕೃತೇ ಭೂತಮಿದಂ ವಿಶ್ವಂ ಚರಾಚರಂ ॥ "
—ಇತ್ಯಾದಿಯಾಗಿ ಶ್ರೀಕೃಷ್ಣನು ಭಗವಂತನೆಂಬುದನ್ನು ಅನೇಕಾವರ್ತಿ ಅರ್ಜುನನು ಕೇಳಿದ್ದಾನೆಯಲ್ಲವೆ ?—ಎಂದರೆ, ನಿಜ. ಶ್ರೀಕೃಷ್ಣನು ಭಗವಂತನೆಂಬುದನ್ನು ಅರ್ಜುನನು ತಿಳಿದೇ ಇದ್ದಾನೆ. ತಿಳಿದಿದ್ದರೂ ತಿಳಿಯುದವನಂತೆ ಕೇಳುವುದರ ಆಶಯವೇನೆಂದರೆ,—ನಿರ್ದೋಷನೂ, ಸಕಲ ಕಲ್ಯಾಣಗುಣಾಕರನೂ, ಸರ್ವೇಶ್ವರನೂ, ಸರ್ವಜ್ಞನೂ, ಸತ್ಯಸಂಕಲ್ಪನೂ, ಅವಾಪ್ತ ಸಮಸ್ತ ಕಾಮನೂ ಆದ ಭಗವಂತನು ಕರ್ಮಪರವಶರಾದ ದೇವ ಮನುಷ್ಯಾದಿಗಳಂತೆ ಹುಟ್ಟುವುದು ಇಂದ್ರಜಾಲಾದಿಗಳಂತೆ ಮಿಥ್ಯೆಯೇ ಅಥವಾ ಸತ್ಯವೇ ? ಸತ್ಯವಾದಲ್ಲಿ (1) ತನ್ನ ಪಾರಮೇಶ್ವರ ಸ್ವಭಾವದೊಡನೆಯೇ ಹುಟುತ್ತಾನೆಯೇ ಅಥವಾ ಅದನ್ನು ಬಿಟ್ಟು ಹುಟ್ಟುತ್ತಾನೆಯೇ ? ಅಂದರೆ ತ್ರಿಗುಣಾತ್ಮಕನಾಗಿ ಹುಟ್ಟುತ್ತಾನೆಯೇ ಅಥವಾ ಅಪ್ರಾಕೃತನಾಗಿಯೇ ಹುಟ್ಟುತ್ತಾನೆಯೇ ? (2) ಸಂಕಲ್ಪಮಾತ್ರದಿಂದ ಹುಟ್ಟುತ್ತಾನೆಯೇ ಅಥವಾ ಸ್ವೇಚ್ಛೆಯಿಂದ ಪುಣ್ಯಪಾಪಗಳನ್ನು ಪರಿಗ್ರಹಿಸಿಯೇ ? —ಅಂದರೆ ಹುಟ್ಟಲು ಕಾರಣ ಯಾವುದು ? (3) ಹುಟ್ಟುವುದು ಯಾವಾಗ ?—ಪುಣ್ಯ ಪಾಪಗಳ ವಿಪಾಕ ಕಾಲದಲ್ಲಿಯೇ ? ಅಥವಾ ಧರ್ಮಕ್ಕೆ ಗ್ಲಾನಿ ಮುಂತಾದುದು ಒದಗಿದಾಗಲೇ ? (4) ಹುಟ್ಟುವುದೇತಕ್ಕೆ ? ನಮ್ಮಹಾಗೆ ಸುಖ ದುಃಖಗಳ ಉಪಭೋಗಕ್ಕಾಗಿಯೇ ? ಅಥವಾ ಸಾಧು ಪರಿತ್ರಾಣಾದಿಗಳಿಗಾಗಿಯೇ ?—ಇತ್ಯಾದಿ ಪ್ರಶ್ನಾರ್ಥಗಳನ್ನು ಶ್ರೀ ಕೃಷ್ಣನ ಪ್ರತಿವಚನ ಪ್ರಕಾರದಿಂದ ಕಾಣಬಹುದು.

**ಶ್ರೀ ಭಗವಾನುವಾಚ—**

**ಬಹೂನಿ ಮೇ ವ್ಯತೀತಾನಿ ಜನ್ಮಾನಿ ತವ ಚಾರ್ಜುನ ।**
**ತಾನ್ಯಹಂ ವೇದ ಸರ್ವಾಣಿ ನ ತ್ವಂ ವೇತ್ಥ ಪರಂತಪ ॥**

ಭಗವಂತನು ಹೇಳಿದನು—

ಎಲೈ ಶತ್ರುತಾಪಿಯಾದ ಅರ್ಜುನನೇ ! ನನಗೂ, ನಿನಗೂ ಅನೇಕ ಜನ್ಮಗಳಾಗಿವೆ. ಅವನ್ನೆಲ್ಲ ನಾನು ಬಲ್ಲೆನು, ನೀನರಿಯೆ.

(ಸಂಗತಿ: ತನ್ನ ಅವತಾರ ಪ್ರಕಾರವನ್ನೂ, ದೇಹದ ಸ್ವರೂಪವನ್ನೂ, ಜನ್ಮಕ್ಕೆ ಕಾರಣವನ್ನೂ ಹೇಳುತ್ತಾನೆ.

**ಅಜೋಽಪಿ ಸನ್ನವ್ಯಯಾತ್ಮಾ ಭೂತಾನಾಮೀಶ್ವರೋಽಪಿ ಸನ್ ।**
**ಪ್ರಕೃತಿಂ ಸ್ವಾಮಧಿಷ್ಠಾಯ ಸಂಭವಾಮ್ಯಾತ್ಮಮಾಯಯಾ ॥**

ನಾನು ಹುಟ್ಟು ವ್ಯಯಗಳಿಲ್ಲದವನೂ, ಸರ್ವೇಶ್ವರನೂ ಆಗಿದ್ದರೂ, ಆ ನನ್ನ ಪಾರಮೇಶ್ವರ ಸ್ವಭಾವವನ್ನು ಬಿಡದೆಯೇ ಸ್ವೇಚ್ಛೆಯಿಂದ ಹುಟ್ಟುತ್ತೇನೆ.

(ಸರಂಗತಿ: ಜನ್ಮಕಾಲವಾವುದು ? ಎಂದರೆ ಹೇಳುತ್ತಾನೆ.)

**ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ ।**
**ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ ॥ ೭ ॥**

(ವೇದೋಕ್ತವಾದ) ಧರ್ಮವು ಕುಂದಿ (ವಿರುದ್ಧವಾದ) ಅಧರ್ಮ ಹೆಚ್ಚಿದಾಗಲೆಲ್ಲ ನಾನು ಹುಟ್ಟುತ್ತೇನೆ.

(ಸಂಗತಿ: ಹುಟ್ಟುವುದರ ಪ್ರಯೋಜನವೇನೆಂದರೆ, ಹೇಳುತ್ತಾನೆ.)

**ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ ।**
**ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ ॥**

ಶಿಷ್ಟರಕ್ಷಣ, ದುಷ್ಟಶಿಕ್ಷಣ ಮತ್ತು ವೈದಿಕ ಧರ್ಮೋದ್ಧರಣಗಳಿಗಾಗಿ ಯುಗಯುಗದಲ್ಲಿಯೂ ಹುಟ್ಟುತ್ತೇನೆ.

**ಜನ್ಮಕರ್ಮ ಚ ಮೇ ದಿವ್ಯಂ ಏವಂ ಯೋ ವೇತ್ತಿ ತತ್ತ್ವತಃ ।**
**ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ॥೯॥**

ಎಲೈ ಅರ್ಜುನನೇ ! ಹೀಗೆ ಅಪ್ರಾಕೃತವಾದ ನನ್ನ ಜನ್ಮ-ಕರ್ಮಗಳನ್ನು ಸರಿಯಾಗಿ ಅರಿಯುವವನು ಈ ದೇಹಾನಂತರ ಮತ್ತೆ ಹುಟ್ಟದೆ ನನ್ನನ್ನೇ ಪಡೆಯುವನು.

**ವೀತರಾಗಭಯಕ್ರೋಧಾ ಮನ್ಮಯಾ ಮಾಮುಪಾಶ್ರಿತಾಃ ।**
**ಬಹವೋ ಜ್ಞಾನತಪಸಾ ಪೂತಾ ಮದ್ಭಾವಮಾಗತಾಃ ॥ ೧೦ ॥**

ಈ ರೀತಿ ನನ್ನ ಜನ್ಮ-ಕರ್ಮಗಳ ತತ್ತ್ವಜ್ಞಾನವೆಂಬ ತಪಸ್ಸಿನಿಂದ ಪರಿಶುದ್ಧರಾಗಿ ರಾಗ, ಭಯ, ಕ್ರೋಧಗಳಿಂದ ಬಿಡಲ್ಪಟ್ಟು ನನ್ನಲ್ಲಿಯೇ ಮನಸ್ಸಿಟ್ಟವರೂ, ನನ್ನನ್ನೇ ಆಶ್ರಯಿಸಿದವರೂ ಆಗಿ ಬಹುಮಂದಿ ನನ್ನನ್ನು ಪಡೆದಿದ್ದಾರೆ.

**ಯೇ ಯಥಾ ಮಾಂ ಪ್ರಪದ್ಯಂತೇ ತಾಂಸ್ತಥೈವ ಭಜಾಮ್ಯಹಂ ।**
**ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥೧೧॥**

ಯಾರು ಯಾವ ವಿಧವಾಗಿ ನನ್ನನ್ನು ಅನುಭವಿಸಬೇಕೆಂಬ ಇಚ್ಛೆಯಿಂದ ಆಶ್ರಯಿಸುತ್ತಾರೆಯೋ ಅವರಿಗೆ ಹಾಗೆಯೇ ನಾನು ಕಾಣಿಸಿಕೊಳ್ಳುತ್ತೇನೆ. (ಹೆಚ್ಚೇಕೆ?) ಎಲೈ ಅರ್ಜುನನೇ! ಮನುಷ್ಯರು ತಾವು ಇಷ್ಟಪಡುವ ಸಕಲ ಪ್ರಕಾರಗಳಿಂದಲೂ ನನ್ನ ಅಸಾಧಾರಣ ಸ್ವಭಾವವನ್ನು ಅನುಭವಿಸುತ್ತಾರೆ.

(ಸಂಗತಿ : ಈಗ ಪ್ರಾಸಂಗಿಕವಾದ ಅವತಾರ ವೃತ್ತಾಂತವನ್ನು ಮುಗಿಸಿ ಪ್ರಕೃತ ಕರ್ಮಯೋಗವು ಜ್ಞಾನಾಕಾರವೂ ಆದುದೆಂದು ಹೇಳಲು, ಅಂಥಾ ಕರ್ಮಯೋಗಾಧಿಕಾರಿಯು ದುರ್ಲಭವೆಂದು ಮೊದಲು ಹೇಳುತ್ತಾನೆ.

**ಕಾಂಕ್ಷಂತಃ ಕರ್ಮಣಾಂ ಸಿದ್ಧಿಂ ಯಜಂತ ಇಹ ದೇವತಾಃ ।**
**ಕ್ಷಿಪ್ರಂ ಹಿ ಮಾನುಷೇ ಲೋಕೇ ಸಿದ್ಧಿರ್ಭವತಿ ಕರ್ಮಜಾ ॥೧೨॥**

ಲೌಕಿಕ ಪುರುಷರೆಲ್ಲರೂ ಪುತ್ರ, ಪಶು, ಅನ್ನ, ಸ್ವರ್ಗಗಳೇ ಮುಂತಾದ ಫಲಗಳನ್ನು ಅಪೇಕ್ಷಿಸುತ್ತ ಯಾಗ, ದಾನ, ಹೋಮಾದಿಗಳಿಂದ ಕೇವಲ ಇಂದ್ರಾದಿ ದೇವತೆಗಳನ್ನು ಪೂಜಿಸುತ್ತಾರೆ. ಆಯಾ ಫಲವೂ ಅವರಿಗೆ ಬೇಗನೆ ಈ ಲೋಕದಲ್ಲಿ ಕೈಗೂಡುವುದಷ್ಟೆ (ಯಾವನೂ ಸಂಸಾರದಲ್ಲಿ ಉದ್ವಿಗ್ನನಾಗಿ ಮೋಕ್ಷಾಭಿಲಾಷೆಯಿಂದ ಆ ಇಂದ್ರಾದಿ ದೇವತೆಗಳಿಗೆಲ್ಲ ಅಂತರಾತ್ಮನಾದ ನನ್ನನ್ನು ಹಿಂದೆ ಹೇಳಿದಂತೆ ಫಲಾಭಿಸಂಧಿ ರಹಿತವೂ, ಆತ್ಮಯಾಥಾತ್ಮ್ಯಜ್ಞಾನಪೂರ್ವಕವೂ ಆದ ಕರ್ಮಯೋಗದಿಂದ ಪೂಜಿಸುವುದಿಲ್ಲವೆಂದು ಭಾವ.)

(ಸಂಗತಿ : ಪಾಪಕ್ಷಯವಿಲ್ಲದಿರುವುದು ಎಲ್ಲರಿಗೂ ಸಮಾನ. ಆದರಿಂದ ವಿವೇಕವಿಲ್ಲದೆ ಕ್ಷಿಪ್ರ ಫಲಗಳಲ್ಲಿ ಆಸೆಯಿರುವುದೂ ಎಲ್ಲರಿಗೂ ಸಮಾನ.

ಆದುದರಿಂದ ಯಾವನಿಗೂ ಮೋಕ್ಷದಲ್ಲಿ ಆಸೆಯೇ ಹುಟ್ಟದು. ಹೀಗಾದಲ್ಲಿ ಮೋಕ್ಷೋಪಾಯವನ್ನು ವಿಧಿಸುವ ಶಾಸ್ತ್ರಕ್ಕೆ ಪ್ರಾಮಾಣ್ಯವೆಲ್ಲಿಯದು ? ಎಂಬ ಶಂಕೆಯನ್ನು ಮುಂದೆ ಎರಡು ಶ್ಲೋಕಗಳಿಂದ ಪರಿಹರಿಸುವುದಕ್ಕಾಗಿ ಕರ್ಮಯೋಗಾರಂಭಕ್ಕೆ ವಿರೋಧಿಯಾದ ಪಾಪವು ಕ್ಷಯಿಸುವ ಬಗೆಯನ್ನು ಹೇಳುತ್ತಾನೆ.

**ಚಾತುರ್ವರ್ಣ್ಯಂ ಮಯಾ ಸೃಷ್ಟಂ ಗುಣಕರ್ಮವಿಭಾಗಶಃ ।**
**ತಸ್ಯ ಕರ್ತಾರಮಪಿ ಮಾಂ ವಿದ್ಧ್ಯಕರ್ತಾರಮವ್ಯಯಂ ॥ ೧೩ ॥**

ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೇ ಮುಂತಾದ ಬ್ರಹ್ಮಾದಿ ಸ್ತಂಬ ಪರ್ಯಂತವಾದ ಪ್ರಪಂಚವನ್ನೆಲ್ಲ ಆಯಾ ಸತ್ತ್ವಾದಿ ಗುಣಗಳ ಮತ್ತು ಅವಕ್ಕನುಗುಣವಾದ ಶಮಾದಿ ಕರ್ಮಗಳ ವಿಭಾಗಕ್ಕೆ ತಕ್ಕಂತೆ ನಾನೇ ಸೃಷ್ಟಿಸಿದ್ದೇನೆ. (ಹಾಗೆಯೇ ಅವುಗಳ ಸ್ಥಿತಿ ಮತ್ತು ಸಂಹಾರಗಳನ್ನು ನಡೆಸುವವನೂ ನಾನೇ ಎಂಬುದು ಫಲಿತಾರ್ಥ.) ಹೀಗಾದರೂ (ಈ ವಿಚಿತ್ರ ಸೃಷ್ಟಿಯೇ ಮುಂತಾದುವು ಆಯಾ ಚೇತನರ ಪುಣ್ಯ ಪಾಪರೂಪ ಕರ್ಮವಿಶೇಷ ಪ್ರಯುಕ್ತವಾದುದರಿಂದ ನನಗೆ ಅದು ಲೇಪಿಸುವುದಿಲ್ಲವಾಗಿ) ನಾನು ಈ ವಿಷಮ ಸೃಷ್ಟಿಗೆ ಕರ್ತೃವಲ್ಲವೆಂದೂ, ಅವ್ಯಯನೆಂದೂ ತಿಳಿ.

**ನ ಮಾಂ ಕರ್ಮಾಣಿ ಲಿಂಪಂತಿ ನ ಮೇ ಕರ್ಮಫಲೇ ಸ್ಪೃಹಾ ।**
**ಇತಿ ಮಾಂ ಯೋಽಭಿಜಾನಾತಿ ಕರ್ಮಭಿರ್ನ ಸ ಬಧ್ಯತೇ ॥ ೧೪ ॥**

ಈ ವಿಚಿತ್ರ ಸೃಷ್ಟ್ಯಾದಿ ಕರ್ಮಗಳಿಗೆ ಆಯಾ ಚೇತನರ ಪುಣ್ಯಪಾಪ ರೂಪ ಕರ್ಮ ವಿಶೇಷಗಳೇ ಕಾರಣವೇ ಹೊರತು ನಾನು ಕಾರಣವಲ್ಲವಾದುದರಿಂದ) ಕರ್ಮಗಳು ನನ್ನನ್ನು ಸೋಂಕವು. ಕರ್ಮಗಳ ಫಲದಲ್ಲಿ ನನಗೆ ಆಸೆಯೂ ಇಲ್ಲ. ಹೀಗೆ ನನ್ನನ್ನು ತಿಳಿಯುವವನು ಕರ್ಮಯೋಗಕ್ಕೆ ವಿರೋಧಿಗಳಾದ ಪ್ರಾಚೀನ ಕರ್ಮ ಬಂಧನಕ್ಕೊಳಗಾಗನು.

**ಏವಂ ಜ್ಞಾತ್ವಾ ಕೃತಂ ಕರ್ಮ ಪೂರ್ವೈರಪಿ ಮುಮುಕ್ಷುಭಿಃ ।**
**ಕುರು ಕರ್ಮೈವ ತಸ್ಮಾತ್ತ್ವಂ ಪೂರ್ವೈಃ ಪೂರ್ವತರಂ ಕೃತಂ ॥**

ಹೀಗೆ ನನ್ನನ್ನು ತಿಳಿದು (ಸೂರ್ಯ, ಮನು ಮುಂತಾದ) ಹಿಂದಿನ ಮುಮುಕ್ಷುಗಳೆಲ್ಲ ಕರ್ಮವನ್ನು ಆಚರಿಸಿದರು. ಆದುದರಿಂದ ಹಿಂದಿನವರು ಮಾಡಿದ ಪುರಾತನವಾದ ಕರ್ಮವನ್ನೇ ನೀನೂ ಮಾಡು.

(ಸಂಗತಿ : ಮುಮುಕ್ಷುವು ಆಚರಿಸಬೇಕಾದ ಕರ್ಮದ ಸ್ವರೂಪ ವನ್ನು ತಿಳಿಯುವುದು ಕಷ್ಟವೆಂದು ಹೇಳುತ್ತಾನೆ.)

**ಕಿಂ ಕರ್ಮ ಕಿಮಕರ್ಮೇತಿ ಕವಯೋಽಪ್ಯತ್ರ ಮೋಹಿತಾಃ ।**
**ತತ್ತೇ ಕರ್ಮ ಪ್ರವಕ್ಷ್ಯಾಮಿ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್॥**

(ಮುಮುಕ್ಷುವು ಮಾಡಬೇಕಾದ) ಕರ್ಮವಾವುದು (ಅದರೊಳಗಿನ) ಆತ್ಮಜ್ಞಾನವು ಎಂತಹದು ಎಂಬ ವಿಷಯದಲ್ಲಿ ವಿದ್ವಾಂಸರೂ ಮೋಹಿತ ರಾಗಿರುವರು. ಅಂತಹ ಕರ್ಮವನ್ನು ನಿನಗೆ ಹೇಳುವೆನು. ಅದನ್ನು ತಿಳಿದು ಆಚರಿಸಿದರೆ, ಸಂಸಾರ ಬಂಧದಿಂದ ನೀನು ಬಿಡಲ್ಪಡುವೆ.

**ಕರ್ಮಣೋ ಹ್ಯಪಿ ಬೋದ್ಧವ್ಯಂ ಬೋದ್ಧವ್ಯಂ ಚ ವಿಕರ್ಮಣಃ ।**
**ಅಕರ್ಮಣಶ್ಚ ಬೋದ್ಧವ್ಯಂ ಗಹನಾ ಕರ್ಮಣೋ ಗತಿಃ ॥ ೧೭ ॥**

(ಇಲ್ಲಿ ಕರ್ಮ = ಮೋಕ್ಷಸಾಧನವಾದ ಕರ್ಮ. ವಿಕರ್ಮ = ನಿತ್ಯ, ನೈಮಿತ್ತಿಕ, ಕಾಮ್ಯ ಕರ್ಮಗಳಿಗೆ ಆವಶ್ಯಕವಾದ ದ್ರವ್ಯಾರ್ಜನಾದಿಗಳು. ಅಕರ್ಮ = ಜ್ಞಾನ.)

ಕರ್ಮ, ವಿಕರ್ಮ, ಅಕರ್ಮಗಳ ಸ್ವರೂಪವನ್ನು ತಿಳಿಯಬೇಕು. (ಮುಮುಕ್ಷುವು ಆಚರಿಸಬೇಕಾದ) ಕರ್ಮದ ಗತಿಯು ಗಹನವಾದುದು.

**ಕರ್ಮಣ್ಯಕರ್ಮ ಯಃ ಪಶ್ಯೇತ್ ಅಕರ್ಮಣಿ ಚ ಕರ್ಮ ಯಃ ।**
**ಸ ಬುದ್ಧಿಮಾನ್ ಮನುಷ್ಯೇಷು ಸ ಯುಕ್ತಃ ಕೃತ್ಸ್ನಕರ್ಮಕೃತ್॥**

(ಒಂದು ಕರ್ಮವನ್ನು ಮಾಡುವಾಗ ಆತ್ಮಜ್ಞಾನದೊಡನೆ ಮಾಡು ವುದರಿಂದ ಅದು ಜ್ಞಾನರೂಪ ಮತ್ತು ಕರ್ಮರೂಪ ಎರಡೂ ಆಗಿದೆ.) ಹೀಗೆ ಒಂದೊಂದು ಕರ್ಮವನ್ನೂ ಜ್ಞಾನರೂಪವನ್ನಾಗಿಯೂ, ಕರ್ಮ ರೂಪವನ್ನಾಗಿಯೂ ತಿಳಿಯುವವನು ಮನುಷ್ಯರೊಳಗೆ ಸಕಲ ಶಾಸ್ತ್ರಾರ್ಥ ಗಳನ್ನು ತಿಳಿದವನೂ, ಮೋಕ್ಷಕ್ಕೆ ಅರ್ಹನೂ, ಕರ್ಮಗಳನ್ನು ಸಂಪೂರ್ಣ ವಾಗಿ ಮಾಡುವವನೂ ಆಗುತ್ತಾನೆ.

(ಸಂಗತಿ: ಕರ್ಮವನ್ನೇ ಪ್ರತ್ಯಕ್ಷವಾಗಿ ಮಾಡುತ್ತಿರುವಾಗ ಅದರಲ್ಲಿ ಜ್ಞಾನಾಕಾರತೆ ತೋರುವುದು ಹೇಗೆ? — ಎಂದರೆ ಹೇಳುತ್ತಾನೆ.)

**ಯಸ್ಯ ಸರ್ವೇ ಸಮಾರಂಭಾಃ ಕಾಮಸಂಕಲ್ಪವರ್ಜಿತಾಃ ।**
**ಜ್ಞಾನಾಗ್ನಿದಗ್ಧಕರ್ಮಾಣಂ ತಮಾಹುಃ ಪಂಡಿತಂ ಬುಧಾಃ ॥೧೯॥**

(ಇಲ್ಲಿ ಕಾಮವೆಂದರೆ ಫಲಸಂಗ; ಸಂಕಲ್ಪವೆಂದರೆ ಸತ್ತ್ವಾದಿ ಗುಣ ಕೃತವಾದ ಕಾರ್ಯದಲ್ಲಿ ತಾನೇ ಕರ್ತೃವೆಂಬ ಭ್ರಾಂತಿ.)

ಯಾವ ಮುಮುಕ್ಷುವು ಮಾಡುವ ಲೌಕಿಕ ವೈದಿಕ ಕಾರ್ಯಗಳೆಲ್ಲವೂ ಕಾಮಸಂಕಲ್ಪರಹಿತಗಳೋ ಅಂಥವನನ್ನು ಪಂಡಿತನೆಂದೂ (ದೇಹ ಮತ್ತು ಆತ್ಮದ ವಿವೇಕ ಜ್ಞಾನಿ) ಆ ಕರ್ಮದಲ್ಲಿ ಅಡಗಿರುವ ಆತ್ಮದ ನಿಜ ಸ್ವರೂಪದ ಅನುಸಂಧಾನವೆಂಬ ಬೆಂಕಿಯಲ್ಲಿ ಅವನ ಪ್ರಾಚೀನ ಕರ್ಮಗಳು ಭಸ್ಮವಾಗಿರುವುವೆಂದೂ ತತ್ತ್ವಜ್ಞರು ಹೇಳುತ್ತಾರೆ.

(ಕರ್ಮವನ್ನು ಮಾಡುವಾಗಲೂ ಈ ಜ್ಞಾನಾಂಶಕ್ಕೇ ಪ್ರಾಧಾನ್ಯವಿರುವುದರಿಂದ ಆ ಕರ್ಮವು ಜ್ಞಾನಾಕಾರವಾದುದೆಂದು ಭಾವ.)

(ಸಂಗತಿ : ಇವನ್ನೇ ವಿವರಿಸುತ್ತಾನೆ.)

**ತ್ಯಕ್ತ್ವಾ ಕರ್ಮಫಲಾಸಙ್ಗಂ ನಿತ್ಯತೃಪ್ತೋ ನಿರಾಶ್ರಯಃ ।**
**ಕರ್ಮಣ್ಯಭಿಪ್ರವೃತ್ತೋಽಪಿ ನೈವ ಕಿಂಚಿತ್ಕರೋತಿ ಸಃ ॥ ೨೦ ॥**

ಕರ್ಮಫಲದಲ್ಲಿ ಆಸೆಯನ್ನು ಬಿಟ್ಟು ನಿತ್ಯನಾದ ಆತ್ಮನ ಸ್ವರೂಪದಲ್ಲಿಯೇ ತೃಪ್ತನಾಗಿ ಅನಿತ್ಯವಾದ ದೇಹಾದಿಗಳಲ್ಲಿ ಆಶ್ರಯಬುದ್ಧಿ ಇಡದೆ ಇರುವವನು ಕರ್ಮದಲ್ಲಿ ಎಲ್ಲ ಬಗೆಯಿಂದ ತೊಡಗಿದ್ದರೂ ಯಾವ ಕರ್ಮವನ್ನೂ ಮಾಡುವವನೇ ಅಲ್ಲ. (ಕರ್ಮವೆಂಬ ನೆಪದಿಂದ ಜ್ಞಾನವನ್ನೇ ಅವನು ಅಭ್ಯಾಸ ಮಾಡುವವನೆಂದು ಭಾವ.)

(ಸಂಗತಿ : ಮತ್ತೆಯೂ ಕರ್ಮದ ಜ್ಞಾನಾಕಾರತೆಯನ್ನೇ ಶೋಧಿಸಲಾಗುತ್ತದೆ.)

**ನಿರಾಶೀರ್ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ ।**
**ಶಾರೀರಂ ಕೇವಲಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ ॥೨೧॥**

ನಿಷ್ಕಾಮನೂ, ಮನಸ್ಸನ್ನು ವಿಷಯಾಂತರಗಳ ಕಡೆ ಬಿಡದವನೂ, ಪ್ರಾಕೃತ ಭೋಗ್ಯ ಭೋಗೋಪಕರಣಗಳಲ್ಲಿ ಮಮತೆಯಿಲ್ಲದವನೂ

ಆದವನು (ಬದುಕಿರುವವರಿವಿಗೂ) ಶರೀರ ಸಂಬಂಧ ಪ್ರಯುಕ್ತವಾಗಿ ಮಾತ್ರವೇ ಕೆಲಸಮಾಡುವವನಾಗಿ ಸಂಸಾರವನ್ನು ಹೊಂದುವುದಿಲ್ಲ.

(ಟಿಪ್ಪಣಿ : ಇಲ್ಲಿ "ಶಾರೀರಂ ಕರ್ಮ" — ಎಂದರೆ, ಶರೀರ ಸಂಬಂಧಿಯಾದ ಕರ್ಮ ಅಥವಾ ಶರೀರವುಳ್ಳವನಿಗೆ ಬಿಡಲಾಗದಂಥ ಕರ್ಮ ಅಥವಾ ಶರೀರ ಧಾರಣಾದಿಗಳಿಗಾಗಿ ಮಾಡತಕ್ಕ ಕರ್ಮ—ಎಂದು ಭಾವ.)

**ಯದೃಚ್ಛಾಲಾಭಸಂತುಷ್ಟಃ ದ್ವನ್ದ್ವಾತೀತೋ ವಿಮತ್ಸರಃ ।**
**ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಽಪಿ ನ ನಿಬಧ್ಯತೇ ॥ ೨೨ ॥**

ತಾನಾಗಿ ದೊರೆತ ಶರೀರ ಧಾರಣಾದಿಗಳಿಗೆ ಉಪಯುಕ್ತವಾದ ವಸ್ತುಗಳಿಂದ ತೃಪ್ತಿಪಡೆದವನೂ, ತಪ್ಪಿಸಿಕೊಳ್ಳಲಾಗದ ಶೀತೋಷ್ಣಾದಿಗಳನ್ನು ಸಹಿಸುವವನೂ, ಮತ್ಸರವಿಲ್ಲದವನೂ, ಜಯಾಪಜಯಗಳಲ್ಲಿ ಸಮಭಾವನೆಯುಳ್ಳವನೂ ಆದವನು ಬಂಧಹೇತುವಾದ ಕರ್ಮವನ್ನು ಮಾಡಿಯೂ ಬಂಧನಕ್ಕೊಳಗಾಗನು. (ಕರ್ಮಯೋಗದಿಂದಲೇ ಜ್ಞಾನಯೋಗದ ಫಲವು ಅವನಿಗೆ ಲಭಿಸುವುದೆಂದು ಭಾವ.)

**ಗತಸಙ್ಗಸ್ಯ ಮುಕ್ತಸ್ಯ ಜ್ಞಾನಾವಸ್ಥಿತಚೇತಸಃ ।**
**ಯಜ್ಞಾಯಾಚರತಃ ಕರ್ಮ ಸಮಗ್ರಂ ಪ್ರವಿಲೀಯತೇ ॥ ೨೩ ॥**

ಆತ್ಮ ವಿಷಯಜ್ಞಾನ ಒಂದರಲ್ಲಿಯೇ ಆಸಕ್ತನಾಗಿರುವುದರಿಂದ ಇತರ ಸಂಗಗಳನ್ನು ಬಿಟ್ಟವನೂ ಅದರಿಂದಲೇ ಎಲ್ಲ ಪರಿಗ್ರಹಗಳನ್ನೂ ಬಿಟ್ಟವನೂ (ಹೊಟ್ಟೆಯಪಾಡಿಗೆ ಮಾತ್ರವಲ್ಲದೆ ಹಿಂದೆ ಹೇಳಿದ) ಯಜ್ಞಾದಿಗಳನ್ನು ನೆರವೇರಿಸುವುದಕ್ಕಾಗಿ ಕರ್ಮವನ್ನು ಮಾಡುವವನೂ ಆದವನ ಪ್ರಾಚೀನ ಕರ್ಮವೆಲ್ಲವೂ ಲಯ ಹೊಂದುವುದು.)

(ಸಂಗತಿ : ಹೀಗೆ, ಪ್ರಕೃತಿಯಿಂದ ಬೇರೆಯಾಗಿರುವ ಆತ್ಮಸ್ವರೂಪವನ್ನು ಧ್ಯಾನಿಸಿಕೊಂಡು ಕರ್ಮ ಮಾಡುವುದರಿಂದ ಕರ್ಮಕ್ಕೆ ಜ್ಞಾನಾಕಾರವನ್ನು ಹೇಳಲಾಯಿತು. ಈಗ ಎಲ್ಲ ಕರ್ಮಗಳೂ ಮತ್ತು ಅವುಗಳ ಪರಿಕರಗಳೂ ಭಗವದಾತ್ಮಕವೆಂದು ಚಿಂತಿಸಿ ಮಾಡುವುದರಿಂದಲೂ ಕರ್ಮವು ಜ್ಞಾನಾಕಾರವಾಗುವುದೆಂದು ಹೇಳುತ್ತಾನೆ.)

**ಬ್ರಹ್ಮಾರ್ಪಣಂ ಬ್ರಹ್ಮ ಹವಿಃ ಬ್ರಹ್ಮಾಗ್ನೌ ಬ್ರಹ್ಮಣಾ ಹುತಂ ।**
**ಬ್ರಹ್ಮೈವ ತೇನ ಗನ್ತವ್ಯಂ ಬ್ರಹ್ಮಕರ್ಮಸಮಾಧಿನಾ ॥ ೨೪ ॥**

ಬ್ರಹ್ಮಕ್ಕೆ ಹವಿಸ್ಸು ಏತರಿಂದ ಅರ್ಪಿಸಲ್ಪಡುತ್ತದೆಯೋ ಆ ಸ್ರುಕ್ ಎಂಬುದೂ ಬ್ರಹ್ಮ; ಆ ಹವಿಸ್ಸೂ ಬ್ರಹ್ಮವೇ; ಆ ಹವಿಸ್ಸು ಹೋಮ ಮಾಡಲ್ಪಡುವ ಅಗ್ನಿಯೂ ಬ್ರಹ್ಮ; ಆ ಅಗ್ನಿಯಲ್ಲಿ ಹೋಮ ಮಾಡುವ ಯಜಮಾನನೂ ಬ್ರಹ್ಮ. ಹೀಗೆ ಎಲ್ಲ ಕರ್ಮವೂ ಬ್ರಹ್ಮಕಾರ್ಯವಾದುದರಿಂದ ಅಥವಾ ಬ್ರಹ್ಮಶರೀರವಾದುದರಿಂದ ಬ್ರಹ್ಮಮಯವೆಂದು ಯಾವನು ನೆನೆಯುತ್ತಾನೆಯೋ ಅವನು ಬ್ರಹ್ಮಭೂತವಾದ ಆತ್ಮ ಸ್ವರೂಪವನ್ನು ಸಾಕ್ಷಾತ್ಕರಿಸುತ್ತಾನೆ. (ಮುಮುಕ್ಷುವು ತಾನು ಮಾಡುವ ಕರ್ಮವನ್ನೆಲ್ಲ ಪರಬ್ರಹ್ಮಾತ್ಮಕವೆಂದು ಚಿಂತಿಸಿ ಮಾಡಿದರೆ ಆ ಕರ್ಮವೇ ಅವನಿಗೆ ಜ್ಞಾನ ಯೋಗದ ಅಪೇಕ್ಷೆಯಿಲ್ಲದೆ ನೇರವಾಗಿ ಆತ್ಮಾವಲೋಕನಕ್ಕೆ ಸಾಧನ ವಾಗುವುದು - ಎಂದು ಭಾವ.)

(ಸಂಗತಿ ; ಹೀಗೆ ಕರ್ಮವು ಜ್ಞಾನಾಕಾರವಾಗುವುದನ್ನು ಪ್ರತಿಪಾದಿಸಿ, ಕರ್ಮಯೋಗದ ಭೇದಗಳನ್ನು ಹೇಳುತ್ತಾನೆ.

**ದೈವಮೇವಾಪರೇಯಜ್ಞಂ ಯೋಗಿನಃ ಪರ್ಯುಪಾಸತೇ ।**
**ಬ್ರಹ್ಮಾಗ್ನಾವಪರೇ ಯಜ್ಞಂ ಯಜ್ಞೇನೈವೋಪಜುಹ್ವತಿ ॥೨೫॥**

ಕೆಲವು ಕರ್ಮಯೋಗಿಗಳು ದೇವಾರ್ಚನರೂಪವಾದ ಯಜ್ಞದಲ್ಲಿಯೇ ನಿಷ್ಠರಾಗುತ್ತಾರೆ ; ಇನ್ನು ಕೆಲವರು ಸ್ರುಗಾದಿಗಳಿಂದ ಹವಿಸ್ಸನ್ನು ಬ್ರಹ್ಮರೂಪವಾದ ಅಗ್ನಿಯಲ್ಲಿ ಹೋಮಮಾಡುತ್ತಾರೆ. (ಕೆಲವರು ಯಾಗದಲ್ಲಿಯೂ, ಕೆಲವರು ಹೋಮದಲ್ಲಿಯೂ ನಿಷ್ಠರಾಗುತ್ತಾರೆಂದು ಭಾವ.)

**ಶ್ರೋತ್ರಾದೀನೀನ್ದ್ರಿಯಾಣ್ಯನ್ಯೇ ಸಂಯಮಾಗ್ನಿಷು ಜುಹ್ವತಿ ।**
**ಶಬ್ದಾದೀನ್ವಿಷಯಾನನ್ಯೇ ಇನ್ದ್ರಿಯಾಗ್ನಿಷು ಜುಹ್ವತಿ ॥ ೨೬ ॥**

ಮತ್ತೆ ಕೆಲವರು ಸಂಯಮವೆಂಬ ಅಗ್ನಿಯಲ್ಲಿ ಕಿವಿಯೇ ಮುಂತಾದ ಇಂದ್ರಿಯಗಳನ್ನು ಹೋಮಮಾಡುವರು. (ಇಂದ್ರಿಯ ನಿಯಮನದಲ್ಲಿ ತೊಡಗುತ್ತಾರೆಂದು ಭಾವ.) ಇನ್ನು ಕೆಲವರು ಶಬ್ದಾದಿ ವಿಷಯಗಳನ್ನು

ಇಂದ್ರಿಯಗಳೆಂಬ ಅಗ್ನಿಗಳಲ್ಲಿ ಹೋಮ ಮಾಡುವರು. (ವಿಷಯಗಳ ನಿಯಮನದಲ್ಲಿ ತೊಡಗುತ್ತಾರೆಂದು ಭಾವ. ವಿಷಯಗಳ ನಿಯಮನ ವೆಂದರೆ ಇಂದ್ರಿಯಗಳಿಗೆ ವಿಷಯಗಳಲ್ಲಿ ಪ್ರವಣತೆಯುಂಟಾಗದಿರುವುದ ಕ್ಕಾಗಿ, ಆ ವಿಷಯಗಳನ್ನು ಇಂದ್ರಿಯಗಳಿಂದ ದೂರಮಾಡುವುದು.)

(ಟಿಪ್ಪಣಿ : ಇಲ್ಲಿ "ಸಂಯಮ" ವನ್ನು ಅಗ್ನಿಯೆಂದು ರೂಪಿಸಿರು ವುದರ ಕಾರಣ—ಅಗ್ನಿಯು ಹವಿಸ್ಸನ್ನು ಸುಟ್ಟು ಭಸ್ಮವಾಗಿ ಮಾಡಿಬಿಡು ವಂತೆ ಇದೂ ಇಂದ್ರಿಯಗಳನ್ನು ನಿರ್ವ್ಯಾಪಾರಗೊಳಿಸುವುದು. ಹಾಗೆಯೇ ಇಂದ್ರಿಯಗಳೆಂಬ ಅಗ್ನಿಗಳಲ್ಲಿ ಶಬ್ದಾದಿ ವಿಷಯಗಳನ್ನು ಹೋಮ ಮಾಡು ವುದೆಂದರೆ—ಹೋಮದಿಂದ ಹವಿಸ್ಸು ನಾಶ ಹೊಂದುವಂತೆ, ವಿಷಯ ಗಳನ್ನು ಇಂದ್ರಿಯಗಳಿಂದ ದೂರೀಕರಿಸುವುದರಿಂದ ಅವುಗಳ ಸಂಬಂಧ ವಿನಾಶ ಹೊಂದುತ್ತದೆಂದು ಭಾವ.)

**ಸರ್ವಾಣೀನ್ದ್ರಿಯ ಕರ್ಮಾಣಿ ಪ್ರಾಣಕರ್ಮಾಣಿ ಚಾಪರೇ ।**
**ಆತ್ಮಸಂಯಮಯೋಗಾಗ್ನೌ ಜುಹ್ವತಿ ಜ್ಞಾನದೀಪಿತೇ ॥ ೨೭ ॥**

ಕೆಲವರು ಎಲ್ಲ ಇಂದ್ರಿಯ ಕರ್ಮಗಳನ್ನೂ, ಪ್ರಾಣ ಕರ್ಮಗಳನ್ನೂ ಜ್ಞಾನದಿಂದ ಪ್ರಜ್ವಲಿತವಾದ ಮನಸ್ಸಂಯಮವೆಂಬ ಯೋಗಾಗ್ನಿಯಲ್ಲಿ ಹೋಮ ಮಾಡುತ್ತಾರೆ.

(ಟಿಪ್ಪಣಿ : ಇಲ್ಲಿ ಇಂದ್ರಿಯ ಕರ್ಮಗಳೆಂದರೆ—ದರ್ಶನ ಸ್ಪರ್ಶನ ವಚನಾದಾನ ಮುಂತಾದುವು. ಪ್ರಾಣ ಕರ್ಮಗಳೆಂದರೆ—ಉಚ್ಛ್ವಾಸ ನಿಶ್ವಾಸಾದಿಗಳು.)

**ದ್ರವ್ಯಯಜ್ಞಾಸ್ತಪೋಯಜ್ಞಾಃ ಯೋಗಯಜ್ಞಾಸ್ತಥಾಪರೇ ।**
**ಸ್ವಾಧ್ಯಾಯಜ್ಞಾನಯಜ್ಞಾಶ್ಚ ಯತಯಃ ಸಂಶಿತವ್ರತಾಃ ॥ ೨೮ ॥**

ದೃಢ ಸಂಕಲ್ಪದಿಂದ ಯತ್ನಿಸತಕ್ಕವರಾದ ಕರ್ಮಗಳಲ್ಲಿ ಕೆಲವರು ದ್ರವ್ಯದಿಂದ ಯಜ್ಞ ಮಾಡುತ್ತಾರೆ. (ಅಂದರೆ,—ನ್ಯಾಯವಾಗಿ ದ್ರವ್ಯ ಗಳನ್ನು ಸಂಪಾದಿಸಿ ಅವುಗಳಿಂದ ಕೆಲವರು ದೇವತಾರ್ಚನೆಯನ್ನೂ, ಕೆಲವರು ದಾನಗಳನ್ನೂ, ಕೆಲವರು ಯಾಗಗಳನ್ನೂ, ಕೆಲವರು ಹೋಮ ಗಳನ್ನೂ ಮಾಡುತ್ತಾರೆ. ಇದಕ್ಕೆಲ್ಲ ದ್ರವ್ಯ ಯಜ್ಞವೆಂದು ಹೆಸರು.) ಕೆಲ

ವರು ತಪಸ್ಸಿನಿಂದ ಯಜ್ಞವನ್ನು ಮಾಡುತ್ತಾರೆ (ಅಂದರೆ,—ಕೃಚ್ಛ್ರ ಚಾಂದ್ರಾಯಣೋಪವಾಸಾದಿಗಳಲ್ಲಿ ನಿಷ್ಠರಾಗುತ್ತಾರೆ. ಕೆಲವರು ಯೋಗದಿಂದ ಯಜ್ಞ ಮಾಡುತ್ತಾರೆ. (ಅಂದರೆ,—ಪುಣ್ಯತೀರ್ಥ, ಪುಣ್ಯಸ್ಥಾನ ಪ್ರಾಪ್ತಿಗಳಲ್ಲಿ ನಿಷ್ಠರಾಗುತ್ತಾರೆ.) ಕೆಲವರು ವೇದಾಭ್ಯಾಸಪರರಾಗುತ್ತಾರೆ. ಕೆಲವರು ಅದರ ಅರ್ಥ ಜ್ಞಾನಾಭ್ಯಾಸದಲ್ಲಿ ನಿಷ್ಠರಾಗುತ್ತಾರೆ.

**ಅಪಾನೇ ಜುಹ್ವತಿ ಪ್ರಾಣಂ ಪ್ರಾಣೇಽಪಾನಂ ತಥಾಽಪರೇ ।**
**ಪ್ರಾಣಾಪಾನಗತೀ ರುದ್ಧ್ವಾ ಪ್ರಾಣಾಯಾಮಪರಾಯಣಾಃ ॥**
**ಅಪರೇ ನಿಯತಾಹಾರಾಃ ಪ್ರಾಣಾನ್ ಪ್ರಾಣೇಷು ಜುಹ್ವತಿ ।**

ಇನ್ನು ಕೆಲವು ಕರ್ಮಯೋಗಿಗಳು ಆಹಾರ ನಿಯಮವುಳ್ಳವರಾಗಿ ಪ್ರಾಣವನ್ನು ಅಪಾನದಲ್ಲಿಯೂ, (ಪೂರಕ) ಅಪಾನವನ್ನು ಪ್ರಾಣದಲ್ಲಿಯೂ (ರೇಚಕ) ಪ್ರಾಣ ಮತ್ತು ಅಪಾನ ವಾಯುಗಳ ಗತಿಯನ್ನು ನಿರೋಧಿಸಿ ಪ್ರಾಣ ವೃತ್ತಿ ಭೇದಗಳನ್ನು ಪ್ರಾಣಗಳಲ್ಲಿಯೂ (ಕುಂಭಕ) ಹೋಮ ಮಾಡುತ್ತಾರೆ. (ಪೂರಕ, ರೇಚಕ, ಕುಂಭಕಗಳೆಂಬ ಮೂರು ವಿಧವಾದ ಪ್ರಾಣಾಯಾಮಗಳಲ್ಲಿ ನಿಷ್ಠರಾಗುತ್ತಾರೆಂದು ಭಾವ.)

**ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ ।**
**ಯಜ್ಞಶಿಷ್ಟಾಮೃತಭುಜೋ ಯಾನ್ತಿ ಬ್ರಹ್ಮ ಸನಾತನಂ ॥ ೩೦ ॥**

ದೈವಯಜ್ಞದಿಂದ ಹಿಡಿದು ಪ್ರಾಣಾಯಾಮ ಪರ್ಯಂತವಾದ ಕರ್ಮಯೋಗದ ಒಳ ಭೇದಗಳಲ್ಲಿ ಯಾವುದಾದರೊಂದರಲ್ಲಿ ಪ್ರವೃತ್ತರಾದ ಇವರೆಲ್ಲರೂ " ಸಹ ಯಜ್ಞೈಃ ಪ್ರಜಾಃ ಸೃಷ್ಟ್ವಾ "—ಎಂದು ಹೇಳಿದ ಮಹಾಯಜ್ಞಪೂರ್ವಕ ನಿತ್ಯ ನೈಮಿತ್ತಿಕ ಕರ್ಮರೂಪವಾದ ಯಜ್ಞಗಳಲ್ಲಿ ನಿಷ್ಠರಾದವರು ಮತ್ತು ಅದರಿಂದ ಪಾಪಗಳನ್ನು ಸವೆಯಿಸಿದವರು ಯಜ್ಞಶೇಷವಾದ ಅಮೃತವನ್ನು ಸೇವಿಸುವವರು. ಸನಾತನವಾದ ಆತ್ಮಸ್ವರೂಪವನ್ನು ಕಾಣುತ್ತಾರೆ.

**ನಾಯಂ ಲೋಕೋಽಸ್ತ್ಯಯಜ್ಞಸ್ಯ ಕುತೋಽನ್ಯಃ ಕುರುಸತ್ತಮ ॥**

ಎಲೈ ಅರ್ಜುನನೆ! ಮಹಾ ಯಜ್ಞಾದಿ ಪೂರ್ವಕ ನಿತ್ಯ ನೈಮಿತ್ತಿಕ ಕರ್ಮ ರಹಿತನಿಗೆ ಲೌಕಿಕ ಸುಖಗಳೇ ದುರ್ಲಭ; ಮೋಕ್ಷವೆಲ್ಲಿಯದು?

**ಏವಂ ಬಹುವಿಧಾ ಯಜ್ಞಾ ವಿತತಾ ಬ್ರಹ್ಮಣೋ ಮುಖೇ ।**
**ಕರ್ಮಜಾನ್ವಿದ್ಧಿ ತಾನ್ ಸರ್ವಾನೇವಂ ಜ್ಞಾತ್ವಾ ವಿಮೋಕ್ಷ್ಯಸೇ ॥**

ಹೀಗೆ ಬಹುಪ್ರಕಾರವಾದ ಕರ್ಮಯೋಗಗಳೆಲ್ಲ ಆತ್ಮಪ್ರಾಪ್ತಿಗೆ ಉಪಾಯಗಳು. ಇವೆಲ್ಲ ನಿತ್ಯ ನೈಮಿತ್ತಿಕ ಕರ್ಮಾನುಷ್ಠಾನದಿಂದ ಉತ್ಪನ್ನವಾಗತಕ್ಕವೆಂದು ತಿಳಿ. ಇದನ್ನು ನೀನು ಮೇಲೆ ಹೇಳಿದಂತೆ ಆಚರಿಸಿದೆಯಾದರೆ ಬಂಧನವನ್ನು ನೀಗುತ್ತೀಯೆ.

**ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ ।**
**ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ ॥ ೩೩ ॥**

ಎಲೈ ಅರ್ಜುನನೇ! ದ್ರವ್ಯಯಜ್ಞಕ್ಕಿಂತ ಜ್ಞಾನಯಜ್ಞವು ಶ್ರೇಷ್ಠವು. ಕರ್ಮವೆಲ್ಲವೂ ಅಶೇಷವಾಗಿ ಜ್ಞಾನದಲ್ಲಿ ಸಮಾಪ್ತವಾಗುವುದು.

(ಟಿಪ್ಪಣಿ: ಮೇಲೆ ಹೇಳಿದ ಕರ್ಮಗಳಲ್ಲಿ ದ್ರವ್ಯಾಂಶ ಮತ್ತು ಜ್ಞಾನಾಂಶಗಳೆಂದು ಎರಡಂಶಗಳಿವೆ. ಇವುಗಳಲ್ಲಿ ಜ್ಞಾನಮಯವಾದ ಅಂಶವೇ ಶ್ರೇಷ್ಠವಾದುದು; ಏಕೆಂದರೆ,— ಈ ಜ್ಞಾನವನ್ನು ಚಿಂತನ ಮಾಡುವುದರಿಂದಲೇ ಆತ್ಮಸಾಕ್ಷಾತ್ಕಾರವಾಗುವುದು.)

**ತದ್ವಿದ್ಧಿ ಪ್ರಣಿಪಾತೇನ ಪರಿಪ್ರಶ್ನೇನ ಸೇವಯಾ ।**
**ಉಪದೇಕ್ಷ್ಯಂತಿ ತೇ ಜ್ಞಾನಂ ಜ್ಞಾನಿನಸ್ತತ್ತ್ವದರ್ಶಿನಃ ॥ ೩೪ ॥**

ನಿನಗೆ ಉಪದೇಶಿಸಿರುವ ಈ ಆತ್ಮವಿಷಯವಾದ ಜ್ಞಾನವನ್ನು ವಂದನಪೂರ್ವಕವಾಗಿ ಪುನಃ ಪುನಃ ಪ್ರಶ್ನಿಸೈದು ಸೇವೆಯನ್ನು ಮಾಡಿ ತತ್ತ್ವಜ್ಞಾನಿಗಳಿಂದ ವಿಶದಪಡಿಸಿಕೋ, ಅವರು ನಿನಗೆ ಜ್ಞಾನವನ್ನು ಉಪದೇಶಿಸುವರು.

**ಯಜ್ಜ್ಞಾತ್ವಾ ನ ಪುನರ್ಮೋಹಮೇವಂ ಯಾಸ್ಯಸಿ ಪಾಂಡವ ।**
**ಯೇನ ಭೂತಾನ್ಯಶೇಷೇಣ ದ್ರಕ್ಷ್ಯಸ್ಯಾತ್ಮನ್ಯಥೋ ಮಯಿ ॥ ೩೫ ॥**

ಎಲೈ ಅರ್ಜುನನೇ! ಅದನ್ನು ತಿಳಿದು ನೀನು ಹೀಗೆ ಮತ್ತೆ ವ್ಯಾಮೋಹವನ್ನು ಹೊಂದಲಾರೆ. ಆದರಿಂದ ಎಲ್ಲ ದೇಹಗಳಲ್ಲಿರುವ ಆತ್ಮವಸ್ತುವೂ ಪರಸ್ಪರ ಮತ್ತು ನನ್ನೊಡನೆಯೂ ಸಮವೆಂದು ಕಾಣುವೆ. (ಎಲ್ಲ ಆತ್ಮವಸ್ತುವೂ ಜ್ಞಾನೈಕಾಕಾರವಾದುದರಿಂದ ಸಮವೆಂದು ಭಾವ.)

**ಅಪಿ ಚೇದಸಿ ಪಾಪೇಭ್ಯಃ ಸರ್ವೇಭ್ಯಃ ಪಾಪಕೃತ್ತಮಃ ।**
**ಸರ್ವಂ ಜ್ಞಾನಪ್ಲವೇನೈವ ವೃಜಿನಂ ಸಂತರಿಷ್ಯಸಿ ॥ ೩೬ ॥**

ಎಲ್ಲ ಪಾಪಿಗಳಿಗಿಂತ ನೀನು ಅತಿ ಪಾಪಿಷ್ಠನಾಗಿದ್ದರೂ ಆತ್ಮಜ್ಞಾನ ರೂಪವಾದ ನಾವೆಯಿಂದ ಪೂರ್ವಾರ್ಜಿತ ಪಾಪ (ಸಾಗರ) ವನ್ನು ದಾಟುವೆ.

**ಯಥೈಧಾಂಸಿ ಸಮಿದ್ಧೋಽಗ್ನಿಃ ಭಸ್ಮಸಾತ್ಕುರುತೇಽರ್ಜುನ ।**
**ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ಕುರುತೇ ತಥಾ ॥ ೩೭ ॥**

ಧಗಧಗಿಸುತ್ತಿರುವ ಅಗ್ನಿಯು ಸೌದೆಯನ್ನು ಹೇಗೋ ಹಾಗೆ ಆತ್ಮ ಜ್ಞಾನವು ಅನಂತ ಕರ್ಮಸಂಚಯವನ್ನೆಲ್ಲ ಸುಟ್ಟು ಬೂದಿ ಮಾಡುತ್ತದೆ.

**ನ ಹಿ ಜ್ಞಾನೇನ ಸದೃಶಂ ಪವಿತ್ರಮಿಹ ವಿದ್ಯತೇ ।**
**ತತ್ಸ್ವಯಂ ಯೋಗಸಂಸಿದ್ಧಃ ಕಾಲೇನಾತ್ಮನಿ ವಿಂದತಿ ॥ ೩೮ ॥**

ಆತ್ಮಜ್ಞಾನದಂತಹ ಪವಿತ್ರವಸ್ತು ಜಗತ್ತಿನಲ್ಲಿ ಮತ್ತೊಂದಿಲ್ಲ. ಜ್ಞಾನಾಕಾರವಾದ ಕರ್ಮಯೋಗವನ್ನು ಆಚರಿಸುವವನಿಗೆ ಅದು ತಾನಾಗಿಯೇ ಕಾಲಕ್ರಮದಲ್ಲಿ ಸಿದ್ಧಿಸುವುದು.

**ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ ಸಂಯತೇಂದ್ರಿಯಃ ।**
**ಜ್ಞಾನಂ ಲಬ್ಧ್ವಾ ಪರಾಂ ಶಾಂತಿಮಚಿರೇಣಾಧಿಗಚ್ಛತಿ ॥ ೩೯ ॥**

ಹೀಗೆ ಉಪದೇಶದಿಂದ ಪಡೆದ ಜ್ಞಾನವನ್ನು ಬೆಳೆಸಿಕೊಳ್ಳುವುದರಲ್ಲಿ ಆಸಕ್ತಿಯುಳ್ಳವನಾಗಿ ಅದರಲ್ಲಿಯೇ ನಿರತನಾಗಿ ಇತರ ವಿಷಯಗಳ ಕಡೆಗೆ ಹೋಗಗೊಡದೆ ಇಂದ್ರಿಯಗಳನ್ನು ನಿಗ್ರಹಿಸಿರತಕ್ಕವನು ಪರಿಪಕ್ವವಾದ ಆತ್ಮಜ್ಞಾನವನ್ನು ಹೊಂದಿ ಬೇಗನೆ ಮೋಕ್ಷ ಪಡೆಯುವನು.

**ಅಜ್ಞಶ್ಚಾಶ್ರದ್ಧಧಾನಶ್ಚ ಸಂಶಯಾತ್ಮಾ ವಿನಶ್ಯತಿ ।**
**ನಾಯಂ ಲೋಕೋಽಸ್ತಿ ನ ಪರೋ ನ ಸುಖಂ ಸಂಶಯಾತ್ಮನಃ ॥**

ಇಂತಹ ಜ್ಞಾನ ಪಡೆಯದವನೂ, ಉಪದೇಶಿಸಿದ ಜ್ಞಾನವನ್ನು ಹೆಚ್ಚಿಸಿಕೊಳ್ಳುವುದರಲ್ಲಿ ತ್ವರೆಪಡದವನೂ, ಸಂಶಯಾತ್ಮನೂ ನಾಶಹೊಂದುತ್ತಾರೆ. ಸಂಶಯಾತ್ಮನಿಗೆ ಐಹಿಕ ಪುರುಷಾರ್ಥಗಳೂ ಇಲ್ಲ, ಮೋಕ್ಷವೂ ಇಲ್ಲ, ಸುಖವೂ ಇಲ್ಲ.

**ಯೋಗಸಂನ್ಯಸ್ತಕರ್ಮಾಣಂ ಜ್ಞಾನಸಂಛಿನ್ನಸಂಶಯಂ ।**
**ಆತ್ಮವನ್ತಂ ನ ಕರ್ಮಾಣಿ ನಿಬಧ್ನನ್ತಿ ಧನಂಜಯ ॥ ೪೧ ॥**

ಎಲೈ ಧನಂಜಯನೇ! "ಕರ್ಮಣ್ಯಕರ್ಮ ಯಃ ಪಶ್ಯೇತ್ ...." ಇತ್ಯಾದಿಯಾಗಿ ಉಪದೇಶಿಸಿದ ಜ್ಞಾನದಿಂದ ಕರ್ಮಗಳನ್ನು ಜ್ಞಾನಾಕಾರವಾಗಿಯೇ ಭಾವಿಸುತ್ತ ಆತ್ಮಜ್ಞಾನದಿಂದ ಸಂಶಯಗಳನ್ನೆಲ್ಲ ನೀಗಿದ ದೃಢಚಿತ್ತನನ್ನು ಪ್ರಾಚೀನ ಕರ್ಮಗಳು ಬಂಧಿಸುವುದಿಲ್ಲ.

**ತಸ್ಮಾದಜ್ಞಾನಸಂಭೂತಂ ಹೃತ್‌ಸ್ಥಂ ಜ್ಞಾನಾಸಿನಾತ್ಮನಃ ।**
**ಛಿತ್ತ್ವೈನಂ ಸಂಶಯಂ ಯೋಗಮಾತಿಷ್ಠೋತ್ತಿಷ್ಠ ಭಾರತ ॥ ೪೨ ॥**

ಆದುದರಿಂದ, ಎಲೈ ಅರ್ಜುನನೇ! ಅನಾದ್ಯಜ್ಞಾನದಿಂದ ನಿನ್ನ ಹೃದಯದಲ್ಲಿ ಉಂಟಾಗಿರುವ ಆತ್ಮವಿಷಯವಾದ ಈ ಸಂಶಯವನ್ನು ಆತ್ಮಜ್ಞಾನವೆಂಬ ಕತ್ತಿಯಿಂದ ಕಡಿದು ಕರ್ಮಯೋಗವನ್ನು ಆಚರಿಸು, ಏಳು.

ಇಲ್ಲಿಗೆ "ಜ್ಞಾನಯೋಗ"–ವೆಂಬ ನಾಲ್ಕನೆಯ ಅಧ್ಯಾಯ ಮುಗಿಯಿತು.

---

# ಅಧ್ಯಾಯ ೫

# ಕರ್ಮಯೋಗದೊಳಗಿನ ಜ್ಞಾನವಿಪಾಕ

(ಸಂಗತಿ: ನಾಲ್ಕನೆಯ ಅಧ್ಯಾಯದಲ್ಲಿ —"ದೈವಮೇವಾಪರೇ ಯಜ್ಞಂ"–ಇತ್ಯಾದಿಯಾಗಿ ಹೇಳಿರುವ ಕರ್ಮಯೋಗದ ಬಗೆಗಳಲ್ಲಿ ತನ್ನ ಶಕ್ತಿಗೆ ಮತ್ತು ರುಚಿಗೆ ಅನುಗುಣವಾದ ಯಾವುದಾದರೊಂದು ಕರ್ಮವನ್ನು ಅಂಗಿಯನ್ನಾಗಿ ಆರಿಸಿಕೊಂಡು ಅದಕ್ಕೆ ಆಯಾ ವರ್ಣಾಶ್ರಮ ಧರ್ಮಗಳನ್ನು ಅಂಗವನ್ನಾಗಿ ಮಾಡಿಕೊಂಡು, ಸಹಜವಾದ ಆತ್ಮಜ್ಞಾನದೊಡನೆ ಫಲಸಂಗವಿಲ್ಲದೆ ಭಗವಂತನ ಆರಾಧನಕ್ಕಾಗಿ ಮಾಡುವ ನಡೆಸುವ ಕರ್ಮಾನುಷ್ಠಾನಕ್ಕೆ ಕರ್ಮಯೋಗವೆಂದು ಹೆಸರು. ಆತ್ಮಜ್ಞಾನವೂ ಇದರೊಳಗೇ ಸೇರಿರುವುದರಿಂದ ಇದು ಜ್ಞಾನಾಕಾರವೂ ಆಗಿದೆ. ಇದರೊಳಗೆ ಆ ಜ್ಞಾನಾಂಶಕ್ಕೇ ಪ್ರಾಧಾನ್ಯ—ಎಂದು ಹಿಂದಿನ ಅಧ್ಯಾಯದಲ್ಲಿ ಹೇಳಲಾಯಿತು.

ಹೀಗೆ ಆತ್ಮಜ್ಞಾನವು ಇದರೊಳಗೇ ಸೇರಿಕೊಂಡಿರುವುದರಿಂದಲೂ, ಪ್ರಕೃತಿಗೆ ಹೊಂದಿಕೊಂಡಿರುವುದರಿಂದ ಸುಕರವೂ ಅಪ್ರಮಾದವೂ ಆದುದರಿಂದಲೂ ಮತ್ತು ಜ್ಞಾನಯೋಗಾನುಷ್ಠಾನದ ಅಪೇಕ್ಷೆಯಿಲ್ಲದೆ ನೇರವಾಗಿ ತಾನೇ ಆತ್ಮಪ್ರಾಪ್ತಿಯನ್ನು ಸಾಧಿಸುವುದರಿಂದಲೂ ಜ್ಞಾನಯೋಗಕ್ಕಿಂತ ಈ ಕರ್ಮಯೋಗವನ್ನು ಆಚರಿಸುವುದೇ ಜ್ಞಾನಯೋಗಾಧಿಕಾರಿಗೂ ಒಳ್ಳೆಯದು–ಎಂದು ಮೂರನೆಯ ಅಧ್ಯಾಯದಲ್ಲಿಯೇ ಹೇಳಲಾಯಿತು. ಈಗ ಈ ಐದನೆಯ ಅಧ್ಯಾಯದಲ್ಲಿ, ಕರ್ಮಯೋಗವು ಜ್ಞಾನಯೋಗಕ್ಕಿಂತ ಬೇಗನೆ ಆತ್ಮಪ್ರಾಪ್ತಿಯನ್ನು ಸಾಧಿಸತಕ್ಕುದೆಂದೂ ಕರ್ಮವನ್ನು ಮಾಡುತ್ತಿರುವಾಗಲೆಲ್ಲ ತಾನು ಅದಕ್ಕೆ ಕರ್ತೃವಲ್ಲವೆಂದು ಚಿಂತಿಸುವ ಬಗೆ ಹೇಗೆ ಎಂಬುದನ್ನೂ ಹೇಳಿ ಇದಕ್ಕೆ ಮೂಲವಾದ ಜ್ಞಾನವನ್ನೂ ಶೋಧಿಸಲಾಗುತ್ತದೆ.)

**ಅರ್ಜುನ ಉವಾಚ—**

**ಸಂನ್ಯಾಸಂ ಕರ್ಮಣಾಂ ಕೃಷ್ಣ ಪುನರ್ಯೋಗಂ ಚ ಶಂಸಸಿ ।**
**ಯಚ್ಛ್ರೇಯ ಏತಯೋರೇಕಂ ತನ್ಮೇ ಬ್ರೂಹಿ ಸುನಿಶ್ಚಿತಂ ॥ ೧ ॥**

ಅರ್ಜುನನೆಂದನು—

ಶ್ರೀಕೃಷ್ಣನೇ: ಜ್ಞಾನಯೋಗವನ್ನೂ, ಪುನಃ ಕರ್ಮಯೋಗವನ್ನೂ ಹೊಗಳುವೆ. (ಎರಡನೆಯ ಅಧ್ಯಾಯದಲ್ಲಿ ಮುಮುಕ್ಷುವಾದವನು ಮೊದಲು ಕರ್ಮಯೋಗವನ್ನೇ ಮಾಡಬೇಕು. ಇದರಿಂದ ಅವನ ಅಂತಃಕರಣ ಕಷಾಯವು ಮೃದಿತವಾದಮೇಲೆ ಜ್ಞಾನಯೋಗದಿಂದ ಆತ್ಮ ದರ್ಶನವಾಗ ತಕ್ಕದ್ದು ಎಂದು ಪ್ರತಿಪಾದಿಸಿ, ಮತ್ತೆ ಮೂರು, ನಾಲ್ಕನೆಯ ಅಧ್ಯಾಯ ಗಳಲ್ಲಿ ಜ್ಞಾನಯೋಗಕ್ಕೆ ಅಧಿಕಾರವಿರುವವನಿಗೂ ಜ್ಞಾನಯೋಗ ಮಾಡು ವುದಕ್ಕಿಂತ ಕರ್ಮಯೋಗ ಮಾಡುವುದೇ ಮೇಲು. ಇದನ್ನು ಮಾಡಿದ ನಂತರ ಅವನು ಜ್ಞಾನಯೋಗವನ್ನು ಬೇರೆ ಮಾಡಬೇಕಾಗಿಲ್ಲ. ಈ ಕರ್ಮ ಯೋಗವೇ ಅವನಿಗೆ ನೇರವಾಗಿ ಆತ್ಮಪ್ರಾಪ್ತಿಯನ್ನು ಸಾಧಿಸುತ್ತದೆ.— ಎಂದು ಕರ್ಮಯೋಗವನ್ನು ಹೊಗಳಿದ್ದೀಯೆ—ಎಂದು ಭಾವ) ಇವೆರ ಡರಲ್ಲಿ ಯಾವುದು ಆತ್ಮಪ್ರಾಪ್ತಿಗೆ ಸುಕರವೂ, ಶೀಘ್ರವೂ ಆದ ಶ್ರೇಷ್ಠ ಸಾಧನವೆಂದು ಚೆನ್ನಾಗಿ ನಿಶ್ಚಿತವಾಗಿದೆಯೋ ಅದನ್ನು ನನಗೆ ಹೇಳು.

**ಶ್ರೀ ಭಗವಾನುವಾಚ—**

**ಸಂನ್ಯಾಸಃ ಕರ್ಮಯೋಗಶ್ಚ ನಿಶ್ಶ್ರೇಯಸಕರಾವುಭೌ ।**
**ತಯೋಸ್ತು ಕರ್ಮಸಂನ್ಯಾಸಾತ್ ಕರ್ಮಯೋಗೋ ವಿಶಿಷ್ಯತೇ ॥**

ಭಗವಂತನೆಂದನು—

(ಜ್ಞಾನಯೋಗ ಶಕ್ತನಿಗೂ ಕೂಡ) ಜ್ಞಾನಯೋಗ, ಕರ್ಮಯೋಗ ಗಳೆರಡೂ (ಸ್ವತಂತ್ರವಾಗಿಯೇ) ಶ್ರೇಯಸ್ಕರವಾದುವು. ಅವೆರಡರಲ್ಲಿ ಜ್ಞಾನಯೋಗಕ್ಕಿಂತ ಕರ್ಮಯೋಗವೇ ಹೆಚ್ಚಿನದು.

(ಸಂಗತಿ : ಹೇಗೆಂದರೆ :)

**ಜ್ಞೇಯಸ್ಸ ನಿತ್ಯಸಂನ್ಯಾಸೀ ಯೋ ನ ದ್ವೇಷ್ಟಿ ನ ಕಾಂಕ್ಷತಿ ।**
**ನಿರ್ದ್ವಂದ್ವೋ ಹಿ ಮಹಾಬಾಹೋ ಸುಖಂ ಬಂಧಾತ್ಪ್ರಮುಚ್ಯತೇ॥**

ಎಲೈ ಮಹಾಬಾಹುವೇ! ಯಾವ ಕರ್ಮಯೋಗಿಯು ಅದರೊಳ ಗಿನ ಆತ್ಮಾನುಭವದಿಂದಲೇ ತೃಪ್ತನಾಗಿ ಬೇರೊಂದನ್ನೂ ಇಚ್ಛಿಸದೆ, ಅದು

ದರಿಂದಲೇ ಯಾವುದನ್ನೂ ದ್ವೇಷಿಸಪೆ ಆಪುದರಿಂದಲೇ ಸುಖ ದುಃಖ ಗಳನ್ನು ಸಹಿಸಿಕೊಂಡು ಇರುವನೋ ಅವನನ್ನು ನಿತ್ಯಜ್ಞಾನಯೋಗಿ ಯೆಂದೇ ತಿಳಿಯಬೇಕು. ಅವನು ಆಯಾಸವಿಲ್ಲದೆ ಸಂಸಾರದಿಂದ ಮುಕ್ತ ನಾಗುವನಷ್ಟೆ !

**ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ ।**
**ಏಕಮಪ್ಯಾಸ್ಥಿತಸ್ಸಮ್ಯಗುಭಯೋರ್ವಿಂದತೇ ಫಲಂ ॥ ೪ ॥**

ಜ್ಞಾನಯೋಗ, ಕರ್ಮಯೋಗಗಳೆರಡೂ ಬೇರೆ ಬೇರೆಯಾದುವೆಂದು ಅಜ್ಞರು ಹೇಳುವರು. ಪಂಡಿತರಲ್ಲ. (ಎರಡಕ್ಕೂ ಆತ್ಮಾವಲೋಕನ ವೊಂದೇ ಫಲವಾದುದರಿಂದ) ಇವೆರಡರಲ್ಲಿ ಯಾವುದೊಂದನ್ನಾದರೂ ಚೆನ್ನಾಗಿ ಆಚರಿಸಿದವನು ಎರಡರ ಫಲವನ್ನೂ ಪಡೆಯುತ್ತಾನೆ.

**ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ ।**
**ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ ॥ ೫ ॥**

ಜ್ಞಾನಯೋಗಿಗಳು ಪಡೆಯುವ ಆತ್ಮಾವಲೋಕನವೆಂಬ ಫಲವನ್ನೇ ಕರ್ಮಯೋಗಿಗಳೂ ಪಡೆಯುವರು. ಜ್ಞಾನಯೋಗವನ್ನೂ ಮತ್ತು ಕರ್ಮ ಯೋಗವನ್ನೂ ಒಂದು ಎಂದು ತಿಳಿದವನೇ ತಿಳಿದವನು.

(ಸಂಗತಿ : ಇವೆರಡರಲ್ಲಿ ವಿಶೇಷವೇನೆಂದರೆ :)

**ಸಂನ್ಯಾಸಸ್ತು ಮಹಾಬಾಹೋ ದುಃಖಮಾಪ್ತುಮಯೋಗತಃ ।**
**ಯೋಗಯುಕ್ತೋ ಮುನಿರ್ಬ್ರಹ್ಮ ನ ಚಿರೇಣಾಧಿಗಚ್ಛತಿ ॥ ೬ ॥**

ಎಲೈ ಮಹಾಬಾಹುವೇ ! ಕರ್ಮಯೋಗವಿಲ್ಲದೆ ಜ್ಞಾನಯೋಗವು ಕಷ್ಟಸಾಧ್ಯವು. ಕರ್ಮಯೋಗಯುಕ್ತನು ತಾನೇ ಆತ್ಮವನ್ನು ಮನನ ಮಾಡುವವನಾಗಿ ಬೇಗನೆ ಆತ್ಮಾವಲೋಕನವನ್ನು ಪಡೆಯುತ್ತಾನೆ.

(ಸಂಗತಿ : ಏಕೆಂದರೆ ;)

**ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ ಜಿತೇಂದ್ರಿಯಃ ।**
**ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ ನ ಲಿಪ್ಯತೇ ॥ ೭ ॥**

ಕರ್ಮಯೋಗಿಯು (ಶಾಸ್ತ್ರೀಯ ಶುದ್ಧ ಕರ್ಮಗಳನ್ನಾಚರಿಸಿ) ಶುದ್ಧ ವಾದ ಮನಸ್ಸುಳ್ಳವನು ಮನಸ್ಸನ್ನೂ, ಇಂದ್ರಿಯಗಳನ್ನೂ ಗೆದ್ದವನು; ಎಲ್ಲ ದೇಹಗಳಲ್ಲಿರುವ ಆತ್ಮವಸ್ತುವೂ ಸಮವೆಂದು ಭಾವಿಸುವವನು ಕರ್ಮ ವನ್ನು ಮಾಡುತ್ತಿದ್ದರೂ ಅವನಿಗೆ (ದೇಹವೇ ಆತ್ಮ ಎಂಬ ಅಭಿಮಾನದ) ಲೇಪವಿಲ್ಲ.

(ಸಂಗತಿ: ಹೀಗೆ ಸುಕರವೂ ಶೀಘ್ರ ಫಲಪ್ರದವೂ ಆದುದರಿಂದ ಶ್ರೇಷ್ಠವೆನಿಸಿದ ಕರ್ಮಯೋಗಕ್ಕೆ ಅವಶ್ಯ ಬೇಕಾದುದನ್ನು ಹೇಳುತ್ತೇನೆ. ಕೇಳು–ಎನ್ನುತ್ತಾನೆ.)

**ನೈವ ಕಿಂಚಿತ್ಕರೋಮೀತಿ ಯುಕ್ತೋ ಮನ್ಯೇತ ತತ್ತ್ವವಿತ್ ।**
**ಪಶ್ಯನ್ ಶೃಣ್ವನ್ ಸ್ಪೃಶನ್ ಜಿಘ್ರನ್ ಅಶ್ನನ್ ಗಚ್ಛನ್ ಸ್ವಪನ್ ಶ್ವಸನ್ ॥**

**ಪ್ರಲಪನ್ ವಿಸೃಜನ್ ಗೃಹ್ಣನ್ನುನ್ಮಿಷನ್ನಿಮಿಷನ್ನಪಿ ।**
**ಇಂದ್ರಿಯಾಣೀಂದ್ರಿಯಾರ್ಥೇಷು ವರ್ತಂತ ಇತಿ ಧಾರಯನ್ ॥**

ಆತ್ಮತತ್ತ್ವವನ್ನರಿತ ಕರ್ಮಯೋಗಿಯು, ನೋಡುವಾಗ, ಕೇಳು ವಾಗ, ಮುಟ್ಟುವಾಗ, ಮೂಸುವಾಗ, ತಿನ್ನುವಾಗ, ನಡೆಯುವಾಗ, ಮಲ ಗಿರುವಾಗ, ಉಸಿರಾಡುವಾಗ, ಮಾತಾಡುವಾಗ, ವಿಸರ್ಜನೆ ಮಾಡುವಾಗ, ಸ್ವೀಕರಿಸುವಾಗ, ಎವೆಗಳನ್ನು ಮುಚ್ಚುವಾಗ ಮತ್ತು ತೆರೆಯುವಾಗ ಇಂದ್ರಿಯಗಳು ತಮ್ಮ ವಿಷಯಗಳಲ್ಲಿ ವರ್ತಿಸುತ್ತಿರುವುವೆಂದು ಬಗೆದು "ನಾನು ಏನನ್ನೂ ಮಾಡುವುದಿಲ್ಲ"—ಎಂದು ಭಾವಿಸಬೇಕು.

**ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ ಕರೋತಿ ಯಃ ।**
**ಲಿಪ್ಯತೇ ನ ಸ ಪಾಪೇನ ಪದ್ಮಪತ್ರಮಿವಾಂಭಸಾ ॥ ೧೦ ॥**

ಮೇಲೆ ಹೇಳಿದ (ದರ್ಶನ ಶ್ರವಣ ಪ್ರಭೃತಿ) ಕೆಲಸಗಳನ್ನೆಲ್ಲ ದೇಹೇಂ ದ್ರಿಯ ರೂಪವಾಗಿ ಪರಿಣಾಮ ಹೊಂದಿರುವ ಪ್ರಕೃತಿಯೇ ನಡೆಸುತ್ತಿದೆ ಯೆಂದು ಭಾವಿಸಿ ಫಲಸಂಗವನ್ನು ತ್ಯಜಿಸಿ, ವರ್ತಿಸುವವನಿಗೆ ತಾವರೆ ಎಲೆಗೆ ನೀರು ಅಂಟದಂತೆ ದೇಹಾತ್ಮಾಭಿಮಾನವೆಂಬ ಪಾಪವು ಅಂಟು ವುದಿಲ್ಲ.

(ಸಂಗತಿ: ಉಕ್ತಾರ್ಥದ ದೃಢೀಕರಣಕ್ಕಾಗಿ ಶಿಷ್ಟರ ಆಚಾರವನ್ನು ಹೇಳುತ್ತಾನೆ.)

**ಕಾಯೇನ ಮನಸಾ ಬುದ್ಧ್ಯಾ ಕೇವಲೈರಿಂದ್ರಿಯೈರಪಿ ।**
**ಯೋಗಿನಃ ಕರ್ಮ ಕುರ್ವಂತಿ ಸಂಗಂ ತ್ಯಕ್ತ್ವಾಽಽತ್ಮಶುದ್ಧಯೇ ॥**

ದೇಹ, ಮನಸ್ಸು, ಬುದ್ಧಿ, ಇಂದ್ರಿಯಗಳಿಂದ ಸಾಧ್ಯವಾದ ಕರ್ಮವನ್ನು ಸ್ವರ್ಗಾದಿ ಫಲಗಳಲ್ಲಿ ಆಸಕ್ತಿಯಿಲ್ಲದವರಾಗಿ, ಆತ್ಮಗತ ಪ್ರಾಚೀನ ಕರ್ಮ ಬಂಧಗಳ ವಿನಾಶಕ್ಕಾಗಿ ಯೋಗಿಗಳು ಆಚರಿಸುತ್ತಾರೆ.

(ಟಿಪ್ಪಣಿ: ಇಲ್ಲಿ ಕೇವಲೈಃ ಇಂದ್ರಿಯೈಃ—ಎಂಬುದರಿಂದ ಜ್ಞಾನೇಂದ್ರಿಯಗಳನ್ನು ಹೇಳಿದೆ.)

**ಯುಕ್ತಃ ಕರ್ಮಫಲಂ ತ್ಯಕ್ತ್ವಾ ಶಾಂತಿಮಾಪ್ನೋತಿ ನೈಷ್ಠಿಕೀಂ ।**
**ಅಯುಕ್ತಃ ಕಾಮಕಾರೇಣ ಫಲೇ ಸಕ್ತೋ ನಿಬಧ್ಯತೇ ॥ ೧೨ ॥**

ಆತ್ಮವೊಂದರಲ್ಲಿಯೇ ಪ್ರವಣನಾದವನು ಕರ್ಮಫಲವನ್ನು ಬಿಟ್ಟು (ಆತ್ಮಶುದ್ಧಿಗಾಗಿ ಮಾತ್ರವೇ ಕರ್ಮವನ್ನು ಮಾಡಿ) ಸಿದ್ಧವಾದ ಆತ್ಮಾನುಭವ ಸುಖವನ್ನು ಅನುಭವಿಸುತ್ತಾನೆ. ಆತ್ಮದಲ್ಲಿ ಪ್ರವಣನಲ್ಲದವನು ಕಾಮನೆಯುಳ್ಳವನಾಗಿ ಫಲದಲ್ಲಿ ತೊಡಕಿ ಬಂಧಿಸಲ್ಪಡುವನು.

**ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ ।**
**ನವದ್ವಾರೇ ಪುರೇ ದೇಹೀ ನೈವ ಕುರ್ವನ್ನ ಕಾರಯನ್ ॥ ೧೩ ॥**

ಮಾಡುವ ಕಾರ್ಯಗಳನ್ನೆಲ್ಲ (ತನಗೆ ಅವು ದೇಹಸಂಬಂಧದಿಂದ ಬಂದುದೇ ಹೊರತು ಸ್ವರೂಪದಿಂದಲ್ಲವೆಂಬ) ಮನಸ್ಸಿನಿಂದ ನವದ್ವಾರಗಳುಳ್ಳ ಶರೀರದಲ್ಲಿ ಆರೋಪಿಸಿ ದೇಹಾದಿ ಪಾರತಂತ್ರ್ಯ ರಹಿತನಾದ ದೇಹಿಯು ಏನನ್ನೂ ಮಾಡದೆ ಮತ್ತು ಮಾಡಿಸದೆ (ದೇಹಾಧಿಷ್ಠಾನ ಪ್ರಯತ್ನವಿಲ್ಲದವನಾಗಿ) ಸುಖದಿಂದ (ಕರ್ತೃತ್ವಾಭಿಮಾನ ಪ್ರಯುಕ್ತ ಕ್ಲೇಶ ರಹಿತನಾಗಿ) ಇರುವನು.

(ಸಂಗತಿ: ಆತ್ಮನ ಸ್ವಾಭಾವಿಕ ರೂಪವಾವುದು ? — ಎಂದರೆ ಹೇಳುತ್ತಾನೆ.

**ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।**
**ನ ಕರ್ಮಫಲಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥ ೧೪ ॥**

ಜನರಿಗೆ ಕರ್ತೃತ್ವವನ್ನೂ, ಕರ್ಮವನ್ನೂ ಕರ್ಮದಲ್ಲಿ ಆಯಾ ದೇವಾದಿ ಫಲಸಂಯೋಗವನ್ನೂ (ಕರ್ಮವಶನಾಗದೆ ಸ್ವಾಭಾವಿಕ ಸ್ವರೂಪ ದಿಂದ ಇರತಕ್ಕ) ಆತ್ಮನು ಸೃಷ್ಟಿಸುವುದಿಲ್ಲ. ಪ್ರಕೃತಿವಾಸನೆಯು ಇವೆಲ್ಲ ವನ್ನೂ ಉಂಟುಮಾಡುತ್ತದೆ.

**ನಾದತ್ತೇ ಕಸ್ಯಚಿತ್ಪಾಪಂ ನ ಚೈವ ಸುಕೃತಂ ವಿಭುಃ ।**
**ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯನ್ತಿ ಜನ್ತವಃ ॥ ೧೫ ॥**

ಆತ್ಮನು ವಿಭುವಾದುದರಿಂದ (ನಿಯತವಾಗಿ ಯಾವುದೊಂದು ದೇಹ ದಲ್ಲಿಯೂ ಇರದವನಾದುದರಿಂದ) (ತನ್ನ ಸಂಬಂಧಿಕನೆನಿಸಿದ) ಯಾವನ ದುಃಖವನ್ನಾಗಲಿ (ಪ್ರತಿಕೂಲನೆನಿಸಿದ ಯಾವನ) ಸುಖವನ್ನಾಗಲಿ ಸ್ವೀಕರಿ ಸುವುದಿಲ್ಲ. ಅಜ್ಞಾನದಿಂದ ಜ್ಞಾನವು ಮುಚ್ಚಿದೆ. ಅದರಿಂದ ಪ್ರಾಣಿಗಳು ಮೋಹಿತರಾಗುತ್ತಾರೆ.

**ಜ್ಞಾನೇನ ತು ತದಜ್ಞಾನಂ ಯೇಷಾಂ ನಾಶಿತಮಾತ್ಮನಃ ।**
**ತೇಷಾಮಾದಿತ್ಯವದ್ ಜ್ಞಾನಂ ಪ್ರಕಾಶಯತಿ ತತ್ಪರಂ ॥ ೧೬ ॥**

ಆದರೆ ಯಾರ ಅಜ್ಞಾನವು ಆತ್ಮವಿಷಯವಾದ ಜ್ಞಾನದಿಂದ ನಷ್ಟ ವಾಗಿರುವುದೋ ಅವರಿಗೆ ಸ್ವಾಭಾವಿಕವೂ, ಅಸಂಕುಚಿತವೂ ಆದ ಜ್ಞಾನವು ಸೂರ್ಯನಂತೆ ಎಲ್ಲವನ್ನೂ ಸರಿಯಾಗಿ ಪ್ರಕಾಶಗೊಳಿಸುತ್ತದೆ.

(ಟಿಪ್ಪಣಿ: ಇಲ್ಲಿ "ತತ್ಪರಂ"—ಎಂಬಲ್ಲಿ "ತತ್"=ಸ್ವಾಭಾವಿಕ; "ಪರಂ"=ಅಸಂಕುಚಿತ ಮತ್ತು ಅಪರಿಮಿತವೆಂದರ್ಥ. ಇದು "ಜ್ಞಾನಂ" —ಎಂಬುದಕ್ಕೆ ವಿಶೇಷಣ.)

**ತದ್ಬುದ್ಧಯಸ್ತದಾತ್ಮಾನಃ ತನ್ನಿಷ್ಠಾಸ್ತತ್ಪರಾಯಣಾಃ ।**
**ಗಚ್ಛನ್ತ್ಯಪುನರಾವೃತ್ತಿಂ ಜ್ಞಾನನಿರ್ಧೂತಕಲ್ಮಷಾಃ ॥ ೧೭ ॥**

ಆ ಆತ್ಮದರ್ಶನದಲ್ಲಿಯೇ ಬುದ್ಧಿಯುಳ್ಳವರಾಗಿ, ಅದರಲ್ಲಿಯೇ ಪ್ರವ ರ್ತಿಸುತ್ತ, ಅದರ ಅಭ್ಯಾಸದಲ್ಲಿಯೇ ನಿರತರಾಗಿ, ಅದನ್ನೇ ಪರಮ

ಪ್ರಯೋಜನವೆಂದು ಭಾವಿಸಿರುವವರು ಆ ಜ್ಞಾನದಿಂದ ತಮ್ಮ ಪ್ರಾಚೀನ ಕಲ್ಮಷಗಳನ್ನು ನೀಗಿದವರಾಗಿ ಸ್ವಸ್ವರೂಪಾನುಭವವನ್ನು ಮಾಡುವರು.

**ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।**
**ಶುನಿ ಚೈವ ಶ್ವಪಾಕೇ ಚ ಪಂಡಿತಾಃ ಸಮದರ್ಶಿನಃ ॥ ೧೮ ॥**

ಆತ್ಮತತ್ತ್ವವನ್ನು ಬಲ್ಲವರು ವಿದ್ವಾಂಸನೂ, ವಿನಯಸಂಪನ್ನನೂ ಆದವನಲ್ಲಿಯೂ, ಬ್ರಾಹ್ಮಣನಲ್ಲಿಯೂ, ಆಕಳಲ್ಲಿಯೂ, ಆನೆಯಲ್ಲಿಯೂ, ನಾಯಿಯಲ್ಲಿಯೂ, ಚಂಡಾಲನಲ್ಲಿಯೂ ಸಮದೃಷ್ಟಿಯನ್ನಿಡುವರು. (ಈ ದೇಹಗಳು ವಿಷಮಾಕಾರಗಳಾಗಿದ್ದರೂ, ಅವುಗಳೊಳಗೆ ಇರುವ ಆತ್ಮವಸ್ತುವೆಲ್ಲವೂ ಜ್ಞಾನೈಕಾಕಾರವಾದುದರಿಂದ ಅವುಗಳೊಳಗೆ ಭೇದವಿಲ್ಲ. ಎಲ್ಲವೂ ಸಮ ಎಂಬ ದೃಷ್ಟಿಯಿಡುವರು.)

**ಇಹೈವ ತೈರ್ಜಿತಸ್ಸರ್ಗೋ ಯೇಷಾಂ ಸಾಮ್ಯೇ ಸ್ಥಿತಂ ಮನಃ ।**
**ನಿರ್ದೋಷಂ ಹಿ ಸಮಂ ಬ್ರಹ್ಮ ತಸ್ಮಾದ್ಬ್ರಹ್ಮಣಿ ತೇ ಸ್ಥಿತಾಃ ॥**

ಈ ಸಮತ್ವದಲ್ಲಿ ಯಾರ ಮನಸ್ಸು ಸ್ಥಿರವಾಗಿರುವುದೋ ಅವರು ಬದುಕಿರುವಾಗಲೇ (ಸಾಧನಾನುಷ್ಠಾನ ಕಾಲದಲ್ಲಿಯೇ) ಜನ್ಮಬಂಧನವನ್ನು ಜಯಿಸಿರುವರು. ಪ್ರಕೃತಿಸಂಬಂಧದ ದೋಷವಿಂದ ಹೊರಗಾದ ಆತ್ಮವಸ್ತುವೆಲ್ಲವೂ ಸಮವಾದುದಷ್ಟೆ! ಆದುದರಿಂದ ಅವರು ಬ್ರಹ್ಮದಲ್ಲಿ ಸ್ಥಿತರಾಗಿರುವರು. (ಅವರು ಮುಕ್ತರಂತೆಯೇ ಎಂದು ಭಾವ.)

(ಸಂಗತಿ: ಎಂತಹ ಕರ್ಮಯೋಗಿಗೆ ಸಮದರ್ಶನರೂಪವಾದ ಜ್ಞಾನವಿಕಾಸವುಂಟಾಗುವುದೆಂಬುದನ್ನು ಉಪದೇಶಿಸುತ್ತಾನೆ.)

**ನ ಪ್ರಹೃಷ್ಯೇತ್ಪ್ರಿಯಂ ಪ್ರಾಪ್ಯ ನೋದ್ವಿಜೇತ್ಪ್ರಾಪ್ಯ ಚಾಪ್ರಿಯಂ ।**
**ಸ್ಥಿರಬುದ್ಧಿರಸಂಮೂಢೋ ಬ್ರಹ್ಮವಿದ್ಬ್ರಹ್ಮಣಿ ಸ್ಥಿತಃ ॥ ೨೦ ॥**

(ತತ್ತ್ವಜ್ಞರ ಉಪದೇಶದಿಂದ) ಆತ್ಮ ಸ್ವರೂಪವನ್ನರಿತು, ಆ ಜ್ಞಾನಾಭ್ಯಾಸದಲ್ಲಿಯೇ ತೊಡಗಿ ದೇಹದಲ್ಲಿ ಆತ್ಮವೆಂಬ ಅಭಿಮಾನವನ್ನು ಬಿಟ್ಟು, ಸ್ಥಿರವಾದ ಆತ್ಮನ ದರ್ಶನದಲ್ಲಿಯೇ ವ್ಯವಸ್ಥಿತನಾದವನು ಪ್ರಾಕೃತವಾದ ಪ್ರಿಯವನ್ನು ಹೊಂದಿ ಸುಖಿಸನು, ಅಪ್ರಿಯವನ್ನು ಹೊಂದಿ ದುಃಖಿಸನು.

**ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿನ್ದತ್ಯಾತ್ಮನಿ ಯಸ್ಸುಖಂ ।**
**ಸ ಬ್ರಹ್ಮಯೋಗಯುಕ್ತಾತ್ಮಾ ಸುಖಮಕ್ಷಯಮಶ್ನುತೇ ॥ ೨೧ ॥**

ಆತ್ಮವ್ಯತಿರಿಕ್ತವಾದ ವಿಷಯಾನುಭವಗಳಲ್ಲಿ ಆಸಕ್ತಿಯಿಲ್ಲದೆ ಅಂತರಾತ್ಮನಲ್ಲಿಯೇ ಸುಖಿಸುವವನು ಬ್ರಹ್ಮಾಭ್ಯಾಸದಲ್ಲಿ ನಿರತವಾದ ಮನಸ್ಸುಳ್ಳವನಾಗಿ (ಬ್ರಹ್ಮಾನುಭವರೂಪವಾದ) ಅಕ್ಷಯಸುಖವನ್ನು ಪಡೆಯುವನು.

(ಸಂಗತಿ: ಅನಾದಿಯಾಗಿ ಬಾಹ್ಯಸ್ಪರ್ಶಗಳಲ್ಲಿ ರಸಿಕನಾದವನಿಗೆ ಅದನ್ನು ಬಿಡುವುದು ಹೇಗೆ ಸಾಧ್ಯ?—ಎಂದರೆ ದೋಷದರ್ಶನದ್ವಾರಾ ಅದು ಸಾಧ್ಯವೆಂದು ಹೇಳುತ್ತಾನೆ.)

**ಯೇ ಹಿ ಸಂಸ್ಪರ್ಶಜಾ ಭೋಗಾ ದುಃಖಯೋನಯ ಏವ ತೇ ।**
**ಆದ್ಯನ್ತವನ್ತಃ ಕೌನ್ತೇಯ ನ ತೇಷು ರಮತೇ ಬುಧಃ ॥ ೨೨ ॥**

ಬಾಹ್ಯಸ್ಪರ್ಶದಿಂದುಂಟಾಗುವ ಸುಖಗಳು ದುಃಖಕ್ಕೆ ಮೂಲಗಳೇ ಆಗಿವೆ. ಅವು ಅಲ್ಪಕಾಲವಿರತಕ್ಕವು. ಅವುಗಳ ಸ್ವರೂಪವನ್ನು ಬಲ್ಲವನು ಅವುಗಳಲ್ಲಿ ಆಸಕ್ತನಾಗನು.

**ಶಕ್ನೋತೀಹೈವ ಯಸ್ಸೋಢುಂ ಪ್ರಾಕ್ಶರೀರವಿಮೋಕ್ಷಣಾತ್ ।**
**ಕಾಮಕ್ರೋಧೋದ್ಭವಂ ವೇಗಂ ಸ ಯುಕ್ತಃ ಸ ಸುಖೀ ನರಃ ॥**

ದೇಹವನ್ನು ಬಿಡುವುದಕ್ಕೆ ಮೊದಲು, ಸಾಧನಾನುಷ್ಠಾನ ಮಾಡುವಾಗಲೇ (ಆತ್ಮಾನುಭವ ಪ್ರೀತಿಯಿಂದ) ಕಾಮ ಕ್ರೋಧಗಳಿಂದುಂಟಾದ ವೇಗವನ್ನು ಸಹಿಸಬಲ್ಲ ಮನುಷ್ಯನು ಆತ್ಮಾನುಭವಕ್ಕೆ ಅರ್ಹನು; (ಶರೀರವನ್ನು ಬಿಟ್ಟಮೇಲೆ) ಆತ್ಮಾನುಭವ ಸುಖವನ್ನು ಪಡೆಯುವನು.

**ಯೋಽನ್ತಸ್ಸುಖೋಽನ್ತರಾರಾಮಃ ತಥಾನ್ತರ್ಜ್ಯೋತಿರೇವ ಯಃ ।**
**ಸ ಯೋಗೀ ಬ್ರಹ್ಮನಿರ್ವಾಣಂ ಬ್ರಹ್ಮಭೂತೋಽಧಿಗಚ್ಛತಿ ॥ ೨೪ ॥**

ಆತ್ಮಾನುಭವದಿಂದಲೇ ಸುಖಿಸುವವನೂ ಆತ್ಮ ಗುಣಗಳಿಂದಲೇ ಸುಖವನ್ನು ಹೆಚ್ಚಿಸಿಕೊಳ್ಳುವವನೂ, ಆತ್ಮವೊಂದರಲ್ಲಿಯೇ ಜ್ಞಾನವುಳ್ಳವನೂ ಆದವನು (ಭೋಗ್ಯ, ಭೋಗಸ್ಥಾನ, ಭೋಗೋಪಕರಣಗಳಿಲ್ಲ

ಯಾವನಿಗೆ ಆತ್ಮವೊಂದೇ ಆಗಿದೆಯೋ ಅವನು) ಸ್ವಸ್ವರೂಪದಿಂದ ಇರತಕ್ಕ ಯೋಗಿಯಾಗಿ ಆತ್ಮಾನುಭವಸುಖವನ್ನು ಪಡೆಯುವನು.

(ಸಂಗತಿ : ನ ಪ್ರಹೃಷ್ಯೇತ್—(20) ಎಂಬ ಶ್ಲೋಕದಿಂದ ಹಿಡಿದು ಐದು ಶ್ಲೋಕಗಳಲ್ಲಿ ಸಮದರ್ಶಿತ್ವವೆಂಬ ಜ್ಞಾನವಿಪಾಕದ ಉಪಕರಣಗಳಾದ ಹರ್ಷೋದ್ವೇಗ ನಿವೃತ್ತಿ, ಬಾಹ್ಯವಿಷಯ ನಿಸ್ಸಂಗತ್ವ, ಪ್ರಾಕೃತ ಭೋಗಗಳಲ್ಲಿ ದೋಷದರ್ಶನ, ಕಾಮಕ್ರೋಧಾದಿಗಳ ವೇಗ ನಿವಾರಣೆ ಆತ್ಮದಲ್ಲಿಯೇ ಎಲ್ಲ ಭೋಗ್ಯತೆಯ ಕಲ್ಪನೆ—ಎಂಬ ಈ ಐದು ಅರ್ಥಗಳನ್ನೂ ಕ್ರಮವಾಗಿ ಹೇಳಲಾಯಿತು. ಈಗ ಸಮದರ್ಶನಕ್ಕೆ ಅತ್ಯಂತ ಅಂತರಂಗೋಪಾಯವಾದ ಸರ್ವಭೂತ ಹಿತರತತ್ತ್ವವೆಂಬುದನ್ನು ಹೇಳಲಾಗುತ್ತದೆ.)

**ಲಭನ್ತೇ ಬ್ರಹ್ಮನಿರ್ವಾಣಂ ಋಷಯಃ ಕ್ಷೀಣಕಲ್ಮಷಾಃ ।**
**ಛಿನ್ನದ್ವೈಧಾ ಯತಾತ್ಮಾನಃ ಸರ್ವಭೂತಹಿತೇ ರತಾಃ ॥ ೨೫ ॥**

ಶೀತೋಷ್ಣಾದಿ ದ್ವಂದ್ವಗಳಿಂದ ಬಿಡಲ್ಪಟ್ಟವರೂ ಆತ್ಮದಲ್ಲಿಯೇ ಮನಸ್ಸನ್ನು ನಿಯಮಿಸಿರತಕ್ಕವರೂ ಎಲ್ಲ ಪ್ರಾಣಿಗಳ ಹಿತದಲ್ಲಿಯೇ ನಿರತರೂ ಆದ ಆತ್ಮಾವಲೋಕನಪರರು ಆತ್ಮಪ್ರಾಪ್ತಿಗೆ ವಿರೋಧಿಯಾದ ಸಕಲ ಕಲ್ಮಷಗಳನ್ನೂ ಸವೆಯಿಸಿದವರಾಗಿ ಆತ್ಮಸುಖವನ್ನು ಪಡೆಯುವರು-

(ಸಂಗತಿ : ಇಂತಹವರಿಗೆ ಬ್ರಹ್ಮವು ಅತ್ಯಂತ ಸುಲಭವೆನ್ನುತ್ತಾನೆ.)

**ಕಾಮಕ್ರೋಧವಿಯುಕ್ತಾನಾಂ ಯತೀನಾಂ ಯತಚೇತಸಾಂ ।**
**ಅಭಿತೋ ಬ್ರಹ್ಮನಿರ್ವಾಣಂ ವರ್ತತೇ ವಿಜಿತಾತ್ಮನಾಂ ॥ ೨೬ ॥**

ಕಾಮ ಕ್ರೋಧಗಳನ್ನು ಬಿಟ್ಟು ಯತ್ನಿಸುವ, ಆತ್ಮವೊಂದರಲ್ಲಿಯೇ ಸರ್ವಾಕಾರಗಳನ್ನೂ ಕಲ್ಪಿಸುವ, ಜಿತಮನಸ್ಕರಿಗೆ ಬ್ರಹ್ಮಸುಖವು ಕೈಸೇರಿದೆ.

**ಸ್ಪರ್ಶಾನ್ ಕೃತ್ವಾ ಬಹಿರ್ಬಾಹ್ಯಾನ್ ಚಕ್ಷುಶ್ಚೈವಾನ್ತರೇ ಭ್ರುವೋಃ।**
**ಪ್ರಾಣಾಪಾನೌ ಸಮೌ ಕೃತ್ವಾ ನಾಸಾಭ್ಯನ್ತರಚಾರಿಣೌ ॥ ೨೭ ॥**

**ಯತೇಂದ್ರಿಯಮನೋ ಬುದ್ಧಿರ್ಮುನಿರ್ಮೋಕ್ಷಪರಾಯಣಃ ।**
**ವಿಗತೇಚ್ಛಾ ಭಯಕ್ರೋಧೋ ಯಸ್ಸದಾ ಮುಕ್ತ ಏವ ಸಃ ॥೨೮॥**

ವಿಷಯದ ಅನುಭವಗಳನ್ನು ಹೊರದೂಡಿ ಮೂಗಿನ ತುದಿಯಲ್ಲಿ ದೃಷ್ಟಿಯನ್ನು ಸ್ಥಿರಗೊಳಿಸಿ ಮೂಗಿನಲ್ಲಿ ಹರಿದಾಡುವ ಉಚ್ಛ್ವಾಸ ನಿಶ್ವಾಸಗಳನ್ನು ಸಮನಾಗಿ ಮಾಡಿ, ಇಂದ್ರಿಯಗಳನ್ನೂ, ಮನಸ್ಸನ್ನೂ ಮತ್ತು ಬುದ್ಧಿಯನ್ನೂ ನಿರೋಧಿಸಿ, ಇಚ್ಛೆ, ಭಯ, ಕ್ರೋಧಗಳನ್ನು ಕಳೆದುಕೊಂಡು ಮೋಕ್ಷೈಕ ಪ್ರಯೋಜನನಾದ ಆತ್ಮಾವಲೋಕನಶೀಲನು ಯಾವಾಗಲೂ ಮುಕ್ತನೇ. (ಸಾಧ್ಯದಶೆಯಲ್ಲಿ ಹೇಳುವ ಹಾಗೆ ಸಾಧನದಶೆಯಲ್ಲಿಯೂ ಮುಕ್ತನೆಂದು ಭಾವ.)

**ಭೋಕ್ತಾರಂ ಯಜ್ಞತಪಸಾಂ ಸರ್ವಲೋಕಮಹೇಶ್ವರಂ ।**
**ಸುಹೃದಂ ಸರ್ವಭೂತಾನಾಂ ಜ್ಞಾತ್ವಾ ಮಾಂ ಶಾಂತಿಮೃಚ್ಛತಿ ॥**

ನನ್ನನ್ನು ಯಜ್ಞ ತಪಸ್ಸುಗಳ ಭೋಕ್ತೃವೂ ಎಲ್ಲ ಲೋಕಗಳ ಮಹೇಶ್ವರನೂ, ಎಲ್ಲ ಭೂತಗಳ ಸಖನೂ ಆದವನನ್ನಾಗಿ ತಿಳಿದು (ಕರ್ಮಯೋಗ ಮಾಡುವುದರಲ್ಲಿಯೇ) ಮನಃಕ್ಲೇಶ ಶಾಂತ್ಯಾದಿರೂಪವಾದ ಸುಖವನ್ನು ಪಡೆಯುತ್ತಾನೆ.

ಟಿಪ್ಪಣಿ: (ನಾನು ಸರ್ವಲೋಕ ಮಹೇಶ್ವರ, ಸರ್ವ ಸುಹೃದ್ ಎಂದೂ, ಕರ್ಮಯೋಗವು ನನ್ನ ಆರಾಧನವೆಂದೂ ತಿಳಿದು ಸುಖದಿಂದ ಆ ಕರ್ಮಯೋಗದಲ್ಲಿ ಉದ್ಯುಕ್ತನಾಗುತ್ತಾನೆಂದು ಭಾವ. ಸುಹೃತ್ತಿನ ಸಂತೋಷಕ್ಕಾಗಿಯಲ್ಲದೆ ಎಲ್ಲರೂ ಪ್ರಯತ್ನಿಸುತ್ತಾರೆ ?)

ಇಲ್ಲಿಗೆ "ಕರ್ಮಸಂನ್ಯಾಸಯೋಗ" ವೆಂಬ ಐದನೆಯ ಅಧ್ಯಾಯ
ಮುಗಿಯಿತು.

---

ಅಧ್ಯಾಯ ೬

# ಯೋಗಾಭ್ಯಾಸ ವಿಧಿ

(ಸಂಗತಿ : ಕರ್ಮಯೋಗವನ್ನು ಸಪರಿಕರವಾಗಿ ಹೇಳಲಾಯಿತು- ಈಗ ೬ ನೆಯ ಅಧ್ಯಾಯದಲ್ಲಿ ಯೋಗಾಭ್ಯಾಸದ ವಿಧಿಯೂ, ಯೋಗಿಗಳ ನಾಲ್ಕು ತೆರನೂ, ಅಭ್ಯಾಸ ವೈರಾಗ್ಯಾದಿ ಯೋಗಸಾಧನೆಗಳೂ ಯೋಗ ಸಿದ್ಧಿಯೂ ಮತ್ತು ಭಕ್ತಿಯೋಗಕ್ಕೆ ಶ್ರೇಷ್ಠತೆಯೂ ಉಕ್ತವಾಗಿವೆ.)

**ಶ್ರೀ ಭಗವಾನುವಾಚ—**

**ಅನಾಶ್ರಿತಃ ಕರ್ಮಫಲಂ ಕಾರ್ಯಂ ಕರ್ಮ ಕರೋತಿ ಯಃ ।**
**ಸ ಸಂನ್ಯಾಸೀ ಚ ಯೋಗೀ ಚ ನ ನಿರಗ್ನಿರ್ನಚಾಕ್ರಿಯಃ ॥ ೧ ॥**

ಭಗವಂತನೆಂದನು—

(ನಮ್ಮ ಸುಹೃತ್ತಾದ ಪರಮಪುರುಷನ ಪ್ರೀತಿಯೊಂದು ಹೊರತು) ಸ್ವರ್ಗಾದಿ ಫಲವೊಂದನ್ನೂ ಆಶ್ರಯಿಸದೆ ಕರ್ಮವನ್ನು ಮಾತ್ರವೇ ಮಾಡ ತಕ್ಕುದೆಂದು ಕರ್ಮ ಮಾಡುವವನು ಜ್ಞಾನಯೋಗಿಯು; ಅವನು ಕರ್ಮ ಯೋಗಿಯೂ ಹೌದು ಅವನು ಚೋದಿತವಾದ ಯಜ್ಞಾದಿ ಕರ್ಮಗಳನ್ನು ಬಿಟ್ಟವನಲ್ಲ, ಕೇವಲ ಜ್ಞಾನಯೋಗಿಯೂ ಅಲ್ಲ. (ಜ್ಞಾನಯೋಗಿಗೆ ಜ್ಞಾನಯೋಗವೊಂದೇ ಕರ್ಮಯೋಗಿಗೆ ಎರಡೂ ಇವೆಯೆಂದು ಭಾವ.)

**ಯಂ ಸಂನ್ಯಾಸ ಇತಿ ಪ್ರಾಹುರ್ಯೋಗಂ ತಂ ವಿದ್ಧಿ ಪಾಂಡವ ।**
**ನ ಹ್ಯಸಂನ್ಯಸ್ತಸಂಕಲ್ಪೋ ಯೋಗೀ ಭವತಿ ಕಶ್ಚನ ॥ ೨ ॥**

ಎಲೈ ಅರ್ಜುನನೇ ಯಾವುದನ್ನು ಜ್ಞಾನಯೋಗವೆನ್ನುವರೋ ಅದನ್ನು ಕರ್ಮಯೋಗವೆಂದೇ ತಿಳಿ. (ಆತ್ಮನ ನಿಜವಾದ ಸ್ವರೂಪವನ್ನು ಅರಿತು ಅದರಿಂದ) ದೇಹದಲ್ಲಿ ಆತ್ಮವೆಂಬ ಭ್ರಮೆ ಬಿಡದವನು ಯಾವನೂ ಕರ್ಮಯೋಗಿಯಾಗನು.

**ಆರುರುಕ್ಷೋರ್ಮುನೇರ್ಯೋಗಂ ಕರ್ಮ ಕಾರಣಮುಚ್ಯತೇ ।**
**ಯೋಗಾರೂಢಸ್ಯ ತಸ್ಯೈವ ಶಮಃ ಕಾರಣಮುಚ್ಯತೇ ॥ ೩ ॥**

ಆತ್ಮಾವಲೋಕನವನ್ನು ಪಡೆಯಲಿಚ್ಛೆಯುಳ್ಳ ಮುಮುಕ್ಷುವಿಗೆ ಕರ್ಮಯೋಗವು ಸಾಧನ. ಆತ್ಮಾವಲೋಕನ ಸಿದ್ಧಿಸಿದ ಅವನಿಗೇ ಕರ್ಮ ನಿವೃತ್ತಿಯು ಸಾಧನವಾಗಿ ಹೇಳಲ್ಪಟ್ಟಿದೆ. (ಆತ್ಮಾವಲೋಕನವು ಸಿದ್ಧಿಸುವವರಿಗೂ ಕರ್ಮವನ್ನು ಮಾಡಲೇಬೇಕೆಂದು ಭಾವ.)

(ಸಂಗತಿ : ಯಾವಾಗ ಯೋಗವು ಸ್ಥಿರಗೊಳ್ಳುವುದು ? ಎಂದರೆ ಹೇಳುತ್ತಾನೆ.)

**ಯದಾ ಹಿ ನೇಂದ್ರಿಯಾರ್ಥೇಷು ನ ಕರ್ಮಸ್ವನುಷಜ್ಜತೇ ।**
**ಸರ್ವಸಂಕಲ್ಪಸಂನ್ಯಾಸೀ ಯೋಗಾರೂಢಸ್ತದೋಚ್ಯತೇ ॥ ೪ ॥**

(ಆತ್ಮಾವಲೋಕನವಾಗುವವರಿಗೂ ಕರ್ಮಯೋಗದಲ್ಲಿ ತೊಡಗಿರುವ ಯೋಗಿಯು) ಆತ್ಮವ್ಯತಿರಿಕ್ತವಾದ ವಿಷಯಗಳಲ್ಲಿ ಮತ್ತು ಅದಕ್ಕೆ ಸಂಬಂಧಪಟ್ಟ ಕರ್ಮಗಳಲ್ಲಿ ಯಾವಾಗ ಆಸಕ್ತನಾಗುವುದಿಲ್ಲವೋ ಆಗ ಎಲ್ಲ ಸಂಕಲ್ಪಗಳನ್ನೂ ಬಿಟ್ಟವನಾಗಿ ಯೋಗಾರೂಢನೆನಿಸುತ್ತಾನೆಯಷ್ಟೆ ! (ಆಗ ಅವನಿಗೆ ಯೋಗವು ಸ್ಥಿರಗೊಳ್ಳುವುದೆಂದು ಭಾವ.)

**ಉದ್ಧರೇದಾತ್ಮನಾಽಽತ್ಮಾನಂ ನಾತ್ಮಾನಮವಸಾದಯೇತ್ ।**
**ಆತ್ಮೈವಹ್ಯಾತ್ಮನೋಬಂಧುರಾತ್ಮೈವ ರಿಪುರಾತ್ಮನಃ ॥ ೫ ॥**

ವಿಷಯಸಂಗವಿಲ್ಲದ ಮನಸ್ಸಿನಿಂದ ತನ್ನನ್ನು ಉದ್ಧರಿಸಬೇಕು. ವಿಷಯಾಸಕ್ತ ಮನಸ್ಸಿನಿಂದ ತನ್ನನ್ನು ಅಧೋಗತಿಗೆ ನೂಕಬಾರದು. ಮನಸ್ಸೇ ತನಗೆ ಬಂಧು ಮತ್ತು ಶತ್ರುವಷ್ಟೆ !

(ಸಂಗತಿ : ಒಂದೇ ವಸ್ತುವು ಒಬ್ಬನಿಗೆ ಬಂಧು ಮತ್ತು ಶತ್ರುವಾಗುವುದು ಹೇಗೆ ? ಎಂದರೆ ಹೇಳುತ್ತಾನೆ.)

**ಬಂಧುರಾತ್ಮಾಽಽತ್ಮನಸ್ತಸ್ಯ ಯೇನಾತ್ಮೈವಾತ್ಮನಾ ಜಿತಃ ।**
**ಅನಾತ್ಮನಸ್ತು ಶತ್ರುತ್ವೇ ವರ್ತೇತಾತ್ಮೈವ ಶತ್ರುವತ್ ॥ ೬ ॥**

ತನ್ನಿಂದಲೇ ಮನಸ್ಸನ್ನು ಜಯಿಸಿಟ್ಟುಕೊಂಡವನಿಗೆ ಆ ಮನಸ್ಸು ಬಂಧು. ಮನಸ್ಸನ್ನು ಜಯಿಸದವನಿಗಾದರೋ ಆ ಮನಸ್ಸೇ ಶತ್ರುವಂತೆ ಶತ್ರುಭಾವದಿಂದ ವರ್ತಿಸುತ್ತದೆ.

(ಸಂಗತಿ : ಯೋಗಾರಂಭಕ್ಕೆ ಯೋಗ್ಯವಾದ ಅವಸ್ಥೆಯನ್ನು ಹೇಳುತ್ತಾನೆ.)

**ಜಿತಾತ್ಮನಃ ಪ್ರಶಾಂತಸ್ಯ ಪರಮಾತ್ಮಾ ಸಮಾಹಿತಃ ।**
**ಶೀತೋಷ್ಣಸುಖದುಃಖೇಷು ತಥಾ ಮಾನಾವಮಾನಯೋಃ ॥೭॥**

ಶೀತೋಷ್ಣ ಸುಖ ದುಃಖಗಳಲ್ಲಿಯೂ, ಮಾನಾಪಮಾನಗಳಲ್ಲಿಯೂ ಸಮಾಧಾನವನ್ನು ತಳೆದ ಪ್ರಶಾಂತಾತ್ಮನಿಗೆ ಆತ್ಮನು ವಿಶದವಾಗಿ ಸಾಕ್ಷಾತ್ಕರಿಸಲು ಯೋಗ್ಯನಾಗುತ್ತಾನೆ.

(ಸಂಗತಿ : ಮೇಲೆ ಹೇಳಿದ ಇಂದ್ರಿಯಜಯ ಮತ್ತು ಸುಖ ದುಃಖಗಳ ಸಹಿಷ್ಣುತೆಗೆ ಕಾರಣವನ್ನು ಹೇಳುತ್ತಾನೆ.)

**ಜ್ಞಾನವಿಜ್ಞಾನತೃಪ್ತಾತ್ಮಾ ಕೂಟಸ್ಥೋ ವಿಜಿತೇಂದ್ರಿಯಃ ।**
**ಯುಕ್ತ ಇತ್ಯುಚ್ಯತೇ ಯೋಗೀ ಸಮಲೋಷ್ಟಾಶ್ಮಕಾಂಚನಃ ॥೮॥**

ಆತ್ಮನು ದೇಹಾದಿಗಳಿಗಿಂತ ಭಿನ್ನನು ಎಂಬ ಜ್ಞಾನದಿಂದ ಮತ್ತು ಅವನು ನಿತ್ಯನು, ನಿರತಿಶಯಾನಂದನು ಎಂಬುದೇ ಮುಂತಾದ ವಿಜ್ಞಾನದಿಂದ ತೃಪ್ತಿಹೊಂದಿದ ಮನಸ್ಸುಳ್ಳವನೂ, ಆತ್ಮನ ಪರಿಶುದ್ಧ ಸ್ವರೂಪದಲ್ಲಿಯೇ ನಿರತನೂ, ಜಿತೇಂದ್ರಿಯನೂ, ಮಣ್ಣು, ಕಲ್ಲು, ಬಂಗಾರಗಳನ್ನು ಸಮಾನವಾಗಿ ಕಾಣುವವನೂ (ಪ್ರಾಕೃತ ವಸ್ತುಗಳಲ್ಲಿ ಭೋಗ್ಯತೆಯ ಬುದ್ಧಿಯಿಲ್ಲದುದರಿಂದ) ಆದ ಕರ್ಮಯೋಗಿಯು ಆತ್ಮಾವಲೋಕನವೆಂಬ ಯೋಗವನ್ನು ಅಭ್ಯಸಿಸಲು ಅರ್ಹನೆನಿಸುತ್ತಾನೆ.

**ಸುಹೃನ್ಮಿತ್ರಾರ್ಯುದಾಸೀನ ಮಧ್ಯಸ್ಥದ್ವೇಷ್ಯಬಂಧುಷು ।**
**ಸಾಧುಷ್ವಪಿ ಚ ಪಾಪೇಷು ಸಮಬುದ್ಧಿರ್ವಿಶಿಷ್ಯತೇ ॥ ೯ ॥**

(ಮೇಲೆ ಹೇಳಿದ ಮಣ್ಣು, ಕಲ್ಲು, ಬಂಗಾರಗಳೆಂಬ ಅಚೇತನಗಳಲ್ಲಿ ಹೇಗೋ ಹಾಗೆ) ಸುಹೃತ್, ಮಿತ್ರ, ಅರಿ, ಉದಾಸೀನ, ಮಧ್ಯಸ್ಥ, ದ್ವೇಷ್ಯ,

ಬಂಧು, ಸಾಧು, ಪಾಪಿಗಳೆಂಬ ಚೇತನರಲ್ಲಿಯೂ ಸಮಬುದ್ಧಿಯುಳ್ಳವನು ಯೋಗಾಭ್ಯಾಸಕ್ಕೆ ಶ್ರೇಷ್ಠನು.

(ಟಿಪ್ಪಣಿ : "ಸುಹೃತ್" = ವಯಸ್ತಾರತಮ್ಯವೆಣಿಸದೆ ಹಿತೈಷಿಯಾದವನು. "ಮಿತ್ರ" = ಸಮವಯಸ್ಸಿನವನಾದ ಹಿತೈಷಿ. "ಅರಿ" = ಕಾರಣವಿದ್ದು ನಮಗೆ ಅನರ್ಥವನ್ನು ಇಚ್ಛಿಸತಕ್ಕವನು. "ಉದಾಸೀನ" = ನಿಗ್ರಹಾನುಗ್ರಹಗಳೆರಡಕ್ಕೂ ಕಾರಣವಿಲ್ಲದುದರಿಂದ ತಟಸ್ಥನಾಗಿರುವವನು. "ಮಧ್ಯಸ್ಥ" = ಜನ್ಮದಿಂದಲೇ ನಿಗ್ರಹಾನುಗ್ರಹವಿಲ್ಲದವನು. "ದ್ವೇಷ್ಯ" = ಸ್ವಭಾವದಿಂದಲೇ ನಮಗೆ ಅನಿಷ್ಟ ಬಯಸುವವನು. "ಬಂಧು" = ಸ್ವಭಾವವಾಗಿಯೇ ಹಿತೈಷಿ. "ಸಾಧು" = ಧರ್ಮಶೀಲ. "ಪಾಪ" = ಪಾಪಶೀಲ.)

(ಸಂಗತಿ : ಈಗ ಈ ಅಧ್ಯಾಯದ ಪ್ರಧಾನಾರ್ಥವಾದ ಯೋಗಾಭ್ಯಾಸ ವಿಧಿಯನ್ನು ಹೇಳಲಾಗುತ್ತದೆ.)

**ಯೋಗೀ ಯುಂಜೀತ ಸತತಂ ಆತ್ಮಾನಂ ರಹಸಿ ಸ್ಥಿತಃ ।**
**ಏಕಾಕೀ ಯತಚಿತ್ತಾತ್ಮಾ ನಿರಾಶೀರಪರಿಗ್ರಹಃ ॥ ೧೦ ॥**

(ಇಂತಹ) ಕರ್ಮಯೋಗಿಯು ನಿತ್ಯವೂ ಯೋಗಕಾಲದಲ್ಲಿ ಏಕಾಂತದಲ್ಲಿದ್ದು, ಒಂಟಿಗನಾಗಿ ಚಿತ್ತ ಮತ್ತು ಮನಸ್ಸನ್ನು ಜಯಿಸಿ ಯಾವುದನ್ನೂ ಇಚ್ಛಿಸದೆ ಮತ್ತು ಯಾವುದನ್ನೂ ಸ್ವೀಕರಿಸದೆ, ಸ್ವದರ್ಶನದಲ್ಲಿ ನಿಷ್ಠನಾಗಬೇಕು.

(ಸಂಗತಿ : ಬಾಹ್ಯೋಪಕರಣನಿಯಮವನ್ನು ಹೇಳುತ್ತಾನೆ.)

**ಶುಚೌ ದೇಶೇ ಪ್ರತಿಷ್ಠಾಪ್ಯ ಸ್ಥಿರಮಾಸನಮಾತ್ಮನಃ ।**
**ನಾತ್ಯುಚ್ಛ್ರಿತಂ ನಾತಿನೀಚಂ ಚೇಲಾಜಿನಕುಶೋತ್ತರಂ ॥ ೧೧ ॥**

**ತತ್ರೈಕಾಗ್ರಂ ಮನಃ ಕೃತ್ವಾ ಯತಚಿತ್ತೇಂದ್ರಿಯಕ್ರಿಯಃ ।**
**ಉಪವಿಶ್ಯಾಸನೇ ಯುಂಜ್ಯಾದ್ಯೋಗಮಾತ್ಮವಿಶುದ್ಧಯೇ ॥೧೨॥**

ಪವಿತ್ರವಾದ ಸ್ಥಳದಲ್ಲಿ ಬಲು ಎತ್ತರವಲ್ಲದ, ತಗ್ಗಲ್ಲದ, ವಸ್ತ್ರವನ್ನು ಹಾಸಿ ಮೇಲೆ ಕೃಷ್ಣಾಜಿನವನ್ನೂ ದರ್ಭೆಗಳನ್ನೂ ಹರವಿ ಮಾಡಿದ ಸ್ಥಿರವಾದ ತನ್ನ ಆಸನವನ್ನು ಸ್ಥಾಪಿಸಿ, ಮನಸ್ಸನ್ನು ಏಕಾಗ್ರವಾಗಿ ಮಾಡಿ,

ಬಾಹ್ಯ ವಿಷಯಗಳಿಂದ ಚಿತ್ತ ಮತ್ತು ಇಂದ್ರಿಯಗಳ ವ್ಯಾಪಾರವನ್ನು ನಿರೋಧಿಸಿ, ಆ ಆಸನದಲ್ಲಿ ಕುಳಿತು ಬಂಧನಿವೃತ್ತಿಗಾಗಿ ಆತ್ಮಾವಲೋಕನ ವನ್ನು ಮಾಡಬೇಕು.

(ಸಂಗತಿ : ಹೀಗೆ ಬಾಹ್ಯ ಯೋಗೋಪಕರಣಗಳನ್ನೂ, ಚಿತ್ತೈಕಾಗ್ರ್ಯವನ್ನೂ ಹೇಳಿದಮೇಲೆ, ಆಂತರವಾದ ಕಾಯ ಮತ್ತು ಮನಸ್ಸುಗಳ ಕರ್ತವ್ಯ ವಿಶೇಷಗಳನ್ನು ಕ್ರಮವಾಗಿ ನಿಯಮಿಸುತ್ತಾನೆ.)

**ಸಮಂ ಕಾಯಶಿರೋಗ್ರೀವಂ ಧಾರಯನ್ನಚಲಂ ಸ್ಥಿರಂ ।**
**ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥೧೩॥**

**ಪ್ರಶಾಂತಾತ್ಮಾ ವಿಗತಭೀಃ ಬ್ರಹ್ಮಚಾರಿವ್ರತೇ ಸ್ಥಿತಃ ।**
**ಮನಸ್ಸಂಯಮ್ಯ ಮಚ್ಚಿತ್ತೋ ಯುಕ್ತ ಆಸೀತ ಮತ್ಪರಃ ॥೧೪॥**

ಕಾಯವನ್ನೂ, ಶಿರಸ್ಸನ್ನೂ, ಕಂಠವನ್ನೂ ಸಮರೇಖೆಯಲ್ಲಿ ಅಚಲ ವಾಗಿಯೂ, ಸ್ಥಿರವಾಗಿಯೂ ಧರಿಸಿ, ತನ್ನ ತುದಿಮೂಗಿನಲ್ಲಿಯೇ ದೃಷ್ಟಿ ಯನ್ನಿಟ್ಟು, ದಿಕ್ಕುಗಳನ್ನು ನೋಡದೆ, ಅತ್ಯಂತ ಸುಖಿತವಾದ ಮನಸ್ಸುಳ್ಳ ವನೂ, ನಿರ್ಭಯನೂ, ಬ್ರಹ್ಮಚರ್ಯ ವ್ರತದಲ್ಲಿ ನಿಂತವನೂ ಆಗಿ, ಮನ ಸ್ಸನ್ನು ನಿಗ್ರಹಿಸಿ, ಚಿತ್ತವನ್ನು ನನ್ನಲ್ಲಿಟ್ಟು, ಜಾಗರೂಕನಾಗಿ ನನ್ನನ್ನೇ ಧ್ಯಾನಿಸುತ್ತ ಕುಳಿತಿರಬೇಕು.

(ಸಂಗತಿ : ಜೀವಾತ್ಮಯೋಗ ಪ್ರಕರಣದಲ್ಲಿ ಪರಮಾತ್ಮ ಚಿಂತನ ವನ್ನು ಏಕೆ ಹೇಳಿದೆ?—ಎಂದರೆ,)

**ಯುಂಜನ್ನೇವಂ ಸದಾಽತ್ಮಾನಂ ಯೋಗೀ ನಿಯತಮಾನಸಃ ।**
**ಶಾನ್ತಿಂ ನಿರ್ವಾಣಪರಮಾಂ ಮತ್ಸಂಸ್ಥಾಮಧಿಗಚ್ಛತಿ ॥ ೧೫ ॥**

(ಶುಭಾಶ್ರಯನಾದ ನನ್ನಲ್ಲಿ) ಯಾವಾಗಲೂ ಹೀಗೆ ಮನಸ್ಸನ್ನು ನಿಯಮಿಸಿದ ಯೋಗಿಯು (ನನ್ನ ಸ್ಪರ್ಶದಿಂದ ಪವಿತ್ರವಾದುದರಿಂದ) ನಿಶ್ಚಲವಾದ ಮನಸ್ಸುಳ್ಳವನಾಗಿ ನನ್ನಲ್ಲಿರುವ ಸುಖದ ಪರಮಾವಧಿಯಾದ ಶಾಂತಿಯನ್ನು ಪಡೆವನು.

**(ಟಿಪ್ಪಣಿ: ಪರಮಾತ್ಮನಲ್ಲಿರುವ ಶಾಂತಿಯೆಂಬುದು ಹಸಿವು, ನೀರಡಿಕೆ, ಶೋಕ, ಮೋಹ, ಜರೆ, ಮೃತ್ಯುಗಳೆಂಬ ಷಡೂರ್ಮಿಗಳಿಲ್ಲದಿರುವುದು.)**

(ಸಂಗತಿ : ಹೀಗೆ ಆತ್ಮಾವಲೋಕನಪರನಿಗೆ ಮನೋ ನೈರ್ಮಲ್ಯವು ಆವಶ್ಯಕ. ಶುಭಾಶ್ರಯನಾದ ಭಗವಂತನಲ್ಲಿ ಮನಸ್ಸನ್ನು ಇಡುವುದ ರಿಂದ ಅದು ಸಾಧ್ಯ—ಎಂದು ಹೇಳಿ ಬೇರೆ ಯೋಗೋಪಕರಣಗಳನ್ನೂ ಹೇಳುತ್ತಾನೆ.)

**ನಾತ್ಯಶ್ನತಸ್ತು ಯೋಗೋಽಸ್ತಿ ನ ಚೈಕಾನ್ತಮನಶ್ನತಃ ।**
**ನ ಚಾತಿಸ್ವಪ್ನಶೀಲಸ್ಯ ಜಾಗ್ರತೋ ನೈವ ಚಾರ್ಜುನ ॥ ೧೬ ॥**

**ಯುಕ್ತಾಹಾರವಿಹಾರಸ್ಯ ಯುಕ್ತಚೇಷ್ಟಸ್ಯ ಕರ್ಮಸು ।**
**ಯುಕ್ತಸ್ವಪ್ನಾವಬೋಧಸ್ಯ ಯೋಗೋ ಭವತಿ ದುಃಖಹಾ ॥೧೭॥**

ಅತಿಯಾಗಿ ತಿನ್ನುವವನಿಗೆ, ಏನನ್ನೂ ತಿನ್ನದವನಿಗೆ, ಬಹಳವಾಗಿ ಮಲಗುವವನಿಗೆ ಅಥವಾ ನಿತ್ಯ ಜಾಗೃತನಿಗೆ ಯೋಗವು ಸಾಧ್ಯವೇ ಅಲ್ಲ. ಆಹಾರ ವಿಹಾರಗಳಲ್ಲಿ, ಶ್ರಮಕರವಾದ ಕಾರ್ಯಗಳಲ್ಲಿ, ಮಲಗುವುದರಲ್ಲಿ, ಜಾಗರಣೆಯಲ್ಲಿ ಮಿತವಾಗಿ ವರ್ತಿಸತಕ್ಕವನಿಗೆ ಬಂಧನಾಶಕವಾದ ಯೋಗವು ಸಂಪನ್ನವಾಗುತ್ತದೆ.

**ಯದಾ ವಿನಿಯತಂ ಚಿತ್ತಂ ಆತ್ಮನ್ಯೇವಾವತಿಷ್ಠತೇ ।**
**ನಿಸ್ಪೃಹಸ್ಸರ್ವಕಾಮೇಭ್ಯೋ ಯುಕ್ತ ಇತ್ಯುಚ್ಯತೇ ತದಾ ॥೧೮॥**

ಚೆನ್ನಾಗಿ ನಿಯಮಿತವಾದ ಮನಸ್ಸು ಆತ್ಮದಲ್ಲಿಯೇ ಸ್ಥಿರವಾಗಿ ನೆಲಸಿದಾಗ ಮನುಷ್ಯನು ಎಲ್ಲ ಕಾಮನೆಗಳಲ್ಲಿ ನಿಸ್ಪೃಹನಾಗಿ ಯೋಗಾರ್ಹ ನೆನಿಸುವನು.

(ಸಂಗತಿ : ಯೋಗದಶೆಯ ಲಕ್ಷಣವೇನೆಂದರೆ)

**ಯಥಾ ದೀಪೋ ನಿವಾತಸ್ಥೋ ನೇಙ್ಗತೇ ಸೋಪಮಾ ಸ್ಮೃತಾ ।**
**ಯೋಗಿನೋ ಯತಚಿತ್ತಸ್ಯ ಯುಂಜತೋ ಯೋಗಮಾತ್ಮನಃ ॥**

ಗಾಳಿಯಿಲ್ಲದ ಸ್ಥಳದಲ್ಲಿ ಅಲುಗಾಡದ ಸಪ್ರಭವಾದ ದೀಪವು ಸ್ಥಿರ ಚಿತ್ತನಾದ ಯೋಗಿಯು ಸಾಕ್ಷಾತ್ಕರಿಸುವ ಆತ್ಮಸ್ವರೂಪಕ್ಕೆ ನಿದರ್ಶನ ವೆನಿಸಿದೆ.

(ಸಂಗತಿ : ಅತ್ಯಾದರ ತೋರಿಸುವುದಕ್ಕಾಗಿ ಮತ್ತೆಯೂ ಯೋಗ ದಶೆಯ ನಿರತಿಶಯ ಪುರುಷಾರ್ಥವನ್ನು ವಿಸ್ತಾರವಾಗಿ ಪ್ರತಿಪಾದಿಸುತ್ತಾನೆ.)

**ಯತ್ರೋಪರಮತೇ ಚಿತ್ತಂ ನಿರುದ್ಧಂ ಯೋಗಸೇವಯಾ ।**
**ಯತ್ರ ಚೈವಾತ್ಮನಾಽಽತ್ಮಾನಂ ಪಶ್ಯನ್ನಾತ್ಮನಿ ತುಷ್ಯತಿ ॥ ೨೦ ॥**

**ಸುಖಮಾತ್ಯಂತಿಕಂ ಯತ್ತದ್ಬುದ್ಧಿಗ್ರಾಹ್ಯಮತೀಂದ್ರಿಯಂ ।**
**ವೇತ್ತಿ ಯತ್ರ ನ ಚೈವಾಯಂ ಸ್ಥಿತಶ್ಚಲತಿ ತತ್ತ್ವತಃ ॥ ೨೧ ॥**

**ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ ।**
**ಯಸ್ಮಿನ್ ಸ್ಥಿತೋ ನ ದುಃಖೇನ ಗುರುಣಾಽಪಿ ವಿಚಾಲ್ಯತೇ ॥೨೨॥**

**ತಂ ವಿದ್ಯಾದ್ದುಃಖಸಂಯೋಗವಿಯೋಗಂ ಯೋಗಸಂಜ್ಞಿತಂ ।**
**ಸ ನಿಶ್ಚಯೇನ ಯೋಕ್ತವ್ಯೋ ಯೋಗೋಽನಿರ್ವಿಣ್ಣಚೇತಸಾ ॥**

ಯೋಗ ಸೇವೆಗಾಗಿ ಎಲ್ಲದರಲ್ಲಿಯೂ ನಿರುದ್ಧವಾದ ಚಿತ್ತವು ಯಾವ ಯೋಗದಲ್ಲಿ (ಅದೇ ಅತಿಶಯಸುಖವೆಂದು) ಕ್ರೀಡಿಸುತ್ತದೆಯೋ, ಎಲ್ಲಿ ತನ್ನಿಂದಲೇ ಆತ್ಮವನ್ನು ಕಂಡು ಆ ಆತ್ಮಸ್ವರೂಪದಲ್ಲಿಯೇ ಸಂತೋಷಿಸುತ್ತದೆಯೋ, ಬುದ್ಧಿಯಿಂದ ಮಾತ್ರ ಗ್ರಾಹ್ಯವೂ ಆತ್ಯಂತಿಕವೂ ಆದ ಅತೀಂದ್ರಿಯ ಸುಖವನ್ನು ಎಲ್ಲಿ ಅನುಭವಿಸುತ್ತದೆಯೋ, (ಆ ಸುಖಾತಿರೇಕದಿಂದ) ಯಾವುದರಿಂದ ಮನಸ್ಸು ಕದಲದೋ, ಯಾವುದನ್ನು (ಯೋಗ) ಪಡೆದು ಅದನ್ನು ನಿಲ್ಲಿಸಿದಾಗಲೂ ಅದಕ್ಕಿಂತ ಹೆಚ್ಚಿನದಾಗಿ ಬೇರೊಂದು ಲಾಭವನ್ನು ಎಣಿಸದೆ ಅದಕ್ಕಾಗಿಯೇ ಹಂಬಲಿಸುವುದೋ ಮತ್ತು ಎಲ್ಲಿ ಸ್ಥಿರವಾಗಿರುವುದರಿಂದ ಎಂತಹ ಮಹಾದುಃಖದಿಂದಲೂ ಕಂಪಿಸದೋ, ಅಂತಹ ದುಃಖರಹಿತವಾದ ಸ್ಥಿತಿಯೇ ಯೋಗವೆಂಬುದಾಗಿ ತಿಳಿಯಬೇಕು. ಯೋಗವು ಇಂತಹುದೆಂದು ಆರಂಭದಲ್ಲಿಯೆ ನಿಶ್ಚೈಸಿ, ಸಂತೋಷದಿಂದ ಮನುಷ್ಯನು ಇದರಲ್ಲಿ ಉದ್ಯುಕ್ತನಾಗಬೇಕು.

(ಸಂಗತಿ : ಹಿಂದೆ ಅಲ್ಲಲ್ಲಿ ಹೇಳಿದ ಮಮಕಾರ ಪರಿತ್ಯಾಗ ನೊದಲಾದುದನ್ನೇ ಸುಲಭವಾಗಿ ತಿಳಿಯಲೆಂದು ಈಗ ಕೂಡಿಸಿ ಹೇಳುತ್ತಾನೆ.

**ಸಂಕಲ್ಪಪ್ರಭವಾನ್ ಕಾಮಾನ್ ತ್ಯಕ್ತ್ವಾ ಸರ್ವಾನಶೇಷತಃ ।**
**ಮನಸೈವೇಂದ್ರಿಯಗ್ರಾಮಂ ವಿನಿಯಮ್ಯ ಸಮಂತತಃ ॥ ೨೪ ॥**

**ಶನೈಶ್ಶನೈರುಪರಮೇದ್ಬುದ್ಧ್ಯಾ ಧೃತಿಗೃಹೀತಯಾ ।**
**ಆತ್ಮಸಂಸ್ಥಂ ಮನಃ ಕೃತ್ವಾ ನ ಕಿಂಚಿದಪಿ ಚಿಂತಯೇತ್ ॥ ೨೫ ॥**

(ಸಂಕಲ್ಪಜ – ಸ್ಪರ್ಶಜಗಳೆಂದು ಕಾಮಗಳು ಎರಡುವಿಧ. ಸಂಕಲ್ಪಜಗಳೆಂಬುವು – ಪುತ್ರಕ್ಷೇತ್ರಾದಿಗಳು. ಸ್ಪರ್ಶಜಗಳೆಂಬುವು– ಶೀತೋಷ್ಣಾದಿಗಳು. ಇವುಗಳಲ್ಲಿ) – ಸಂಕಲ್ಪಜ ಕಾಮಗಳೆಲ್ಲವನ್ನೂ (ಇವು ಕರ್ಮೋಪಾಧಿಕವಾದ ಶರೀರದಲ್ಲಿ ಅನ್ವಿತವಾದುವೇ ಹೊರತು ಆತ್ಮಸ್ವರೂಪದಲ್ಲಿ ಅನ್ವಿತಗಳಲ್ಲವೆಂದು ಚಿಂತಿಸುವುದರ ಮೂಲಕ) ಮನಸ್ಸಿನಿಂದಲೇ ತ್ಯಾಗಮಾಡಿ, ತ್ಯಜಿಸಲಾಗದ ಸ್ಪರ್ಶಜಗಳಲ್ಲಿ ಅದರ ನಿಮಿತ್ತವಾದ ಹರ್ಷ ಮತ್ತು ಉದ್ವೇಗಗಳನ್ನು ಬಿಟ್ಟು, ಇಂದ್ರಿಯ ಸಮುದಾಯವನ್ನು ಯಾವ ವಿಷಯಗಳ ಕಡೆಗೂ ಹೋಗದಂತೆ ತಡೆದು, ಮೆಲ್ಲ ಮೆಲ್ಲನೆ, ವಿವೇಕ ವಿಷಯವಾದ ಬುದ್ಧಿಯಿಂದ ವೈರಾಗ್ಯವನ್ನು ಹೊಂದಬೇಕು. ಮನಸ್ಸನ್ನು ಆತ್ಮದಲ್ಲಿರಿಸಿ ಮತ್ತಾವುದನ್ನೂ ಚಿಂತಿಸಬಾರದು.

**ಯತೋ ಯತೋ ನಿಶ್ಚರತಿ ಮನಶ್ಚಂಚಲಮಸ್ಥಿರಂ ।**
**ತತಸ್ತತೋ ನಿಯಮ್ಯೈತದಾತ್ಮನ್ಯೇವ ವಶಂ ನಯೇತ್ ॥ ೨೬ ॥**

ಚಂಚಲ ಸ್ವಭಾವಪ್ರಯುಕ್ತ ಅಸ್ಥಿರವಾದ ಮನಸ್ಸು ಎತ್ತ ಎತ್ತ ಓಡುವುದೋ ಅತ್ತ ಅತ್ತಲಿಂದ ಅದನ್ನು ನಿಗ್ರಹಿಸಿ (ಯೋಗಿಯು) (ನಿರತಿಶಯ ಸುಖಭಾವನೆಯಿಂದ) ಆತ್ಮದ ವಶಕ್ಕೇ ತರಬೇಕು.

**ಪ್ರಶಾಂತಮನಸಂ ಹ್ಯೇನಂ ಯೋಗಿನಂ ಸುಖಮುತ್ತಮಂ ।**
**ಉಪೈತಿ ಶಾಂತರಜಸಂ ಬ್ರಹ್ಮಭೂತಮಕಲ್ಮಷಂ ॥ ೨೭ ॥**

ಆತ್ಮದಲ್ಲಿಯೇ ನಿಶ್ಚಲ ಮನಸ್ಸುಳ್ಳ (ಅದರಿಂದಲೇ) ಕಲ್ಮಷಗಳನ್ನೆಲ್ಲ ನೀಗಿದ, (ಅದರಿಂದಲೇ) ರಜೋಗುಣವು ವಿನಷ್ಟವಾದ, (ಅದರಿಂದಲೇ) ಸ್ವಸ್ವರೂಪದಿಂದಿರುವ, ಈ ಯೋಗಿಗೆ (ಆತ್ಮಸ್ವರೂಪಾನುಭವವೆಂಬ) ಉತ್ತಮ ಸುಖವು ಪ್ರಾಪ್ತವಾಗುವುದು.

(ಸಂಗತಿ: ಹೀಗೆ ಯೋಗಪ್ರಭಾವದಿಂದ ಉಂಟಾಗುವ ಸುಖವು ಆತ್ಮಾನುಭವರೂಪವೆಂದೂ, ಆತ್ಮಸ್ವರೂಪದ ಸಾಕ್ಷಾತ್ಕಾರವಾದ ಬಳಿಕ ಅದು ನಿರತಿಶಯವೂ, ಅನಿವರ್ತನೀಯವೂ ಮತ್ತು ಅನಾಯಾಸದಿಂದ ಸಾಧ್ಯವಾದುದೆಂದೂ ಹೇಳುತ್ತಾನೆ.)

**ಏವಂ ಯುಂಜನ್ ಸದಾಽಽತ್ಮಾನಂ ಯೋಗೋ ವಿಗತಕಲ್ಮಷಃ ।**
**ಸುಖೇನ ಬ್ರಹ್ಮಸಂಸ್ಪರ್ಶಮತ್ಯಂತಂ ಸುಖಮಶ್ನುತೇ ॥ ೨೮ ॥**

ಹೀಗೆ ಆತ್ಮಾನುಸಂಧಾನ ಮಾಡಿ ಪ್ರಾಚೀನ ಸಮಸ್ತ ಪಾಪಗಳಿಂದ ವಿಮುಕ್ತನಾದ ಯೋಗಿಯು ಬ್ರಹ್ಮಾನುಭವದ ಅಪರಿಮಿತ ಸುಖವನ್ನು ಅನಾಯಾಸವಾಗಿ ಅನುಭವಿಸುವನು.

(ಸಂಗತಿ: ಹೀಗೆ ಯೋಗಾಭ್ಯಾಸ ವಿಧಿಯನ್ನು ಹೇಳಿದಮೇಲೆ, ಸಮದರ್ಶಿತ್ವರೂಪ ಯೋಗದ ವಿಪಾಕಾನುಗುಣವಾಗಿ ನಾಲ್ಕುಪ್ರಕಾರವಾದ ಯೋಗವಿಪಾಕದಶೆಯು ಹೇಳಲ್ಪಡುತ್ತದೆ. ಅದರಲ್ಲಿ ಜೀವರೊಳಗಿನ ಪರಸ್ಪರ ಸಾಮ್ಯದರ್ಶನವು ಈ ಶ್ಲೋಕದಲ್ಲಿ ವಿವಕ್ಷಿತವಾಗಿದೆ.)

**ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ ।**
**ಈಕ್ಷತೇ ಯೋಗಯುಕ್ತಾತ್ಮಾ ಸರ್ವತ್ರ ಸಮದರ್ಶನಃ ॥ ೨೯ ॥**

ಯೋಗದಲ್ಲಿ ಮನಸ್ಸನ್ನು ವಿನಿಯೋಗಿಸಿದವನು ಎಲ್ಲ ಆತ್ಮರಲ್ಲಿಯೂ ಸಮದರ್ಶಿಯಾಗಿ ತನ್ನನ್ನು ಎಲ್ಲ ಆತ್ಮರಿಗೆ ಸಮಾನನನ್ನಾಗಿಯೂ ಎಲ್ಲ ಆತ್ಮರನ್ನೂ ತನಗೆ ಸಮಾನರನ್ನಾಗಿಯೂ ಕಾಣುತ್ತಾನೆ.

(ಸಂಗತಿ: ಹೀಗೆ ದೇವಮನುಷ್ಯಾದಿ ಪ್ರಕೃತಿ ಪರಿಣಾಮ ವಿಶೇಷ ರೂಪವಾದ ಭೇದವನ್ನು ತಳ್ಳಿಹಾಕಿ, ಜ್ಞಾನದ್ರವ್ಯಸಾಮ್ಯದಿಂದ ಜೀವಾತ್ಮರೊಳಗೆ ಪರಸ್ಪರ ಸಾಮ್ಯವನ್ನು ಅನುಸಂಧಾನ ಮಾಡಲಾಯಿತು. ಈಗ ದೇವಾದಿ ಭೇದಗಳಿಗೆ ಕಾರಣವಾದ ಪುಣ್ಯಪಾಪಗಳ ತಾರತಮ್ಯವನ್ನು ತಳ್ಳಿಹಾಕುವುದರಿಂದ ಜೀವರಿಗೂ, ಪರಮಾತ್ಮನಿಗೂ ಪರಸ್ಪರ ಸಾಮ್ಯವನ್ನು ಅನುಸಂಧಾನ ಮಾಡಲಾಗುತ್ತದೆ. ಹೀಗೆ ಕಾಣುವವನು ಹಿಂದಿನವನಿಗಿಂತ ಹೆಚ್ಚು ವಿಪಾಕ ಪಡೆದವನು.)

**ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ ।**
**ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ ॥ ೩೦ ॥**

ಎಲ್ಲ ಆತ್ಮರಲ್ಲಿ ನನ್ನನ್ನೂ ನನ್ನಲ್ಲಿ ಎಲ್ಲ ಆತ್ಮರನ್ನೂ ನೋಡುವವನು (ಅನ್ಯೋನ್ಯ ಸಾಮ್ಯದಿಂದ ಜೀವ-ಪರರೊಳಗೆ ಒಂದನ್ನು ನೋಡಿದರೆ ಮತ್ತೊಂದೂ ಇದರಂತೆಯೇ ಎಂದು ಕಾಣುವವನು) ನನಗೆ ಕಾಣಿಸುವಂತೆ ನಾನೂ ಅವನಿಗೆ ಕಾಣಿಸಿಕೊಳ್ಳುವೆನು.

(ಸಂಗತಿ : ಜ್ಞಾನೈಕಾಕಾರತೆಯಿಂದ ಜೀವರೊಳಗೆ ಪರಸ್ಪರ ಸಾಮ್ಯವನ್ನು ಹೇಳಲಾಯಿತು. ಬಳಿಕ ಅಕರ್ಮವಶ್ಯತೆಯಿಂದ ಜೀವ-ಪರರಿಗೆ ಪರಸ್ಪರ ಸಾಮ್ಯವನ್ನು ಹೇಳಲಾಯಿತು. ಇವೆರಡಕ್ಕಿಂತ ಹೆಚ್ಚು ಪರಿಪಕ್ವವಾದ ದಶೆಯೆಂದರೆ—ಯೋಗವನ್ನು ಬಿಟ್ಟು ಎದ್ದ ಮೇಲೂ, ಅಸಂಕುಚಿತ ಜ್ಞಾನೈಕಾಕಾರದಿಂದ ಜೀವ-ಪರರಿಗೆ ಅನ್ಯೋನ್ಯ ಸಾಮ್ಯವನ್ನೇ ಕಾಣುತ್ತಿರುವುದು. ಈ ವಿಧವಾದ ಅನುಸಂಧಾನ ಪ್ರವಾಹಕ್ಕೆ ಪ್ರಬಲ ಸಂಸ್ಕಾರವಿರಬೇಕಾದುದರಿಂದ ಈ ದಶೆಯು ಹಿಂದಿನದಕ್ಕಿಂತ ಉನ್ನತಿ ದಶೆಯೆನಿಸಿದೆ.)

**ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ ।**
**ಸರ್ವಥಾ ವರ್ತಮಾನೋಽಪಿ ಸ ಯೋಗೀ ಮಯಿ ವರ್ತತೇ ॥**

ಎಲ್ಲ ಭೂತಗಳಲ್ಲಿರುವ ನನ್ನನ್ನು (ಅಸಂಕುಚಿತ ಜ್ಞಾನೈಕಾಕಾರವಾದ) ಏಕತ್ವ ಭಾವನೆಯಿಂದ ಯಾವನು ಸುದೃಢವಾಗಿ ಭಜಿಸುತ್ತಾನೆಯೋ ನನ್ನನ್ನು (ನನಗೆ ಸಮವೆಂಬುದಾಗಿ ಎಲ್ಲ ಆತ್ಮರನ್ನು ನೋಡುವುದೂ ನನ್ನ ಭಜನವೆಂದೇ ಭಾವ.) ಆ ಯೋಗಿಯು (ಯೋಗವನ್ನು ಪೂರೈಸಿ ಎದ್ದ ಮೇಲೂ) ಹೇಗೆ ಹೇಗೆ ವರ್ತಿಸಿದರೂ (ಲೌಕಿಕ ವ್ಯಾಪಾರಗಳಲ್ಲಿ ವ್ಯಾಪೃತನಾಗಿದ್ದರೂ) ನನ್ನಲ್ಲಿ ವರ್ತಿಸುತ್ತಿರುವನು. (ನನ್ನನ್ನೇ ನೋಡುತ್ತಿರುವನು—ಸರ್ವಭೂತಗಳಲ್ಲಿ ಸರ್ವದಾ ನನ್ನ ಸಾಮ್ಯವನ್ನೇ ನೋಡುತ್ತಿರುವನು.)

(ಸಂಗತಿ : ಈಗ ನಾಲ್ಕನೆಯದಾದ ಸರ್ವೋನ್ನತ ಯೋಗ ವಿಪಾಕ ದಶೆಯನ್ನು ಹೇಳುತ್ತಾನೆ. ಪ್ರಬಲ ದುಃಖ ಕಾರಣವೊದಗಿದಾಗಲೂ

ನಿರ್ವಿಕಾರನಾಗಿರುವುದೇ ಈ ದಶೆಯ ಲಕ್ಷಣ. ಜೀವಾತ್ಮಯೋಗದ ಕಾಷ್ಠೆಯಿದು.)

**ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ ।**
**ಸುಖಂ ವಾ ಯದಿ ವಾ ದುಃಖಂ ಸ ಯೋಗೀ ಪರಮೋ ಮತಃ ॥**

ಎಲೈ ಅರ್ಜುನ! ಸರ್ವತ್ರ ಆತ್ಮಸಾದೃಶ್ಯದಿಂದ, ತನ್ನಲ್ಲಿ ಮತ್ತು ಇತರರಲ್ಲಿ ತೋರುವ (ಪುತ್ರಜನ್ಮಾದಿ) ಸುಖವನ್ನಾಗಲಿ, (ಪುತ್ರಮರಣಾದಿ) ದುಃಖವನ್ನಾಗಲಿ (ಅಸಂಬಂಧಸಾಮ್ಯದಿಂದ) ಯಾವನು ಸಮನಾಗಿ ನೋಡುವನೋ (ಸ್ವಪುತ್ರಜನ್ಮಮರಣಾದಿಗಳನ್ನು ಪರಪುತ್ರ ಜನ್ಮಮರಣಾದಿ ಗಳಿಗೆ ಸಮನಾಗಿ ನೋಡುವನೋ) ಅವನು ಪರಮಯೋಗಿಯೆನಿಸುವನು.

(ಸಂಗತಿ: ಮೇಲೆ ಹೇಳಿದ ಯೋಗಸಾಧನವನ್ನೇ ವಿಶದವಾಗಿ ತಿಳಿಯಲು ಮತ್ತೆ ಅರ್ಜುನನು ಕೇಳುತ್ತಾನೆ.)

**ಅರ್ಜುನ ಉವಾಚ—**

**ಯೋಽಯಂಯೋಗಸ್ತ್ವಯಾಪ್ರೋಕ್ತಃ ಸಾಮ್ಯೇನ ಮಧುಸೂದನ**
**ಏತಸ್ಯಾಹಂ ನ ಪಶ್ಯಾಮಿ ಚಂಚಲತ್ವಾತ್ ಸ್ಥಿತಿಂ ಸ್ಥಿರಾಂ ॥೩೩॥**
**ಚಂಚಲಂ ಹಿ ಮನಃ ಕೃಷ್ಣ ಪ್ರಮಾಥಿ ಬಲವದ್ದೃಢಂ ।**
**ತಸ್ಯಾಹಂ ನಿಗ್ರಹಂ ಮನ್ಯೇ ವಾಯೋರಿವ ಸುದುಷ್ಕರಂ ॥೩೪॥**

ಅರ್ಜುನನೆಂದನು—

ಎಲೈ ಮಧುಸೂದನ! (ದೇವ-ಮನುಷ್ಯಾದಿ ಭೇದದಿಂದಲೂ ಜೀವ ಈಶ್ವರ ಭೇದದಿಂದಲೂ ಅತ್ಯಂತ ಭಿನ್ನವಾಗಿ ಇರುವರಿಗೂ ಅನುಭವ ವಾಗುತ್ತಿರುವ ಆತ್ಮರೊಳಗೆ ಜ್ಞಾನೈಕಾಕಾರತೆಯಿಂದ ಪರಸ್ಪರ ಸಾಮ್ಯ, ಅಕರ್ಮವಶ್ಯತೆಯಿಂದ ಜೀವರಿಗೂ-ಈಶ್ವರನಿಗೂ ಸಾಮ್ಯ-ಹೀಗೆ) ಸರ್ವತ್ರ ಸಮದರ್ಶನವೆಂಬ ಈ ಯಾವ ಯೋಗವು ನಿನ್ನಿಂದ ಹೇಳಲ್ಪಟ್ಟಿತೋ, ಅದರ ಸ್ಥಿರವಾದ ಸ್ಥಿತಿಯನ್ನು (ಚಿರಾನುವೃತ್ತಿಯನ್ನು) ನಾನು ಕಾಣೆನು; ಏಕೆಂದರೆ, ಮನಸ್ಸು ಚಂಚಲ.

(ಅದು ಹಾಗೆಯೇ ಸರಿ)

ಹೇ, ಕೃಷ್ಣ ! ಮನಸ್ಸು ಚಂಚಲ (ಸದಾ ಅಭ್ಯಾಸವಿರುವ ವಿಷಯ ಗಳಲ್ಲಿಯೂ ಒಂದೇ ಕಡೆ ಅದನ್ನು ಸ್ಥಾಪಿಸಲಾಗದು) ಬುದ್ಧಿಯನ್ನು ಕಲಕುವಂಥದು, ಬಹುಬಲವುಳ್ಳದು. (ಸದಾ ಅಭ್ಯಾಸವಿರುವ ವಿಷಯ ಗಳಲ್ಲಿಯೂ ಚಂಚಲ ಸ್ವಭಾವವಾದ ಈ ಮನಸ್ಸನ್ನು ಅದಕ್ಕೆ ವಿಪರೀತ ರೂಪವಾದ ಆತ್ಮನಲ್ಲಿ ಸ್ಥಾಪಿಸಲು) ಅದನ್ನು ನಿಗ್ರಹಿಸುವುದು, ಪ್ರತಿಕೂಲ ವಾಗಿ ಬೀಸುವ ಮಹಾವಾತವನ್ನು (ಬೀಸಣಿಗೆಯಿಂದ) ತಡೆಯುವುದು ಹೇಗೋ ಹಾಗೆ, ಅತ್ಯಂತ ಅಸಾಧ್ಯ (ಮನೋನಿಗ್ರಹದ ಉಪಾಯವನ್ನು ಹೇಳಬೇಕೆಂದು ಭಾವ.)

ಶ್ರೀ ಭಗವಾನುವಾಚ—

**ಅಸಂಶಯಂ ಮಹಾಬಾಹೋ ಮನೋ ದುರ್ನಿಗ್ರಹಂ ಚಲಂ ।**
**ಅಭ್ಯಾಸೇನ ತು ಕೌನ್ತೇಯ ವೈರಾಗ್ಯೇಣ ಚ ಗೃಹ್ಯತೇ ॥ ೩೫ ॥**
**ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ ।**
**ವಶ್ಯಾತ್ಮನಾ ತು ಯತತಾ ಶಕ್ಯೋಽವಾಪ್ತುಮುಪಾಯತಃ ॥೩೬॥**

ಭಗವಂತನೆಂದನು—

ಎಲೈ ಮಹಾಬಾಹುವೆ! ಮನಸ್ಸು ಚಂಚಲವಾದುದರಿಂದ ನಿಗ್ರಹಿ ಸಲು ಕಷ್ಟವೆಂಬುದಕ್ಕೆ ಸಂದೇಹವಿಲ್ಲ. ಆದರೂ, ಎಲೈ ಕುಂತೀಪುತ್ರನೆ! ಆತ್ಮನ (ನಿತ್ಯತ್ವ-ಜ್ಞಾನತ್ವ-ಆನಂದತ್ವ-ಅಕರ್ಮವಶ್ಯತ್ವ-ಅಮಲತ್ವ- ಮುಂತಾದ) ಗುಣಗಳನ್ನು ಅಭ್ಯಾಸಮಾಡುವುದರಿಂದಲೂ, (ಇತರ ವಸ್ತು ಗಳಲ್ಲಿಯ ದೋಷಗಳನ್ನು ಚಿಂತಿಸುವುದರಿಂದುಂಟಾಗುವ) ವೈರಾಗ್ಯ ದಿಂದಲೂ ಹೇಗೋ ಅದನ್ನು ನಿಗ್ರಹಿಸಬಹುದು.

ಮನಸ್ಸನ್ನು ನಿಗ್ರಹಿಸದವನಿಗೆ (ಎಷ್ಟು ಬಲವಿದ್ದರೂ) ಯೋಗವು ದುಸ್ಸಾಧ್ಯವಾದುದೆಂದು ನನ್ನ ಮತ. (ಹಿಂದೆ ಹೇಳಿದ ನನ್ನ ಆರಾಧನ ರೂಪವೂ ಅಂತರ್ಗತ ಜ್ಞಾನವೂ ಆದ) ಕರ್ಮನಿಷ್ಠೆಯಿಂದ ಮನಸ್ಸನ್ನು ವಶಮಾಡಿಕೊಂಡು ಅಭ್ಯಾಸಮಾಡುವವನು (ಸಮದರ್ಶನರೂಪವಾದ) ಆ ಯೋಗವನ್ನು ಸಾಧಿಸಬಹುದು.

(ಸಂಗತಿ : ಹಿಂದೆಹೇಳಿದ ಯೋಗಸಾಧನವನ್ನೇ ಯಥಾವತ್ತಾಗಿ ಕೇಳಿಯಾಯಿತು. ಇನ್ನು "ನೇಹಾಭಿಕ್ರಮನಾಶೋಽಸ್ತಿ" ಇತ್ಯಾದಿಯಾಗಿ ಹಿಂದೆಯೇ ಕೇಳಿದ್ದ ಯೋಗಮಾಹಾತ್ಮ್ಯವನ್ನು ಸರ್ವಪ್ರಕಾರದಿಂದ ವಿಸ್ತಾರವಾಗಿ ತಿಳಿಯಲು ಅರ್ಜುನನು ಪ್ರಶ್ನಿಸುತ್ತಾನೆ.)

**ಅರ್ಜುನ ಉವಾಚ—**

**ಅಯತಿಶ್ಶ್ರದ್ಧಯೋಪೇತೋ ಯೋಗಾಚ್ಚಲಿತಮಾನಸಃ ।**
**ಅಪ್ರಾಪ್ಯ ಯೋಗಸಂಸಿದ್ಧಿಂ ಕಾಂ ಗತಿಂ ಕೃಷ್ಣ ಗಚ್ಛತಿ ॥ ೩೭ ॥**
**ಕಚ್ಚಿನ್ನೋಭಯವಿಭ್ರಷ್ಟಃ ಛಿನ್ನಾಭ್ರಮಿವ ನಶ್ಯತಿ ।**
**ಅಪ್ರತಿಷ್ಠೋ ಮಹಾಬಾಹೋ ವಿಮೂಢೋ ಬ್ರಹ್ಮಣಃ ಪಥಿ ॥**
**ಏತಂ ಮೇ ಸಂಶಯಂ ಕೃಷ್ಣ ಛೇತ್ತುಮರ್ಹಸ್ಯಶೇಷತಃ ।**
**ತ್ವದನ್ಯಃ ಸಂಶಯಸ್ಯಾಸ್ಯ ಛೇತ್ತಾ ನ ಹ್ಯುಪಪದ್ಯತೇ ॥ ೩೯ ॥**

ಅರ್ಜುನನೆಂದನು—

ಶ್ರೀಕೃಷ್ಣನೇ! ಶ್ರದ್ಧೆಯಿಂದ ಯೋಗದಲ್ಲಿ ಪ್ರವೃತ್ತನಾಗಿ ಅಭ್ಯಾಸ ಬಲವು ಸಾಲದೆ ಯೋಗವು ಕೈಗೂಡುವ ಮೊದಲು ಯೋಗಭ್ರಷ್ಟನಾದವನು ಯಾವ ಗತಿಯನ್ನು ಹೊಂದುವನು.

ಎಲೈ ಮಹಾಬಾಹುವೆ! ಅಸಂಗದಿಂದ ಪ್ರವೃತ್ತನಾದುದರಿಂದ ಅತ್ತ ಸಾಂಸಾರಿಕ ಫಲಸಾಧನವಾದ ಕರ್ಮಗಳಿಂದಲೂ ಹೀಗೆ ಇವೆರಡರಿಂದಲೂ ಭ್ರಷ್ಟನಾಗಿ, ಹರಿದುಹೋದ ಮೋಡದಂತೆ ನಾಶಹೊಂದುವುದಿಲ್ಲವಷ್ಟೆ! (ಒಂದು ಮೇಘಶಕಲವು ಮೊದಲು ಕೂಡಿಕೊಂಡಿದ್ದ ದೊಡ್ಡ ಮೇಘದಿಂದ ಹರಿದುಹೋಗಿ ಮತ್ತೊಂದು ದೊಡ್ಡ ಮೇಘವನ್ನು ಸೇರದೆ ಮಧ್ಯೆ ವಿನಷ್ಟವಾಗುವಂತೆ)

ಎಲೈ ಶ್ರೀಕೃಷ್ಣನೇ! ಈ ನನ್ನ ಸಂಶಯವನ್ನು ಸಂಪೂರ್ಣವಾಗಿ ನೀನು ಪರಿಹರಿಸಬಲ್ಲೆ. ಈ ಸಂಶಯವನ್ನು ಪರಿಹರಿಸುವವನು ನೀನಲ್ಲದೆ ಮತ್ತಾವನೂ ಇಲ್ಲ.

(ಸಂಗತಿ : ಈಗ ಉಭಯ ಪುರುಷಾರ್ಥಾನ್ವಯವನ್ನೂ ತೋರಿಸು

ವುದರ ಮೂಲಕ ಶಂಕಿತವಾದ ಉಭಯ ವಿಭ್ರಷ್ಟತೆಯನ್ನು ಪರಿಹರಿಸುತ್ತಾನೆ.)

**ಶ್ರೀ ಭಗವಾನುವಾಚ—**

**ಪಾರ್ಥ ನೈವೇಹ ನಾಮುತ್ರ ವಿನಾಶಸ್ತಸ್ಯ ವಿದ್ಯತೇ ।**
**ನ ಹಿ ಕಲ್ಯಾಣಕೃತ್ಕಶ್ಚಿತ್ ದುರ್ಗತಿಂ ತಾತ ಗಚ್ಛತಿ ॥ ೪೦ ॥**

ಭಗವಂತನೆಂದನು—

ಅಪ್ಪ ಅರ್ಜುನ! ಶ್ರದ್ಧೆಯಿಂದ ಯೋಗದಲ್ಲಿ ಪ್ರವೃತ್ತನಾಗಿ ಅದರಿಂದ ಚ್ಯುತನಾದವನಿಗೆ (ತಸ್ಯ) ಇಹದಲ್ಲಾಗಲಿ ಪರದಲ್ಲಾಗಲಿ ವಿನಾಶವು ಸರ್ವಥಾ ಸಂಭವಿಸದು. ಏಕೆಂದರೆ ನಿರತಿಶಯ ಕಲ್ಯಾಣರೂಪವಾದ ಕರ್ಮಯೋಗವನ್ನು ಆಚರಿಸುವವನಾವನೂ ದುರ್ಗತಿಯನ್ನು ಹೊಂದನು.

(ಸಂಗತಿ: ಮತ್ತೇನೆಂದರೆ)

**ಪ್ರಾಪ್ಯ ಪುಣ್ಯಕೃತಾಂಲೋಕಾನುಷಿತ್ವಾ ಶಾಶ್ವತೀಃ ಸಮಾಃ ।**
**ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽಭಿಜಾಯತೇ ॥**

ಯೋಗೋಪಕ್ರಮದಲ್ಲಿ ಭ್ರಷ್ಟನಾದವನು (ಯೋಗ ಮಾಹಾತ್ಮ್ಯದಿಂದ) ಅತಿ ಪುಣ್ಯವಂತರಿಗೆ ದೊರೆಯಬಹುದಾದ ಲೋಕಗಳನ್ನು ಪಡೆದು (ಅಲ್ಲಿ) ಬಹು ಕಾಲವಿದ್ದು, (ಭೋಗತೃಷ್ಣೆಯು ತೀರುವವರೆಗೂ ಅತಿಶಯಿತ ಭೋಗಗಳನ್ನು ಅನುಭವಿಸುತ್ತಿದ್ದು) ಪವಿತ್ರರೂ ಶ್ರೀಮಂತರೂ ಆದವರ ಮನೆಯಲ್ಲಿ ಹುಟ್ಟುವನು. (ಯೋಗೋಪಕ್ರಮಕ್ಕೆ ಯೋಗ್ಯರ ಮನೆಯಲ್ಲಿ ಹುಟ್ಟುವನು.)

**ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಂ ।**
**ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀದೃಶಂ ॥ ೪೨ ॥**

ಯೋಗವು ಪರಿಪಕ್ವವಾಗಿದ್ದು ಅದರಿಂದ ಭ್ರಷ್ಟನಾದರೆ, ಯೋಗೋಪದೇಶ ಕ್ಷಮರಾದ ಯೋಗಿಗಳ ಗೃಹದಲ್ಲಿಯೇ ಹುಟ್ಟುವನು. ಈ ಎರಡು ವಿಧವಾದ ಜನ್ಮವೂ (ಯೋಗೋಪಕ್ರಮಯೋಗ್ಯರ ಮತ್ತು ಯೋಗಿಗಳಾದವರ ಮನೆಗಳಲ್ಲಿ ಹುಟ್ಟುವುದು) ಲೋಕದಲ್ಲಿ (ಪ್ರಾಕೃತರಿಗೆ) ಬಹು ದುರ್ಲಭವಷ್ಟೆ! ಯೋಗಮಾಹಾತ್ಮ್ಯದಿಂದ ಮಾತ್ರ ಸಾಧ್ಯವೆಂದು ಭಾವ.

(ಸಂಗತಿ : ಇದರಿಂದ ಮೋಕ್ಷಕ್ಕೆ ಏನು ಉಪಕಾರವಾಯಿತು ? ಹಿಂದಿನ ದೇಹದಿಂದ ಆರಬ್ಧವಾದ ಯೋಗವು ಶಿಥಿಲವಾಯಿತು. ಬಳಿಕ ಯೋಗಿಗಳ ಕುಲದಲ್ಲಿ ಹುಟ್ಟುವುದು ಮಾತ್ರದಿಂದ ಮೋಕ್ಷ ದೊರಕದು ! ಎಂದರೆ ಹೇಳುತ್ತಾನೆ.)

**ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೈಹಿಕಂ ।**
**ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನನ್ದನ ॥ ೪೩ ॥**
**ಪೂರ್ವಾಭ್ಯಾಸೇನ ತೇನೈವ ಹ್ರಿಯತೇ ಹ್ಯವಶೋಽಪಿ ಸಃ ।**

ಆ ಜನ್ಮದಲ್ಲಿ ಅವನು ಪೂರ್ವಜನ್ಮದ ಸಂಸ್ಕಾರದಿಂದ ಅದೇ ಯೋಗ ವಿಷಯವಾದ ಬುದ್ಧಿಸಂಯೋಗವನ್ನು ಪಡೆಯುತ್ತಾನೆ. ಅದರಿಂದ (ನಿದ್ದೆಯಿಂದ ಎದ್ದವನಂತೆ) ಅದರ ನಿರ್ವಿಘ್ನವಾದ ಸಿದ್ಧಿಗಾಗಿ ಮತ್ತೆ ಪ್ರಯತ್ನಿಸುತ್ತಾನೆ. ಅವನು ಅವಶನಾದರೂ ಅದೇ ಹಿಂದಿನ ಯೋಗಾ-ಭ್ಯಾಸದಿಂದ ಯೋಗದ ಕಡೆಗೇ ಎಳೆಯಲ್ಪಡುತ್ತಾನೆಯಷ್ಟೆ ! (ಈ ಯೋಗ ಮಾಹಾತ್ಮ್ಯವು ಅಷ್ಟು ಪ್ರಸಿದ್ಧವಾದುದು ಇದನ್ನು ಆದಿಭರತ–ವಿದುರ–ಭೀಷ್ಮಾದಿಗಳ ವೃತ್ತಾಂತಗಳಲ್ಲಿ ಕಾಣಬಹುದು.)

**ಜಿಜ್ಞಾಸುರಪಿ ಯೋಗಸ್ಯ ಶಬ್ದಬ್ರಹ್ಮಾತಿವರ್ತತೇ ॥ ೪೪ ॥**

ಯೋಗದಲ್ಲಿ ಆಸೆಯಿದ್ದು ಅದರಿಂದ ಚಲಿತನಾದವನೂ ಪ್ರಕೃತಿಯ ಬಂಧನದಿಂದ ಬಿಡುಗಡೆ ಹೊಂದುತ್ತಾನೆ.

(ಟಿಪ್ಪಣಿ : ಹಿಂದೆ ಯೋಗದಿಂದ ಚಲಿತನಾಗಿದ್ದವನಿಗೆ ಮತ್ತೆ ಯೋಗಸಿದ್ಧಿ, ಯೋಗದ ಆರಂಭದಲ್ಲಿಯೇ ಚಲಿತನಾಗಿದ್ದವನಿಗೆ ಮತ್ತೆ ಯೋಗಾರಂಭ, ಯೋಗವನ್ನು ಆರಂಭಿಸದೆಯೇ ಅದರಲ್ಲಿ ಆಸೆಮಾತ್ರ ಇದ್ದವನಿಗೆ ಮತ್ತೆ ಯೋಗವನ್ನು ಆರಂಭಿಸುವುದರಲ್ಲಿ ಆಸೆ ಹೀಗೆ ಅವರ ಪೂರ್ವಾವಸ್ಥೆಗೆ ಅನುರೂಪವಾದ ಪ್ರತಿಸಮಾಧಾನವನ್ನು ಪಡೆದು ಕರ್ಮ ಯೋಗ–ಜ್ಞಾನಯೋಗಗಳನ್ನು ಆಚರಿಸಿ ಸಂಸಾರದಿಂದ ಮುಕ್ತರಾಗು ತ್ತಾರೆಂದು ಹಿಂದಿನ ನಾಲ್ಕು ಶ್ಲೋಕಗಳಲ್ಲಿಯ ಭಾವ )

(ಸಂಗತಿ : ಹೀಗೆ ಯೋಗದಿಂದ ಚಲಿಸಿದವನಿಗೆ ಮತ್ತೆ ಯೋಗ

ಸಂಸಿದ್ಧಿಪರ್ಯಂತವಾದ ಪ್ರಯತ್ನ ನಡೆಯುವುದನ್ನು ಹೇಳಲಾಯಿತು. ಬಳಿಕ ಅದರಿಂದಲೇ ಅವನಿಗೆ ಆತ್ಮಪ್ರಾಪ್ತಿರೂಪವಾದ ಪರಮ ಪುರುಷಾರ್ಥ ಸಿದ್ಧಿಯನ್ನು ಹೇಳಲಾಗುತ್ತದೆ.)

**ಪ್ರಯತ್ನಾದ್ಯತಮಾನಸ್ತು ಯೋಗೀ ಸಂಶುದ್ಧ ಕಿಲ್ಬಿಷಃ ।**
**ಅನೇಕಜನ್ಮಸಂಸಿದ್ಧಃ ತತೋ ಯಾತಿ ಪರಾಂ ಗತಿಂ ॥ ೪೫ ॥**

ಯೋಗದ ಮಾಹಾತ್ಮ್ಯವು ಹೀಗಿರುವುದರಿಂದ, ಯೋಗಿಯು ಹಿಂದೆ ಚಲಿತನಾಗಿದ್ದರೂ ಮತ್ತೆ) ಅಧಿಕವಾಗಿ ಬುದ್ಧಿ-ಇಂದ್ರಿಯ-ಮನಸ್ಸುಗಳನ್ನು ನಿಗ್ರಹಿಸುತ್ತ ಯತ್ನಿಸುವವನಾಗಿಯಾದರೋ, ಪಾಪನಿರ್ಮುಕ್ತನಾಗಿ ಅನೇಕ ಜನ್ಮಾರ್ಜಿತಪುಣ್ಯಗಳಿಂದ ಚೆನ್ನಾಗಿ ಸಿದ್ಧಿಪಡೆದು ಪರಮಗತಿಯನ್ನು (ಆತ್ಮ ಪ್ರಾಪ್ತಿಯನ್ನು) ಹೊಂದಿಯೇ ಹೊಂದುತ್ತಾನೆ.

(ಸಂಗತಿ: ಯೋಗದ ಈ ಮಹಿಮೆಯು ಕೇವಲ ತಪಸ್ಸಿಗಾಗಲಿ, ಆತ್ಮವ್ಯತಿರಿಕ್ತವಾದ ಜ್ಞಾನಕ್ಕಾಗಲಿ ಕೇವಲ ಅಶ್ವಮೇಧಾದಿ ಕರ್ಮಗಳಿಗಾಗಲಿ ಇಲ್ಲ—ಎಂದರೆ, ಇವುಗಳಿಂದ ಸಾಧಿಸಬಹುದಾದುದಕ್ಕಿಂತ ಅಧಿಕ ಪುರುಷಾರ್ಥವನ್ನು ಯೋಗದಿಂದ ಸಾಧಿಸಬಹುದು. ಆದುದರಿಂದ ಕೇವಲ ತಪಸ್ವಿ ಮುಂತಾದವರಿಗಿಂತ ಯೋಗಿಯು ಶ್ರೇಷ್ಠನೆಂಬುದಾಗಿ ಯೋಗವನ್ನೂ ಯೋಗಿಯನ್ನೂ ಹೊಗಳುತ್ತ, ಜೀವಾತ್ಮಯೋಗದ ಉಪದೇಶವನ್ನು ಮುಗಿಸುತ್ತಾನೆ.)

**ತಪಸ್ವಿಭ್ಯೋಽಧಿಕೋ ಯೋಗೀ ಜ್ಞಾನಿಭ್ಯೋಽಪಿ ಮತೋಽಧಿಕಃ ।**
**ಕರ್ಮಿಭ್ಯಶ್ಚಾಧಿಕೋ ಯೋಗೀ ತಸ್ಮಾದ್ಯೋಗೀ ಭವಾರ್ಜುನ ॥**

ಯೋಗಿಯು (ಕೇವಲ) ತಪಸ್ವಿಗಳಿಗಿಂತ ಅಧಿಕನು; (ಕೇವಲ) ಜ್ಞಾನಿಗಳಿಗಿಂತ ಅಧಿಕನು; (ಕೇವಲ) ಕರ್ಮನಿಷ್ಠರಿಗಿಂತ ಅಧಿಕನು ಆದುದರಿಂದ, ಅರ್ಜುನನೇ! ನೀನು ಯೋಗಿಯಾಗು.

(ಸಂಗತಿ: ಹೀಗೆ ಜೀವಾತ್ಮೋಪಾಸಕನಿಗೆ ಎಲ್ಲಕ್ಕಿಂತ ಆಧಿಕ್ಯವನ್ನು ಪ್ರತಿಪಾದಿಸಲಾಗಿ, ಅದಕ್ಕಿಂತ ಪರಮಪುರುಷಾರ್ಥ ಮತ್ತೊಂದಿಲ್ಲವೆಂದು ಚರಿತಾರ್ಥವಾಗಬಹುದೆಂದು ಶಂಕಿಸಿ, ಇದಕ್ಕಿಂತ ಅತಿಶಯಿತ ಪುರು

ಷಾರ್ಥಕ್ಕೆ ಸಾಧಕವೂ ಈ ಜೀವಾತ್ಮೋಪಾಸನವನ್ನೇ ಅಂಗವಾಗಿ ಉಳ್ಳುದೂ ಆದ ಸ್ವವಿಷಯಕ ಭಕ್ತಿಯೋಗವನ್ನು ಮುಂದಿನ ಷಟ್ಕದಲ್ಲಿ ಪ್ರತಿಪಾದಿಸುವುದಕ್ಕಾಗಿ ಭಗವಂತನು ತಾನೇ ಅದನ್ನು ಈ ಅಧ್ಯಾಯದ ಕೊನೆಯಲ್ಲಿ ಪ್ರಸ್ತಾಪಿಸಿದ್ದಾನೆ.)

**ಯೋಗಿನಾಮಪಿ ಸರ್ವೇಷಾಂ ಮದ್ಗತೇನಾನ್ತರಾತ್ಮನಾ ।**
**ಶ್ರದ್ಧಾವಾನ್ ಭಜತೇ ಯೋ ಮಾಂ ಸ ಮೇ ಯುಕ್ತತಮೋ ಮತಃ॥**

ಎಲ್ಲ ಯೋಗಿಗಳಲ್ಲಿಯೂ, ಯಾವನು ಮನಸ್ಸನ್ನು ನನಗರ್ಪಿಸಿ ನನ್ನ ಪ್ರಾಪ್ತಿಗಾಗಿ ಪ್ರವರ್ತಿಸುವುದರಲ್ಲಿ ತ್ವರಾತಿಶಯವುಳ್ಳವನಾಗಿ ನನ್ನನ್ನು ಉಪಾಸಿಸುತ್ತಾನೆಯೋ ಅವನು ಸರ್ವ ಶ್ರೇಷ್ಠನಾದ ಯೋಗಿಯೆಂಬುದು ನನ್ನ ಮತ.

ಇಲ್ಲಿಗೆ " ಯೋಗಾಭ್ಯಾಸಯೋಗ " ವೆಂಬ ಆರನೆಯ ಅಧ್ಯಾಯ ಮುಗಿಯಿತು.

---

# ಅಧ್ಯಾಯ ೭

# ವಿಜ್ಞಾನಯೋಗ

(ಸಂಗತಿ : ಪರಮ ಪ್ರಾಪ್ಯವಾದ ಪರಬ್ರಹ್ಮದ ಪ್ರಾಪ್ತಿಗೆ ಉಪಾಯ ವಾದ ಉಪಾಸನವನ್ನು ಹೇಳುವುದಕ್ಕಾಗಿ, ಅದರ ಅಂಗವಾದ ಮತ್ತು ಆತ್ಮದ ಯಾಥಾತ್ಮ್ಯಜ್ಞಾನಪೂರ್ವಕ ಕರ್ಮಾನುಷ್ಠಾನದಿಂದ ಸಾಧ್ಯವಾದ ಪ್ರತ್ಯಗಾತ್ಮ ಯಾಥಾತ್ಮ್ಯದರ್ಶನವನ್ನು ಮೊದಲನೆಯ ಷಟ್ಕದಲ್ಲಿ ಹೇಳಿ ಯಾಯಿತು. ಈಗ ಈ ಎರಡನೆಯ ಷಟ್ಕದಲ್ಲಿ ಪರಮಪ್ರಾಪ್ಯವಾದ ಪರ ಬ್ರಹ್ಮದ ಸ್ವರೂಪವನ್ನೂ ಮತ್ತು ಅದರ ಪ್ರಾಪ್ತಿಗೆ ಉಪಾಯವಾದ ಉಪಾಸನವನ್ನೂ ಹೇಳಲಾಗುತ್ತದೆ. ಈ ಉಪಾಸನಕ್ಕೇ ಭಕ್ತಿಯೋಗ ವೆಂದೂ ಹೆಸರು. ಭಕ್ತಿರೂಪಾಪನ್ನವಾದ ಉಪಾಸನವೇ ಪರಪ್ರಾಪ್ತಿಗೆ ಉಪಾಯವೆಂದು ವೇದಾನ್ತವಾಕ್ಯಗಳಿಂದ ಸಿದ್ಧವಾಗಿದೆ.

ಇದರೊಳಗೆ ಈ ಏಳನೆಯ ಅಧ್ಯಾಯದಲ್ಲಿ–ಉಪಾಸ್ಯನಾದ ಪರಮ ಪುರುಷನ ಯಾಥಾತ್ಮ್ಯವನ್ನೂ, ಪ್ರಕೃತಿಯಿಂದ ಅದು ಆವೃತವಾಗಿರುವು ದನ್ನೂ, ಅದರ ನಿವೃತ್ತಿಗಾಗಿ ಮಾಡಬೇಕಾದ ಭಗವತ್ಪ್ರಪತ್ತಿಯನ್ನೂ, ವಿವಿಧವಾದ ಉಪಾಸಕರನ್ನೂ, ಅದರೊಳಗೆ ಜ್ಞಾನಿಯಾದವನಿಗಿರುವ ಶ್ರೈಷ್ಠ್ಯವನ್ನೂ ಹೇಳಲಾಗುತ್ತದೆ.)

**ಶ್ರೀ ಭಗವಾನುವಾಚ—**

**ಮಯ್ಯಾಸಕ್ತಮನಾಃ ಪಾರ್ಥ ಯೋಗಂ ಯುಞ್ಜನ್ ಮದಾಶ್ರಯಃ।**
**ಅಸಂಶಯಂ ಸಮಗ್ರಂ ಮಾಂ ಯಥಾ ಜ್ಞಾಸ್ಯಸಿ ತಚ್ಛೃಣು ॥೧॥**

ಭಗವಂತನೆಂದನು—

ಎಲೈ ಅರ್ಜುನನೇ! ನನ್ನಲ್ಲಿ ಆಸಕ್ತವಾದ ಮನಸ್ಸುಳ್ಳವನೂ, ನನ್ನನ್ನೇ ಆಶ್ರಯಿಸಿದವನೂ ಆಗಿ ನನ್ನ ಯೋಗಕ್ಕೆ ತೊಡಗುವ ನೀನು ನನ್ನನ್ನು ಏತರಿಂದ ತಿಳಿಯುವಿಯೋ ಆ ಜ್ಞಾನವನ್ನು (ಸಾವಧಾನವಾಗಿ) ಕೇಳು.

**ಜ್ಞಾನಂ ತೇಽಹಂ ಸವಿಜ್ಞಾನಂ ಇದಂ ವಕ್ಷ್ಯಾಮ್ಯಶೇಷತಃ ।**
**ಯಜ್ಜ್ಞಾತ್ವಾ ನೇಹ ಭೂಯೋಽನ್ಯತ್ ಜ್ಞಾತವ್ಯಮವಶಿಷ್ಯತೇ ॥**

ನನ್ನ ವಿವಿಕ್ತ ವಿಷಯಜ್ಞಾನಸಹಿತವಾದ ಸ್ವರೂಪವಿಷಯಜ್ಞಾನವನ್ನು ನಾನು ನಿನಗೆ ಸಂಪೂರ್ಣವಾಗಿ ಹೇಳುವೆನು. ಅದನ್ನು ತಿಳಿದಬಳಿಕ, ನನ್ನಲ್ಲಿ ಮತ್ತೆ ತಿಳಿಯಬೇಕಾದುದು ಇನ್ನಾವುದೂ ಉಳಿವುದಿಲ್ಲ.

(ಸಂಗತಿ : ಮುಂದೆ ಹೇಳಲಿರುವ ಜ್ಞಾನವನ್ನು ಪಡೆಯುವುದು ಎಷ್ಟು ಕಷ್ಟವೆಂಬುದನ್ನು ಹೇಳುತ್ತಾನೆ.)

**ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।**
**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥ ೩ ॥**

ಸಾವಿರಾರು ಮನುಷ್ಯರಲ್ಲಿ (ಶಾಸ್ತ್ರಾಧಿಕಾರ ಯೋಗ್ಯರಲ್ಲಿ) ಯಾವನಾದರೂ ಒಬ್ಬನು ಸಿದ್ಧಿಪರ್ಯಂತ ಯತ್ನಿಸುತ್ತಾನೆ. ಹಾಗೆ ಯತ್ನಿಸುವ ಸಾವಿರಾರು ಮನುಷ್ಯರೊಳಗೆ ಯಾವನೋ ಒಬ್ಬನು ಮಾತ್ರ ನನ್ನನ್ನು ತಿಳಿದು ನನ್ನಿಂದ ಸಿದ್ಧಿಗಾಗಿ ಪ್ರಯತ್ನಿಸುವನು. ನನ್ನನ್ನು ತಿಳಿದ ಸಾವಿರಾರು ಮಂದಿಗಳೊಳಗೆ ಯಾವನೋ ಒಬ್ಬನು ಮಾತ್ರವೇ ನನ್ನನ್ನು ಸರಿಯಾಗಿ ತಿಳಿಯುವನು. (ಒಬ್ಬನೂ ಇಲ್ಲವೆಂದು ಭಾವ.)

(ಸಂಗತಿ : ಈ ಶ್ಲೋಕದಿಂದ ಹಿಡಿದು "ನ ತ್ವಹಂ ತೇಷು ತೇ ಮಯಿ" – ಎಂಬಲ್ಲಿಯವರಿಗೂ ತನ್ನ ಯಾಥಾತ್ಮ್ಯವನ್ನು ಉಪದೇಶಿಸುತ್ತಾನೆ.)

**ಭೂಮಿರಾಪೋಽನಲೋ ವಾಯುಃ ಖಂ ಮನೋ ಬುದ್ಧಿರೇವ ಚ ।**
**ಅಹಂಕಾರ ಇತೀಯಂ ಮೇ ಭಿನ್ನಾ ಪ್ರಕೃತಿರಷ್ಟಧಾ ॥ ೪ ॥**

ಭೂಮಿ, ಜಲ, ಅಗ್ನಿ, ವಾಯು, ಆಕಾಶ, ಮನಸ್ಸು, ಬುದ್ಧಿ ಮತ್ತು ಅಹಂಕಾರಗಳೆಂಬುದಾಗಿ ಎಂಟುಬಗೆಯಾಗಿ ಈ ನನ್ನ ಪ್ರಕೃತಿಯು ವಿಭಕ್ತವಾಗಿದೆ.

(ಸಂಗತಿ : ಮೇಲಿನ ಶ್ಲೋಕದಿಂದ ತಾನು ಅಚೇತನಕ್ಕಿಂತ ವಿಲಕ್ಷಣನೆಂದು ಪ್ರತಿಪಾದಿಸಿ, ಈಗ ಚೇತನನಿಗಿಂತಲೂ ತಾನು ವಿಲಕ್ಷಣನೆಂಬುದನ್ನು ಪ್ರತಿಪಾದಿಸುತ್ತಾನೆ.

**ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿ ಮೇ ಪರಾಂ ।**
**ಜೀವಭೂತಾಂ ಮಹಾಬಾಹೋ ಯಯೇದಂ ಧಾರ್ಯತೇ ಜಗತ್॥**

ಇದು ಅಪರಾ (ಅಪ್ರಧಾನ) ಪ್ರಕೃತಿಯು. ಇದಕ್ಕಿಂತ ಅತ್ಯಂತ ವಿಲಕ್ಷಣವೂ ಪ್ರಧಾನವೂ ಆದ ಜೀವರೂಪ ಪ್ರಕೃತಿಯನ್ನೂ ನನ್ನದೆಂದು ತಿಳಿ. ಎಲೈ ಮಹಾಬಾಹುವೆ! ಈ ಪರಾಪ್ರಕೃತಿಯ ಆಧಾರದಿಂದ ಈ ಜಗತ್ತು ನಿಂತಿರುವುದು.

**ಏತದ್ಯೋನೀನಿ ಭೂತಾನಿ ಸರ್ವಾಣೀತ್ಯುಪಧಾರಯ ।**
**ಅಹಂಕೃತ್ಸ್ನಸ್ಯ ಜಗತಃ ಪ್ರಭವಃ ಪ್ರಳಯಸ್ತಥಾ ॥ ೬ ॥**

ಚೇತನಾಚೇತನ ಸಮಷ್ಟಿರೂಪನಾಗ ಈ ಎರಡು ಪ್ರಕೃತಿಗಳು ಎಲ್ಲ ಭೂತಗಳ ಉತ್ಪತ್ತಿಗೂ ಕಾರಣವೆಂದು ತಿಳಿ. ಇವು ನನ್ನವಾದುದರಿಂದ ನಾನು ಅಖಿಲ ಜಗತ್ತಿನ ಉತ್ಪತ್ತಿಗೂ ಪ್ರಳಯಕ್ಕೂ ಕಾರಣವಾಗಿರುವೆನು.

**ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ ।**
**ಮಯಿ ಸರ್ವಮಿದಂ ಪ್ರೋತಂ ಸೂತ್ರೇ ಮಣಿಗಣಾ ಇವ ॥ ೭ ॥**

ಎಲೈ ಅರ್ಜುನನೆ! (ಹೀಗೆ ಸರ್ವಕಾರಣವಾದ ಪ್ರಕೃತಿದ್ವಯಕ್ಕೆ ಕಾರಣನೂ ಶೇಷಿಯೂ ಆದುದರಿಂದ) ನನಗಿಂತ ಮೇಲಾದ ಇನ್ನಾವ ವಸ್ತುವೂ ಇಲ್ಲ. ಸೂತ್ರದಲ್ಲಿ ಮಣಿಗಳು ಪೋಣಿಸಲ್ಪಟ್ಟಂತೆ ಈ ಚೇತನಾ ಚೇತನ ವಸ್ತುವೆಲ್ಲವೂ (ಅವಕ್ಕೆ ಆತ್ಮವಾಗಿರುವ) ನನ್ನಲ್ಲಿ ಪೋಣಿಸಲ್ಪಟ್ಟಿರುವುದು.

(ಸಂಗತಿ : ಹೀಗೆ ಎಲ್ಲ ವಸ್ತುಗಳೂ ಪರಮಪುರುಷನಿಗೆ ಶರೀರವೂ ಅವೆಲ್ಲಕ್ಕೂ ಆ ಪರಮಪುರುಷನೇ ಆತ್ಮವೂ ಆದುದರಿಂದ ಲೋಕದೃಷ್ಟ ಶರೀರ–ಶರೀರನ್ಯಾಯದಿಂದ ಸರ್ವ ಪ್ರಕಾರದಿಂದ ಇರತಕ್ಕವನೂ ಪರಮ ಪುರುಷನೇ ಎಂದಾಯಿತು. ಆದುದರಿಂದ ಎಲ್ಲ ಶಬ್ದಗಳೂ ಮುಖ್ಯವಾಗಿ ಅವನನ್ನೇ ಹೇಳುತ್ತವೆಯೆಂದು ಉಪದೇಶಿಸುತ್ತಾರೆ.)

**ರಸೋಽಹಮಪ್ಸು ಕೌನ್ತೇಯ ಪ್ರಭಾಽಸ್ಮಿ ಶಶಿಸೂರ್ಯಯೋಃ ।**
**ಪ್ರಣವಃ ಸರ್ವವೇದೇಷು ಶಬ್ದಃ ಖೇ ಪೌರುಷಂ ನೃಷು ॥ ೮ ॥**

**ಪುಣ್ಯೋ ಗಂಧಃ ಪೃಥಿವ್ಯಾಂ ಚ ತೇಜಶ್ಚಾಸ್ಮಿ ವಿಭಾವಸೌ ।**
**ಜೀವನಂ ಸರ್ವಭೂತೇಷು ತಪಶ್ಚಾಸ್ಮಿ ತಪಸ್ವಿಷು ॥ ೯ ॥**

**ಬೀಜಂ ಮಾಂ ಸರ್ವ ಭೂತಾನಾಂ ವಿದ್ಧಿ ಪಾರ್ಥ ಸನಾತನಂ ।**
**ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಂ ॥ ೧೦ ॥**

**ಬಲಂ ಬಲವತಾಂ ಚಾಹಂ ಕಾಮರಾಗವಿವರ್ಜಿತಂ ।**
**ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ ಭರತರ್ಷಭ ॥೧೧॥**

ಎಲೈ ಅರ್ಜುನನೆ ! ನಾನು ನೀರಿನಲ್ಲಿ ರಸವು ; ಚಂದ್ರ ಸೂರ್ಯರಲ್ಲಿ ಪ್ರಭೆಯು, ಎಲ್ಲ ವೇದಗಳಲ್ಲಿ ಪ್ರಣವ, ಆಕಾಶದಲ್ಲಿ ಶಬ್ದವು, ಪುರುಷರಲ್ಲಿ ಪೌರುಷವು (ಕರ್ತೃತ್ವಶಕ್ತಿ).

ಪೃಥ್ವಿಯಲ್ಲಿ ಪುಣ್ಯಗಂಧವು, ಅಗ್ನಿಯಲ್ಲಿ ತೇಜಸ್ಸು, (ದಾಹಕತ್ವಶಕ್ತಿ) ಎಲ್ಲ ಪ್ರಾಣಿಗಳಲ್ಲಿಯೂ ಜೀವನವು, (ಪ್ರಾಣಸ್ಥಿತಿಗೆ ಕಾರಣವು) ತಪಸ್ವಿಗಳಲ್ಲಿ ತಪಸ್ಸು.

ಎಲ್ಲ ಭೂತಗಳಿಗೂ ಸನಾತನವಾದ ಬೀಜವು ನಾನೆಂದು ತಿಳಿ. ಬುದ್ಧಿವಂತರ ಬುದ್ಧಿಯು ನಾನು, ತೇಜಸ್ವಿಗಳ (ಪ್ರತಾಪಶೀಲರ) ತೇಜಸ್ಸು ನಾನು. ಬಲವಂತರ ಕಾಮ ಮತ್ತು ಆಸಕ್ತಿಗಳಿಲ್ಲದ ಬಲವು (ಧಾರಣಾದಿ ಶಕ್ತಿ) ನಾನು. ಎಲ್ಲ ಜಂತುಗಳಲ್ಲಿಯೂ ಧರ್ಮಕ್ಕೆ ವಿರುದ್ಧವಲ್ಲದ ಕಾಮವು ನಾನು.

**ಯೇ ಚೈವ ಸಾತ್ತ್ವಿಕಾ ಭಾವಾ ರಾಜಸಾಸ್ತಾಮಸಾಶ್ಚ ಯೇ ।**
**ಮತ್ತ ಏವೇತಿ ತಾನ್ವಿದ್ಧಿ ನ ತ್ವಹಂ ತೇಷು ತೇ ಮಯಿ ॥ ೧೨ ॥**

(ಹೆಚ್ಚೇಕೆ ?) ಸಾತ್ತ್ವಿಕವೂ ರಾಜಸವೂ ತಾಮಸವೂ ಆದ ಭಾವಗಳು ನನ್ನಿಂದಲೇ ಉಂಟಾದುವೆಂದು ತಿಳಿ. ಆದರೆ ನಾನು ಅವುಗಳಲ್ಲಿಲ್ಲ. (ಅವಕ್ಕೆ ಅಧೀನವಲ್ಲ.) ಅವು (ನನಗೆ ಶರೀರವಾದುದರಿಂದ) ನನ್ನಲ್ಲಿರುವುವು.

(ಸಂಗತಿ : ಹೀಗೆ ಸ್ವಯಾಥಾತ್ಮ್ಯವನ್ನು ಹೇಳಿ, ಬಳಿಕ ಪ್ರಕೃತಿಯು ಅದನ್ನು ಮರೆಸಿರುವುದನ್ನು ಹೇಳುತ್ತಾನೆ.

**ತ್ರಿಭಿರ್ಗುಣಮಯೈರ್ಭಾವೈರೇಭಿಸ್ಸರ್ವಮಿದಂ ಜಗತ್ ।**
**ಮೋಹಿತಂ ನಾಭಿಜಾನಾತಿ ಮಾಮೇಭ್ಯಃ ಪರಮವ್ಯಯಂ ॥೧೩॥**

ಗುಣಮಯವಾದ ಈ ಮೂರು ಭಾವಗಳಿಂದ ಮೋಹಿತವಾದ ಈ ಜಗತ್ತೆಲ್ಲವೂ ಇವಕ್ಕಿಂತ ಉತ್ಕೃಷ್ಟನೂ ಏಕರೂಪನೂ ಆದ ನನ್ನನ್ನು ತಿಳಿಯದು.

(ಸಂಗತಿ : ಅನವಧಿಕಾತಿಶಯಾನಂದನೂ ನಿತ್ಯನೂ ಸದಾ ಏಕರೂಪನೂ ಉತ್ಕೃಷ್ಟತಮನೂ ಆದ ನೀನು ಇರುತ್ತಿರಲಾಗ ಅತ್ಯಂತ ನಿಹೀನಗಳೂ ಗುಣಮಯಗಳೂ ಆದ ಅಸ್ಥಿರಭಾವಗಳು ಎಲ್ಲರಿಗೂ ಭೋಗ್ಯವೆನಿಸಿರುವುದು ಹೇಗೆ? ಎಂದರೆ ಹೇಳುತ್ತಾನೆ.)

**ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ ।**
**ಮಾಮೇವ ಯೇ ಪ್ರಪದ್ಯನ್ತೇ ಮಾಯಾಮೇತಾಂ ತರನ್ತಿ ತೇ ॥**

ಸತ್ತ್ವರಜಸ್ತಮೋಮಯವಾದ ಈ ನನ್ನ ಮಾಯೆಯು ಕ್ರೀಡಾಪ್ರವೃತ್ತನಾದ ನನ್ನಿಂದಲೇ ನಿರ್ಮಿತವಾದುದರಿಂದ, ದಾಟಲು ಅಸಾಧ್ಯವಾದುದು. (ಇದರಿಂದ ಬಿಡುಗಡೆಗೆ ಉಪಾಯವೇನೆಂದರೆ) ನನ್ನನ್ನೇ ಶರಣಹೊಂದುವವರು ಈ ಮಾಯೆಯನ್ನು ದಾಟುವರು (ಮಾಯೆಯನ್ನು ಬಿಟ್ಟು ನನ್ನನೇ ಉಪಾಸಿಸುತ್ತಾರೆಂದು ಭಾವ.)

(ಸಂಗತಿ : ಹಾಗಾದರೆ ಎಲ್ಲರೂ ಏಕೆ ನಿನ್ನನ್ನೇ ಶರಣುಹೊಂದಿ ಉಪಾಸಿಸುವುದಿಲ್ಲ? ಎಂದರೆ ಹೇಳುತ್ತಾನೆ.)

**ನ ಮಾಂ ದುಷ್ಕೃತಿನೋ ಮೂಢಾಃ ಪ್ರಪದ್ಯಂತೇ ನರಾಧಮಾಃ ।**
**ಮಾಯಯಾ ಅಪಹೃತಜ್ಞಾನಾಃ ಆಸುರಂ ಭಾವಮಾಶ್ರಿತಾಃ ॥**

ದುಷ್ಕೃತಿಗಳು (ಪಾಪಿಗಳು) ನನ್ನನ್ನು ಶರಣಹೊಂದುವುದಿಲ್ಲ. ಅವರು ದುಷ್ಕೃತ ತಾರತಮ್ಯದಿಂದ ನಾಲ್ಕು ವಿಧವಾಗಿರುವರು ; (1) ಮೂಢರು, (2) ನರಾಧಮರು, (3) ಬಾಹ್ಯ ಕುದೃಷ್ಟಿಗಳ ಕೂಟ ಯುಕ್ತಿಗಳಿಂದ ಭಗವದ್ವಿಷಯದಲ್ಲಿ ಉಂಟಾಗಿದ್ದ ಜ್ಞಾನವನ್ನು ಕಳೆದುಕೊಂಡವರು (4) ಆಸುರ ಸ್ವಭಾವದವರು.

[ಟಿಪ್ಪಣಿ : (1) ಮೂಢಾಃ = ವಿಪರೀತಜ್ಞಾನರು–ಅಂದರೆ, ಭಗವಂತನಿಗಾಗಿಯೇ ಇರುವ ತನ್ನನ್ನೂ, ಭೋಗ್ಯವಸ್ತುಗಳನ್ನೂ ತಮಗಾಗಿಯೇ ಎಂದು ತಿಳಿದವರು.

(2) ನರಾಧಮಾಃ = ಸಾಮಾನ್ಯವಾಗಿ ಭಗವತ್ಸ್ವರೂಪವನ್ನು ಅರಿತಿದ್ದರೂ ಅವನಿಗೆ ವಿಮುಖರಾದವರು.

(3) ಮಾಯಯಾ ಅಪಹೃತಜ್ಞಾನಾಃ = ಮಾಯೆಯಿಂದ ಪ್ರಸ್ತುತ ಭಗವದ್ವಿಷಯ ಜ್ಞಾನವನ್ನು ಕಳೆದುಕೊಂಡವರು. ವಿಚಿತ್ರ ಮೋಹಜನಕವಾದುದರಿಂದ, ಬಾಹ್ಯ ಕುದೃಷ್ಟಿಗಳ ಕೂಟ ಯುಕ್ತಿಗಳನ್ನು ಇಲ್ಲಿ ಮಾಯೆಯೆನ್ನಲಾಗಿದೆ.

(4) ಆಸುರಂ ಭಾವಮಾಶ್ರಿತಾಃ = ಭಗವಂತನ ಮತ್ತು ಅವನ ಐಶ್ವರ್ಯದ ವಿಷಯವಾದ ಜ್ಞಾನವು ಸುದೃಢವಾಗಿ ಉಪಪನ್ನವಾಗಿದ್ದರೂ ಅವನನ್ನು ತೀವ್ರವಾಗಿ ದ್ವೇಷಿಸುವವರು. ಕ್ರಮವಾಗಿ ಇವರು ಒಬ್ಬರಿಗಿಂತ ಒಬ್ಬರು ಹೆಚ್ಚು ಪಾಪಿಷ್ಠರು.]

**ಚತುರ್ವಿಧಾ ಭಜಂತೇ ಮಾಂ ಜನಾಸ್ಸುಕೃತಿನೋಽರ್ಜುನ ।**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ॥ ೧೬ ॥**

ಪುಣ್ಯವಂತರು ನನ್ನನ್ನು ಶರಣುಹೊಂದಿ ನನ್ನನ್ನೇ ಭಜಿಸುತ್ತಾರೆ. ಅವರೂ ಸುಕೃತ ತಾರತಮ್ಯದಿಂದ ಆರ್ತ, ಅರ್ಥಾರ್ಥೀ, ಜಿಜ್ಞಾಸು, ಜ್ಞಾನೀ—ಎಂದು ನಾಲ್ಕು ವಿಧವಾಗಿದ್ದಾರೆ.

[ಟಿಪ್ಪಣಿ : 1. ಆರ್ತಃ = ಇದ್ದ ಐಶ್ವರ್ಯವನ್ನು ಕಳೆದುಕೊಂಡು ಮತ್ತೆ ಅದನ್ನು ಪಡೆಯಲು ಬಯಸುವವರು.

(2) ಅರ್ಥಾರ್ಥೀ = ಹಿಂದೆ ಐಶ್ವರ್ಯವನ್ನು ಕಾಣದೆ ಈಗ ಅದನ್ನು ಬಯಸುವವರು.

(3) ಜಿಜ್ಞಾಸುಃ = ಪ್ರಕೃತಿಯಿಂದ ಬೇರೆಯಾಗಿರುವ ಆತ್ಮಸ್ವರೂಪವನ್ನು ಅನುಭವಿಸಲಿಚ್ಛಿಸುವವರು.

(4) ಜ್ಞಾನೀ = ಭಗವಂತನನ್ನು ಮಾತ್ರವೇ ಪರಮಪ್ರಾಪ್ಯನನ್ನಾಗಿ ಭಜಿಸುವವರು.

ಕ್ರಮವಾಗಿ ಈ ನಾಲ್ವರೂ ಒಬ್ಬರಿಗಿಂತ ಒಬ್ಬರು ಉತ್ತಮರು.]

(ಸಂಗತಿ: ಹೀಗೆ ಭಕ್ತರ ಭೇದವನ್ನು ಹೇಳಿ, ಈಗ ಇವರೊಳಗೆ ಜ್ಞಾನಿಯು ಹೇಗೆ ಶ್ರೇಷ್ಠನೆಂಬುದನ್ನು ಪ್ರದರ್ಶಿಸುತ್ತಾನೆ.)

**ತೇಷಾಂ ಜ್ಞಾನೀ ನಿತ್ಯಯುಕ್ತಃ ಏಕಭಕ್ತಿರ್ವಿಶಿಷ್ಯತೇ ।**
**ಪ್ರಿಯೋ ಹಿ ಜ್ಞಾನಿನೋಽತ್ಯರ್ಥಮಹಂ ಸ ಚ ಮಮ ಪ್ರಿಯಃ ॥**

ಇವರೊಳಗೆ ಜ್ಞಾನಿಯು ಶ್ರೇಷ್ಠನಾದವನು. ಏಕೆಂದರೆ, ಅವನಿಗೆ ನನ್ನೊಡನೆ ನಿತ್ಯಯೋಗವಿದೆ. (ಇತರ ಅಧಿಕಾರಿಗಳಿಗಾದರೋ ಅವರ ಇಷ್ಟ ನೆರವೇರುವವರಿಗೆ ಮಾತ್ರವೇ ನನ್ನೊಡನೆ ಯೋಗವಿರುವುದು.) ಅಲ್ಲದೆ ಅವನಿಗೆ ನನ್ನೊಬ್ಬನಲ್ಲಿ ಮಾತ್ರವೇ ಭಕ್ತಿಯಿದೆ. (ಮಿಕ್ಕವರಿಗಾದರೋ – ಅವರ ಅಭಿಲಷಿತದಲ್ಲಿಯೂ, ಅದಕ್ಕೆ ಸಾಧನವೆಂಬ ಬುದ್ಧಿಯಿಂದ ನನ್ನಲ್ಲಿಯೂ ಭಕ್ತಿಯಿರುವುದು.) ಆ ಜ್ಞಾನಿಗೆ ನಾನು ಅತ್ಯಂತ ಪ್ರಿಯನು ನನಗೂ ಅವನು ಅತ್ಯಂತ ಪ್ರಿಯನಷ್ಟೆ!

(ಸಂಗತಿ: ಹಿಂದಿನ ಶ್ಲೋಕದ ಅರ್ಥವನ್ನೇ ಇಲ್ಲಿ ದೃಢಪಡಿಸುತ್ತಾನೆ.)

**ಉದಾರಾಸ್ಸರ್ವ ಏವೈತೇ ಜ್ಞಾನೀತ್ವಾತ್ಮೈವ ಮೇ ಮತಂ ।**
**ಆಸ್ಥಿತಸ್ಸ ಹಿ ಯುಕ್ತಾತ್ಮಾ ಮಾಮೇವಾನುತ್ತಮಾಂ ಗತಿಂ ॥೧೮॥**

(ನನ್ನನ್ನೇ ಭಜಿಸಿ ನನ್ನಿಂದ ಏನನ್ನಾದರೂ ಸ್ವೀಕರಿಸುವುದರಿಂದ) ಇವರೆಲ್ಲರೂ ಉದಾರರು. ಜ್ಞಾನಿಯಾದರೋ ನನಗೆ ಆತ್ಮನೇ ಆಗಿರುವನೆಂದು ನನ್ನ ಮತವು. ಏಕೆಂದರೆ;—ಅವನು ನನ್ನನ್ನು ಬಿಟ್ಟಿರಲಾಗದದನಾಗಿ ನನ್ನನ್ನೇ ಶ್ರೇಷ್ಠತಮವಾದ ಗತಿಯೆಂದು ಭಾವಿಸುವನಷ್ಟೆ!

**ಬಹೂನಾಂ ಜನ್ಮನಾಮನ್ತೇ ಜ್ಞಾನವಾನ್ಮಾಂ ಪ್ರಪದ್ಯತೇ ।**
**ವಾಸುದೇವಸ್ಸರ್ವಮಿತಿ ಸ ಮಹಾತ್ಮಾ ಸುದುರ್ಲಭಃ ॥ ೧೯ ॥**

ಅನೇಕ ಪುಣ್ಯ ಜನ್ಮಗಳ ಕೊನೆಯಲ್ಲಿ ಸ್ವಸ್ವರೂಪ ಪರಸ್ವರೂಪಗಳ ಜ್ಞಾನವುಳ್ಳವನಾಗಿ ತನಗೆ ಸರ್ವವೂ ವಾಸುದೇವನೇ ಎಂದು ನನ್ನನ್ನು ಅವನು ಭಜಿಸುತ್ತಾನೆ. ಅಂತಹ ಮಹಾತ್ಮನು ಬಹು ದುರ್ಲಭನು.

(ಸಂಗತಿ : ಆ ಜ್ಞಾನಿಯು ದುರ್ಲಭನೆಂಬುದನ್ನೇ ಉಪಪಾದಿ ಸುತ್ತಾನೆ.)

**ಕಾಮೈಸ್ತೈಸ್ತೈರ್ಹೃತ ಜ್ಞಾನಾಃ ಪ್ರಪದ್ಯನ್ತೇಽನ್ಯದೇವತಾಃ ।**
**ತಂ ತಂ ನಿಯಮಮಾಸ್ಥಾಯ ಪ್ರಕೃತ್ಯಾ ನಿಯತಾಸ್ಸ್ವಯಾ ॥**

(ಲೋಕದಲ್ಲಿರುವವರೆಲ್ಲರೂ) ತಮ್ಮ ಪಾಪವಾಸನೆಯೊಡನೆ ಕೂಡಿ ಅದಕ್ಕನುರೂಪವಾದ ಆಯಾ ಕಾಮಗಳಿಂದ ನನ್ನ ವಿಷಯವಾದ ಜ್ಞಾನ ವನ್ನು ಕಳೆದುಕೊಂಡವರಾಗಿ ಅನ್ಯದೇವತೆಗಳನ್ನು ಆಯಾ ನಿಯಮದೊಡನೆ ಭಜಿಸುವರು.

(ಸಂಗತಿ : ದೇವತಾಂತರ-ಫಲಾಂತರಗಳಲ್ಲಿ ಸಕ್ತರಾದವರೂ ಆಯಾ ಆರಾಧನ-ಫಲಗಳಿಗೆ ಭಂಗವುಂಟಾದರೆ, ಅನರ್ಥಕರವಾದ ನಿಷಿದ್ಧೋಪಾಯಗಳಲ್ಲಿ ನಿಮಗ್ನರಾದಾರೆಂಬ ಭಯದಿಂದ ಪರಮಕಾರುಣಿಕ ನಾದ ನಾನೇ ಅವರಿಗೆ ಆಯಾ ಆರಾಧನಕ್ಕೆ ಬೇಕಾದ ಶ್ರದ್ಧೆ, ಫಲ ವುಂತಾದುವನ್ನು ಕೊಡುತ್ತೇನೆಂದು ಮುಂದೆ ಎರಡು ಶ್ಲೋಕಗಳಿಂದ ಹೇಳುತ್ತಾನೆ.)

**ಯೋಯೋಯಾಂಯಾಂತನುಂ ಭಕ್ತಃ ಶ್ರದ್ಧಯಾರ್ಚಿತುಮಿಚ್ಛತಿ**
**ತಸ್ಯ ತಸ್ಯಾಚಲಾಂ ಶ್ರದ್ಧಾಂ ತಾಮೇವ ವಿದಧಾಮ್ಯಹಂ ॥ ೨೧ ॥**

ಯಾವಯಾವ ಭಕ್ತನು ನನ್ನ ಶರೀರಭೂತರಾದ ಯಾವಯಾವ ಇಂದ್ರಾದಿ ದೇವತೆಗಳನ್ನು (ಅವರು ನನ್ನ ಶರೀರವೆಂಬುದನ್ನು ಅರಿಯ ದೆಯೇ) ಶ್ರದ್ಧೆಯಿಂದ ಪೂಜಿಸಲು ಬಯಸುವನೋ ಅವನವನ ಆ ಶ್ರದ್ಧೆ ಯನ್ನೇ (ಅದು ನನ್ನ ಶರೀರಕ್ಕೆ ಸಂಬಂಧಪಟ್ಟುದೆಂದು ನಾನು ಭಾವಿಸಿ ಕೊಂಡು) ದೃಢಪಡಿಸುವೆನು.

**ಸ ತಯಾ ಶ್ರದ್ಧಯಾ ಯುಕ್ತಃ ತಸ್ಯಾರಾಧನಮೀಹತೇ ।**
**ಲಭತೇ ಚ ತತಃ ಕಾಮಾನ್ ಮಯೈವ ವಿಹಿತಾನ್ ಹಿ ತಾನ್ ॥೨೨॥**

ಅವನು (ನಿರ್ವಿಘ್ನವಾದ) ಆ ಶ್ರದ್ಧೆಯಿಂದ ಯುಕ್ತನಾಗಿ ಆ ಇಂದ್ರಾದಿ ದೇವತೆಯನ್ನು ಆರಾಧಿಸುವನು ಮತ್ತು ನನ್ನಿಂದಲೇ ಕೊಡಲ್ಪಟ್ಟ ಇಷ್ಟಾರ್ಥಗಳನ್ನೂ ಅದರಿಂದ ಪಡೆಯುವನು.

(ಸಂಗತಿ : ಆ ಅನ್ಯದೇವತೋಪಾಸಕರಿಗೂ ನೀನೇ ಪ್ರಸನ್ನನಾಗಿ ಫಲ ಕೊಡುವುದಾದರೆ, ಅವರಿಗೂ ನಿನ್ನನ್ನು ಉಪಾಸನೆ ಮಾಡುವವರಿಗೂ ವ್ಯತ್ಯಾಸವೇನು ?—ಎಂದರೆ ಹೇಳುತ್ತಾನೆ.)

**ಅಂತವತ್ತು ಫಲಂ ತೇಷಾಂ ತದ್ಭವತ್ಯಲ್ಪಮೇಧಸಾಂ ।**
**ದೇವಾನ್ದೇವಯಜೋ ಯಾನ್ತಿ ಮದ್ಭಕ್ತಾ ಯಾನ್ತಿ ಮಾಮಪಿ ॥**

ಅಲ್ಪಬುದ್ಧಿಗಳಾದ ಅವರಿಗೆ ದೊರೆಯುವ ಆ ಫಲವಾದರೋ ಅಲ್ಪವು ಮತ್ತು ಅಂತವುಳ್ಳದು. (ಏಕೆಂದರೆ) ಇಂದ್ರಾದಿದೇವತೆಗಳನ್ನು ಪೂಜಿಸುವವರು ಆ ದೇವತೆಗಳನ್ನೇ ಪಡೆಯುವರು. (ಆ ದೇವತೆಗಳು ಪರಿಮಿತ ಭೋಗರೂ ಪರಿಮಿತ ಕಾಲವರ್ತಿಗಳೂ ಆದುದರಿಂದ ಅವರನ್ನು ಮಾತ್ರವೇ ಭಜಿಸುವವರು ಅವರನ್ನು ಮಾತ್ರವೇ ಹೊಂದಿ ಅವರೊಡನೆ ತಾವೂ ನಾಶ ಹೊಂದುವರು.) (ಅದೇ ಕರ್ಮಗಳನ್ನೇ ನನ್ನ ಆರಾಧನ ರೂಪವೆಂದು ತಿಳಿದು ಕೇವಲ ನನ್ನ ಪ್ರೀತಿಗಾಗಿಯೇ ಅವನ್ನು ಆಚರಿಸುವ) ನನ್ನ ಭಕ್ತರು ನನ್ನನ್ನು ಪಡೆಯುವರು. (ಅಪಾರವೂ ಶಾಶ್ವತವೂ ಆದ ಫಲವನ್ನು ಅನುಭವಿಸುವರೆಂದು ಭಾವ.)

(ಸಂಗತಿ : ಫಲಾಂತರ – ದೇವತಾಂತರ ವಾಸನೆಗಳು ನಿನ್ನನ್ನು ಅರಿಯಲಿರುವ ಪ್ರತಿಬಂಧಕಗಳು. ನೀನು ಗೋಚರಿಸದಿದ್ದಾಗ ಹೀಗಾಗುವುದು ಸರಿ. ಎಲ್ಲರೂ ಆಶ್ರಯಿಸಲೆಂದೇ ಕರುಣಾನಿಧಿಯಾದ ನೀನು ಎಲ್ಲರಿಗೂ ಗೋಚರಿಸುತ್ತಿರುವಾಗ, ನಿನ್ನನ್ನು ಬಿಟ್ಟು ಬೇರೆ ದೇವತೆಗಳನ್ನೇಕೆ ಜನರು ಆಶ್ರಯಿಸುವರು ?—ಎಂದರೆ, ಹಿಂದೆ ಹೇಳಿದ ನಾಲ್ಕು ಬಗೆಯ ಸುಕೃತಿಗಳಲ್ಲದವರು ಅವರಿಗೋಸ್ಕರ ಮನುಷ್ಯನಾಗಿ ಅವತರಿಸಿರುವ ನನ್ನ ಪರತ್ವವನ್ನು ಅರಿಯದೆ, ನನ್ನನ್ನು ಸಾಮಾನ್ಯನೆಂದು ಭಾವಿಸಿರುವರು. ಆದುದರಿಂದ ನನ್ನನ್ನು ಅಂತಹವರು ಆಶ್ರಯಿಸುವುದಿಲ್ಲವೆಂದು ಹೇಳುತ್ತಾನೆ.)

**ಅವ್ಯಕ್ತಂ ವ್ಯಕ್ತಿಮಾಪನ್ನಂ ಮನ್ಯನ್ತೇ ಮಾಮಬುದ್ಧಯಃ ।**
**ಪರಂ ಭಾವಮಜಾನನ್ತೋ ಮಮಾವ್ಯಯಮನುತ್ತಮಂ ॥ ೨೪ ॥**

(ಎಲ್ಲರೂ ಆಶ್ರಯಿಸಲೆಂದು ವಸುದೇವಪುತ್ರನಾಗಿ ಅವತರಿಸಿರುವ ಸರ್ವೇಶ್ವರನಾದ) ನನ್ನ ಅಪ್ರಾಕೃತವೂ ಉತ್ತಮೋತ್ತಮವೂ ಆದ ಪರ

ಸ್ವರೂಪವನ್ನು ಅರಿಯದ ಬುದ್ಧಿಹೀನರು ಹಿಂದೆ ವ್ಯಕ್ತನಾಗದೆ ಇದ್ದು ಈಗ ಕರ್ಮವಶದಿಂದ ಜನ್ಮತಾಳಿ ವ್ಯಕ್ತನಾಗಿದ್ದೇನೆಂದು ನನ್ನನ್ನು ತಿಳಿಯುವರು. (ಆದುದರಿಂದ ನನ್ನನ್ನು ಅವರು ಆಶ್ರಯಿಸುವುದೂ ಇಲ್ಲ, ಪೂಜಿಸುವುದೂ ಇಲ್ಲವೆಂದು ಭಾವ.)

(ಸಂಗತಿ: ನೀನು ತಡೆಯಿಲ್ಲದ ಸಂಕಲ್ಪವುಳ್ಳವನು: ಎಲ್ಲರೂ ಆಶ್ರಯಿಸಲೆಂಬ ಅಭಿಸಂಧಿಯಿಂದ ಅವತರಿಸಿದ್ದೀಯೆ, ಹೀಗಿರುವಾಗ, ಅದರ ಫಲವು ಸಿದ್ಧಿಸದಿರುವುದು ಹೇಗೆ?—ಎಂದರೆ ಹೇಳುತ್ತಾನೆ.)

**ನಾಹಂ ಪ್ರಕಾಶಸ್ಸರ್ವಸ್ಯ ಯೋಗಮಾಯಾಸಮಾವೃತಃ ।**
**ಮೂಢೋಽಯಂ ನಾಭಿಜಾನಾತಿ ಲೋಕೋ ಮಾಮಜಮವ್ಯಯಂ**

ಮನುಷ್ಯರ ವೇಷ ಭಾಷಾದಿಗಳಿಂದ ಆಚ್ಛಾದಿತನಾದ ನಾನು ಎಲ್ಲರಿಗೂ ಗೋಚರನಲ್ಲ. ನನ್ನಲ್ಲಿ ಮನುಷ್ಯತ್ವಾದಿ ಭ್ರಮವಿಶಿಷ್ಟವಾದ ಈ ಲೋಕವು ನಿಖಿಲ ಜಗದೇಕಕಾರಣನೂ ನಿರ್ವಿಕಾರನೂ ಆದ ನನ್ನನ್ನು ಸರಿಯಾಗಿ ಅರಿಯದು.

(ಸಂಗತಿ: ವರ್ತಮಾನಕಾಲದವರು ಮಾತ್ರವಲ್ಲ; ತ್ರೈಕಾಲ್ಯವರ್ತಿಗಳಾದ ಜನರೂ ಕೂಡ ನನ್ನನ್ನು ಸರಿಯಾಗಿ ಅರಿತವರಲ್ಲವೆಂದು ಹೇಳುತ್ತಾನೆ.)

**ವೇದಾಹಂ ಸಮತೀತಾನಿ ವರ್ತಮಾನಾನಿ ಚಾರ್ಜುನ ।**
**ಭವಿಷ್ಯಾಣಿ ಚ ಭೂತಾನಿ ಮಾಂ ತು ವೇದ ನ ಕಶ್ಚನ ॥ ೨೬ ॥**

ಆಗಿಹೋದ, ಈಗ ಇರುವ, ಮುಂದೆ ಆಗಲಿರುವ ಎಲ್ಲ ಪ್ರಾಣಿಗಳನ್ನೂ ನಾನು ತಿಳಿಯುತ್ತೇನೆ. ಆದರೆ ನನ್ನನ್ನು (ಇಂತಹವನೆಂದು) ಯಾವನೂ ತಿಳಿವುದಿಲ್ಲ. (ಜ್ಞಾನಿಯು ಸುದುರ್ಲಭವೆಂದು ಭಾವ.)

(ಸಂಗತಿ: ಅದು ಹೇಗೆಂದರೆ?)

**ಇಚ್ಛಾದ್ವೇಷಸಮುತ್ಥೇನ ದ್ವಂದ್ವಮೋಹೇನ ಭಾರತ ।**
**ಸರ್ವಭೂತಾನಿ ಸಮ್ಮೋಹಂ ಸರ್ಗೇ ಯಾಂತಿ ಪರಂತಪ ॥ ೨೭ ॥**

(ಹಿಂದಿನ ಜನ್ಮದಲ್ಲಿ ಅಭ್ಯಸ್ತವಾದ) ಇಚ್ಛಾದ್ವೇಷಗಳಿಂದ ಉತ್ಪನ್ನವಾದ ಶೀತೋಷ್ಣಾದಿ ದ್ವಂದ್ವಗಳೆಂಬ ಮೋಹದಿಂದ ಎಲ್ಲ ಪ್ರಾಣಿಗಳೂ (ಮುಂದಿನ) ಜನ್ಮಕಾಲದಲ್ಲಿ ಮೋಹಕ್ಕೊಳಗಾಗುವುವು. (ಜನ್ಮಾಂತರ ವಾಸನೆಗೆ ತಕ್ಕ ಸುಖ, ದುಃಖ ಸ್ವಭಾವಗಳೇ ಹೊರತು ನನ್ನ ಸಂಶ್ಲೇಷ ವಿಶ್ಲೇಷಗಳಿಂದಾದ ಸುಖ, ದುಃಖ ಸ್ವಭಾವವುಳ್ಳವುಗಳಲ್ಲ.)

(ಟಿಪ್ಪಣಿ: ಸಮ್ಮೋಹವೆಂದರೆ, ಇಲ್ಲಿ, ಅಭೋಗ್ಯವಾದುದನ್ನು ಭೋಗ್ಯವೆಂದೆಣಿಸುವುದು ಮತ್ತು ಅದ್ವೇಷ್ಯವಾದುದನ್ನು ದ್ವೇಷಿಸುವುದು ಎಂದರ್ಥ.)

(ಸಂಗತಿ: ಹೀಗಾದರೆ, ಎಲ್ಲ ಭೂತಗಳೂ ಮೋಹಕ್ಕೊಳಗಾಗುವುವು; ಅದರಿಂದ ಭಗವದುಪಾಸನವು ಎಂದೂ ಯಾವನಿಗೂ ನಡೆಯದು. ಆದುದರಿಂದ "ಚತುರ್ವಿಧಾ ಭಜಂತೇ ಮಾಂ ಜನಾಸ್ಸುಕೃತಿನೋಽರ್ಜುನ" ಇತ್ಯಾದಿಯಾಗಿ ಹೇಳಿದುದು ಅಯುಕ್ತವಲ್ಲವೇ? ಎಂದರೆ, ಹೇಳುತ್ತಾನೆ.)

**ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಂ ।**
**ತೇ ದ್ವಂದ್ವಮೋಹನಿರ್ಮುಕ್ತಾಃ ಭಜಂತೇ ಮಾಂ ದೃಢವ್ರತಾಃ ॥**

(ಅನೇಕಜನ್ಮಾರ್ಜಿತ ಪುಣ್ಯ ಸಂಚಯದಿಂದ ನನ್ನನ್ನು ಭಜಿಸಲು ವಿರೋಧಿಯಾದ ಅನಾದಿ) ಪಾಪವು ಯಾವ ಸುಕೃತಿಗಳಿಗೆ ಕ್ಷೀಣವಾಗಿದೆಯೋ ಅವರು (ಹಿಂದೆ ಹೇಳಿದಂತೆ ಸುಕೃತದ ತಾರತಮ್ಯಕ್ಕನುಸಾರವಾಗಿ ನನ್ನನ್ನು ಶರಣಹೊಂದಿ) ಗುಣಮಯವಾದ ಮೋಹವನ್ನು ನೀಗಿ, ದೃಢಸಂಕಲ್ಪದಿಂದ ನನ್ನನ್ನು ಭಜಿಸುತ್ತಾರೆ.

(ಸಂಗತಿ: ಈಗ ಅರ್ಥಾರ್ಥೀ, ಜಿಜ್ಞಾಸು, ಜ್ಞಾನೀ–ಎಂಬ ತ್ರಿವಿಧ ಭಗವದ್ಭಕ್ತರಿಗೂ ಅವಶ್ಯ ತಿಳಿಯಬೇಕಾದುದನ್ನು ಪ್ರಸ್ತಾಪಿಸುತ್ತಾನೆ.)

**ಜರಾಮರಣಮೋಕ್ಷಾಯ ಮಾಮಾಶ್ರಿತ್ಯ ಯತನ್ತಿ ಯೇ ।**
**ತೇ ಬ್ರಹ್ಮ ತದ್ವಿದುಃ ಕೃತ್ಸ್ನಂ ಅಧ್ಯಾತ್ಮಂ ಕರ್ಮಚಾಖಿಲಂ ॥**

ಪ್ರಕೃತಿಯಿಂದ ವಿಯುಕ್ತನಾದ ಆತ್ಮನ ಸ್ವರೂಪವನ್ನು ಕಾಣು

ವುದಕ್ಕಾಗಿ ನನ್ನನ್ನು ಆಶ್ರಯಿಸಿ ಯತ್ನಿಸುವವರು ಆ ಬ್ರಹ್ಮವನ್ನೂ ಸಕಲ ಅಧ್ಯಾತ್ಮವನ್ನೂ ಮತ್ತು ಅಖಿಲ ಕರ್ಮವನ್ನೂ ತಿಳಿಯಬೇಕು.

**ಸಾಧಿಭೂತಾಧಿದೈವಂ ಮಾಂ ಸಾಧಿಯಜ್ಞಂ ಚ ಯೇ ವಿದುಃ ।**
**ಪ್ರಯಾಣಕಾಲೇsಪಿ ಚ ಮಾಂ ತೇ ವಿದುರ್ಯುಕ್ತಚೇತಸಃ ॥**

ಐಶ್ವರ್ಯಾರ್ಥಿಗಳು ನನ್ನನ್ನು ಅಧಿಭೂತದಿಂದಲೂ ಆಧಿದೈವ ದಿಂದಲೂ ಕೂಡಿದವನನ್ನಾಗಿ ತಿಳಿಯಬೇಕು. ಅಧಿಯಜ್ಞದಿಂದ ಕೂಡಿದವ ನೆಂದು ನನ್ನನ್ನು ಈ ಮೂವರು ಅಧಿಕಾರಿಗಳೂ ತಿಳಿಯಬೇಕು. ಏಕೆಂದರೆ, ಈ ಮೂವರಿಗೂ ನಿತ್ಯನೈಮಿತಿಕ್ತಗಳಾದ ಮಹಾಯಜ್ಞಾದಿಗಳು ಬಿಡತಕ್ಕ ವಲ್ಲ.) ಅಂತಕಾಲದಲ್ಲಿಯೂ ಕೂಡ ಈ ಮೂವರು ಅಧಿಕಾರಿಗಳೂ ತಮ್ಮ ತಮ್ಮ ಪ್ರಾಪ್ಯಕ್ಕೆ ಅನುಗುಣವಾಗಿ ನನ್ನನ್ನು ತಿಳಿಯಬೇಕು.

ಇಲ್ಲಿಗೆ ವಿಜ್ಞಾನಯೋಗವೆಂಬ ಏಳನೆಯ ಅಧ್ಯಾಯವು
ಮುಗಿಯಿತು.



# ಅಧ್ಯಾಯ ೮

# ರಾಜವಿದ್ಯಾ ರಾಜಗುಹ್ಯಯೋಗ

## [ಅರ್ಥಾರ್ಥೀ, ಜಿಜ್ಞಾಸು, ಜ್ಞಾನಿಗಳೆಂಬ ತ್ರಿವಿಧವಾದ ಅಧಿಕಾರಿಗಳಿಗೆ ವೇದ್ಯೋಪಾದೇಯಗಳ ವಿಭಾಗ]

(ಸಂಗತಿ : ಹಿಂದಿನ ಅಧ್ಯಾಯದಲ್ಲಿ–ಪರಬ್ರಹ್ಮನಾದ ವಾಸುದೇವನೇ ಉಪಾಸ್ಯ, ಸರ್ವಕ್ಕೂ ಕಾರಣ, ಶೇಷಿ, ಆಧಾರ, ಆತ್ಮಭೂತ, ಮತ್ತು ನಿಯಂತೃವಾದುದರಿಂದ ಸರ್ವಶಬ್ದಗಳೂ ಮುಖ್ಯವಾಗಿ ಅವನನ್ನೇ ಹೇಳುತ್ತವೆ; ಅವನು ನಿರ್ದೋಷನೂ ನಿಖಿಲ ಕಲ್ಯಾಣಗುಣಾಕರನೂ ಆದುದರಿಂದ ಎಲ್ಲಕ್ಕಿಂತ ಶ್ರೇಷ್ಠನು; ಅನಾದಿಕಾಲದಿಂದ ಪ್ರವೃತ್ತವಾದ ದುಷ್ಕೃತ ಪ್ರವಾಹದಿಂದಾದ ತ್ರಿಗುಣಾತ್ಮಕ ಪ್ರಕೃತಿಯಿಂದ ಮೋಹಿತರಾದ ಪ್ರಾಣಿಗಳು ಅವನ ನಿಜಸ್ವರೂಪವನ್ನು ಅರಿಯವು. ಈ ಮೋಹದ ನಿವೃತ್ತಿಗೆ ಆ ಭಗವಂತನನ್ನು ಶರಣ ಹೊಂದುವುದೊಂದೇ ಉಪಾಯ; ಅತ್ಯುತ್ಕೃಷ್ಟ ಸುಕೃತಿಗಳು ಮಾತ್ರವೇ ಹಾಗೆ ಅವನನ್ನು ಶರಣಹೊಂದತಕ್ಕವರು; ಅವರೂ ಕೂಡ ತಮ್ಮ ಜ್ಞಾನ ಮತ್ತು ಸುಕೃತಗಳ ತಾರತಮ್ಯದಿಂದ ನಾಲ್ಕು ಬಗೆಯಾಗಿರುವರು; ಅವರೊಳಗೆ ಜ್ಞಾನಿ (ಮೋಕ್ಷಾರ್ಥೀ) ಯು ಪರಮ ಶ್ರೇಷ್ಠನೂ ದುರ್ಲಭನೂ ಆದವನು–ಇತ್ಯಾದಿಯಾಗಿ ಉಪಪಾದಿಸಿ, ಈ ಎಲ್ಲ ಬಗೆಯ ಅಧಿಕಾರಿಗಳಿಗೂ ವೇದ್ಯವೂ ಅನುಷ್ಠೇಯವೂ ಆದ ವಿಷಯಗಳನ್ನೂ ಕೂಡ ಕೊನೆಯಲ್ಲಿ ಪ್ರಸ್ತಾಪಿಸಲಾಯಿತು.

ಈಗ ಈ ಎಂಟನೆಯ ಅಧ್ಯಾಯದಲ್ಲಿ–ಈ ವೇದ್ಯ ಮತ್ತು ಅನುಷ್ಠೇಯಾಂಶಗಳ ವಿವೇಚನೆಯನ್ನು ಮಾಡಲಾಗುವುದು.)

**ಅರ್ಜುನ ಉವಾಚ—**

**ಕಿಂ ತದ್ಬ್ರಹ್ಮ ಕಿಮಧ್ಯಾತ್ಮಂ ಕಿಂ ಕರ್ಮ ಪುರುಷೋತ್ತಮ ।**
**ಅಧಿಭೂತಂ ಚ ಕಿಂ ಪ್ರೋಕ್ತಂ ಅಧಿದೈವಂ ಕಿಮುಚ್ಯತೇ ॥ ೧ ॥**

**ಅಧಿಯಜ್ಞಃ ಕಥಂ ಕೋಽತ್ರ ದೇಹೇಽಸ್ಮಿನ್ ಮಧುಸೂದನ ।**
**ಪ್ರಯಾಣಕಾಲೇ ಚ ಕಥಂ ಜ್ಞೇಯೋಽಸಿ ನಿಯತಾತ್ಮಭಿಃ ॥ ೨ ॥**

ಅರ್ಜುನನು ಎಂದನು—

ಜರಾಮರಣಮೋಕ್ಷಕ್ಕಾಗಿ (ಪ್ರಕೃತಿವಿಯುಕ್ತವಾದ ಆತ್ಮಸ್ವರೂಪದ ಸಂದರ್ಶನಕ್ಕಾಗಿ) ಭಗವಂತನನ್ನು ಆಶ್ರಯಿಸಿ, ಯತ್ನಿಸುವವರು (ಜಿಜ್ಞಾಸುಗಳು) ತಿಳಿಯಬೇಕಾದ ಬ್ರಹ್ಮ, ಅಧ್ಯಾತ್ಮ ಮತ್ತು ಕರ್ಮಗಳೆಂದರೇನು? ಐಶ್ವರ್ಯಾರ್ಥಿಗಳು ತಿಳಿಯಬೇಕಾದುದಕ್ಕೆ ಅಧಿಭೂತ ಮತ್ತು ಅಧಿದೈವಗಳೆಂದು ಏತಕ್ಕೆ ಹೆಸರು? ಈ ಶರೀರದಲ್ಲಿ ಈ ಎಲ್ಲ ಅಧಿಕಾರಿಗಳೂ ತಿಳಿಯಬೇಕಾದ ಅಧಿಯಜ್ಞವು ಯಾವುದು ಮತ್ತು ಹೇಗಿರುವುದು? ನಿಯತ ಚಿತ್ತರಾದ ಈ ಮೂವರೂ ಮರಣ ಸಮಯದಲ್ಲಿ ನಿನ್ನನ್ನು ಹೇಗೆ ಅರಿಯಬೇಕು?

**ಶ್ರೀ ಭಗವಾನುವಾಚ—**
**ಅಕ್ಷರಂ ಬ್ರಹ್ಮ ಪರಮಂ ಸ್ವಭಾವೋಽಧ್ಯಾತ್ಮಮುಚ್ಯತೇ ।**
**ಭೂತಭಾವೋದ್ಭವಕರೋ ವಿಸರ್ಗಃ ಕರ್ಮಸಂಜ್ಞಿತಃ ॥ ೩ ॥**

ಭಗವಂತನು ಎಂದನು—

ಪ್ರಕೃತಿಯಿಂದ ವಿನಿರ್ಮುಕ್ತವಾದ ಆತ್ಮದ (ಪರಿಶುದ್ಧ) ಸ್ವರೂಪವೇ ಆ ಬ್ರಹ್ಮವೆಂಬುದು. ಆತ್ಮನಲ್ಲಿ ಸಂಬಂಧಿಸಿರುವ ಭೂತಸೂಕ್ಷ್ಮ ಮತ್ತು ಅದರ ವಾಸನಾರೂಪವಾದ ಪ್ರಕೃತಿಯೇ (ಸ್ವಭಾವ) ಅಧ್ಯಾತ್ಮವೆನಿಸುವುದು (ಇವುಗಳಲ್ಲಿ ಮೊದಲನೆಯದು ಪ್ರಾಪ್ಯವೂ ಎರಡನೆಯದು ತ್ಯಾಜ್ಯವೂ ಆದುದರಿಂದ ಮುಮುಕ್ಷುವಿಗೆ ಇವೆರಡೂ ಅವಶ್ಯಜ್ಞಾತವ್ಯಗಳು) (ಪಂಚಾಗ್ನಿ ವಿದ್ಯೆಯಲ್ಲಿ ಹೇಳಿರುವಂತೆ) ಮನುಷ್ಯಾದಿ ಭಾವಗಳಿಗೆ ಕಾರಣವಾದ ರೇತೋ ವಿಸರ್ಜನಕ್ಕೆ ಕರ್ಮವೆಂದು ಹೆಸರು. (ಇದು ಜುಗುಪ್ಸನೀಯವೂ ಪರಿಹರಣೀಯವೂ ಆದುದರಿಂದ, ಮುಮುಕ್ಷುವು ಇದನ್ನು ತಿಳಿಯುವುದು ಆವಶ್ಯಕ.)

**ಅಧಿಭೂತಂ ಕ್ಷರೋ ಭಾವಃ ಪುರುಷಶ್ಚಾಧಿದೈವತಂ ।**
**ಅಧಿಯಜ್ಞೋಽಹಮೇವಾತ್ರ ದೇಹೇ ದೇಹಭೃತಾಂ ವರ ॥ ೪ ॥**

ಐಶ್ವರ್ಯಾರ್ಥಿಯು ತಿಳಿಯಬೇಕಾದ ಅಧಿಭೂತವೆಂಬುದು ಆಕಾಶಾದಿ ಪಂಚಭೂತಗಳ ಪರಿಣಾಮ ವಿಶೇಷಗಳಾದ ಶಬ್ದಾದಿ ವಿಷಯಗಳು. (ಇವೇ ಅವರಿಗೆ ಪ್ರಾಪ್ಯವಾದುದರಿಂದ ಇದನ್ನು ಅವರು ಅನುಸಂಧಾನ ಮಾಡಬೇಕು.) ಅಧಿದೈವತವೆಂದರೆ ಪುರುಷನು. (ಇಂದ್ರ ಪ್ರಜಾಪತಿ ಪ್ರಭೃತಿ ದೇವತೆಗಳಿಗೂ ಮೇಲ್ಪಟ್ಟವನಾಗಿ ಅವರು ಅನುಭವಿಸುವುದಕ್ಕಿಂತಲೂ ವಿಲಕ್ಷಣವಾದ ಭೋಗ್ಯವಸ್ತುಗಳನ್ನು ಅನುಭವಿಸುವ ಪುರುಷನು ಇಂತಹ ಭೋಕ್ತೃತ್ವಾವಸ್ಥೆಯೂ ಪ್ರಾಪ್ಯವಾದುದರಿಂದ ಇದನ್ನೂ ಐಶ್ವರ್ಯಾರ್ಥಿಯು ಅರಿಯಬೇಕು.) ನನಗೆ ದೇಹಭೂತರಾದ ಇಂದ್ರಾದಿಗಳಿಗೆ ಆತ್ಮನಾಗಿದ್ದುಕೊಂಡು ಯಜ್ಞಗಳಿಂದ ಆರಾಧ್ಯನಾದ ನಾನೇ "ಅಧಿಯಜ್ಞ"ನೆಂಬುವನು. (ಮಹಾ ಯಜ್ಞಾದಿ ನಿತ್ಯ ನೈಮಿತ್ತಿಕ ಕರ್ಮಗಳನ್ನು ಮಾಡುವಾಗಲೆಲ್ಲ ಅವುಗಳಿಂದ ಆರಾಧ್ಯನಾದ ನನ್ನನ್ನು ಈ ರೀತಿ ಮೂವರು ಅಧಿಕಾರಿಗಳೂ ಚಿಂತಿಸಬೇಕು.)

(ಟಿಪ್ಪಣಿ : ಇಲ್ಲಿ "ದೇಹಭೃತಾಂವರ"—ಎಂದರೆ ಅಧ್ಯಾತ್ಮ ಚಿಂತಾನುಗುಣಸತ್ತ್ವೋತ್ತರ ದೇಹೇಂದ್ರಿಯಾದಿಗಳನ್ನು ಉಳ್ಳವನೆ ! — ಎಂದು ಅರ್ಜುನನನ್ನು ಸಂಬೋಧಿಸಿದೆ.)

**ಅಂತಕಾಲೇ ಚ ಮಾಮೇವ ಸ್ಮರನ್ಮುಕ್ತ್ವಾ ಕಳೇಬರಂ ।**
**ಯಃ ಪ್ರಯಾತಿ ಸ ಮದ್ಭಾವಂ ಯಾತಿ ನಾಸ್ತ್ಯತ್ರ ಸಂಶಯಃ ॥**

(ಈ ಮೂವರೂ) ಮರಣ ಸಮಯದಲ್ಲಿ ಯಾವ ಪ್ರಕಾರವಾಗಿ ನನ್ನನ್ನೇ ಸ್ಮರಿಸುತ್ತಾ ಶರೀರವನ್ನು ಬಿಟ್ಟು ಹೋಗುತ್ತಾರೆಯೋ ಆ ಪ್ರಕಾರವಾಗಿಯೇ ಆಗುವರು. (ಆದಿ ಭರತಾದಿಗಳು ತಾವು ಅಂತ್ಯ ಸಮಯದಲ್ಲಿ ಸ್ಮರಿಸಿಕೊಂಡ ಮೃಗಾದಿ ರೂಪವನ್ನೇ ಹೊಂದಿದಂತೆ !)

(ಸಂಗತಿ : ಸ್ಮರಣಕ್ಕೆ ಅನುಗುಣವಾದ ಆಕಾರವನ್ನು ಉಂಟು ಮಾಡುವುದೇ ಅಂತಿಮ ಸ್ಮರಣದ ಸ್ವಭಾವವೆಂದು ಸುಸ್ಪಷ್ಟವಾಗಿ ಹೇಳುತ್ತಾನೆ.)

**ಯಂ ಯಂ ವಾಽಪಿ ಸ್ಮರನ್ ಭಾವಂ ತ್ಯಜತ್ಯನ್ತೇ ಕಳೇಬರಂ ।**
**ತಂ ತಮೇವೈತಿ ಕೌಂತೇಯ ಸದಾ ತದ್ಭಾವಭಾವಿತಃ ॥ ೬ ॥**

ನಿತ್ಯವೂ ಭಾವಿಸುತ್ತಿರುವ ಯಾವ ಯಾವ ಭಾವವನ್ನು ಅಂತ್ಯದಲ್ಲಿ ಸ್ಮರಿಸುತ್ತ ಶರೀರವನ್ನು ಬಿಡುವನೋ ಆ ಆ ಭಾವವನ್ನೇ ಅನಂತರ ಪಡೆಯುವನು.

**ತಸ್ಮಾತ್ಸರ್ವೇಷು ಕಾಲೇಷು ಮಾಮನುಸ್ಮರ ಯುಧ್ಯ ಚ ।**
**ಮಯ್ಯರ್ಪಿತಮನೋ ಬುದ್ಧಿಃ ಮಾಮೇವೈಷ್ಯಸ್ಯಸಂಶಯಃ ॥೭॥**

ಅಂತಿಮ ಸ್ಮೃತಿಯು ಪೂರ್ವಭಾವಿತವಿಷಯದ ಅಧೀನವಾದುದರಿಂದ, ನಿತ್ಯವೂ ಎಲ್ಲ ಕಾಲದಲ್ಲಿಯೂ ನನ್ನನ್ನು ಸ್ಮರಿಸು ಮತ್ತು ಈ ಸ್ಮೃತಿಯನ್ನುಂಟುಮಾಡುವ ಯುದ್ಧಾದಿ ನಿತ್ಯನೈಮಿತ್ತಿಕ ವರ್ಣಾಶ್ರಮಧರ್ಮಗಳನ್ನು ಮಾಡು. ಹೀಗೆ ಉಪಾಯದಿಂದ ನನ್ನಲ್ಲಿ ಮನಸ್ಸನ್ನೂ ಬುದ್ಧಿಯನ್ನೂ ಇಡುವುದರಿಂದ ನನ್ನನ್ನೇ ಪಡೆಯುವೆ. ಸಂಶಯವಿಲ್ಲ.

(ಸಂಗತಿ : ಹೀಗೆ ಸಾಮಾನ್ಯವಾಗಿ ಸ್ವಪ್ರಾಪ್ಯದ ಲಾಭವು ಅಂತಿಮ ಸ್ಮೃತಿಯ ಅಧೀನವೆಂದು ಹೇಳಿ, ಈಗ ಮೂರು ಅಧಿಕಾರಿಗಳಿಗೂ ಉಪಾಸನ ಪ್ರಕಾರದಲ್ಲಿಯ ಭೇದವನ್ನು ಹೇಳಲು ತೊಡಗುತ್ತಾನೆ. ಅದರಲ್ಲಿ ಐಶ್ವರ್ಯಾರ್ಥಿಗಳ ಉಪಾಸನ ಪ್ರಕಾರವನ್ನೂ ಆ ಉಪಾಸನಕ್ಕೆ ತಕ್ಕ ಅಂತಿಮ ಸ್ಮೃತಿಯ ಪ್ರಕಾರವನ್ನೂ ಮುಂದಿನ ಮೂರು ಶ್ಲೋಕಗಳಿಂದ ಹೇಳುತ್ತಾನೆ.)

**ಅಭ್ಯಾಸಯೋಗಯುಕ್ತೇನ ಚೇತಸಾ ನಾನ್ಯಗಾಮಿನಾ ।**
**ಪರಮಂ ಪುರುಷಂ ದಿವ್ಯಂ ಯಾತಿ ಪಾರ್ಥಾನುಚಿನ್ತಯನ್ ॥ ೮ ॥**

ಅಭ್ಯಾಸ ಮತ್ತು ಯೋಗಗಳಿಂದ ಕೂಡಿದ ಮತ್ತು ಇನ್ನಾವ ಕಡೆಗೂ ಹೋಗದ ಏಕಾಗ್ರಬುದ್ಧಿಯಿಂದ ದಿವ್ಯನೂ ಪರಮಪುರುಷನೂ ಆದ ನನ್ನನ್ನು (ಮರಣಸಮಯದಲ್ಲಿ) (ಮುಂದೆ ಹೇಳುವಂತೆ) ಧ್ಯಾನಿಸುತ್ತ ನನ್ನನ್ನೇ (ನನಗೆ ಸಮಾನವಾದ ಐಶ್ವರ್ಯವನ್ನೆ) ಪಡೆಯುವನು.

(ಟಿಪ್ಪಣಿ : ಇಲ್ಲಿ ಅಭ್ಯಾಸವೆಂದರೆ – ನಿತ್ಯ ನೈಮಿತ್ತಿಕ ಕರ್ಮಗಳಿಗೆ ವಿರುದ್ಧವಲ್ಲದ ಎಲ್ಲ ಕಾಲದಲ್ಲಿಯೂ ನಿತ್ಯವೂ ಮನಸ್ಸಿನಿಂದ ಉಪಾಸ್ಯನಾದ ನನ್ನನ್ನು ಸ್ಮರಿಸುತ್ತಿರುವುದು. ಯೋಗವೆಂದರೆ – ಉಪಾಸನ.)

**ಕವಿಂ ಪುರಾಣಮನುಶಾಸಿತಾರಂ**
**ಅಣೋರಣೀಯಾಂಸಮನುಸ್ಮರೇದ್ಯಃ ।**
**ಸರ್ವಸ್ಯ ಧಾತಾರಮಚಿನ್ತ್ಯರೂಪಂ**
**ಆದಿತ್ಯವರ್ಣಂ ತಮಸಃ ಪರಸ್ತಾತ್ ॥ ೯ ॥**

**ಪ್ರಯಾಣಕಾಲೇ ಮನಸಾಽಚಲೇನ**
**ಭಕ್ತ್ಯಾ ಯುಕ್ತೋ ಯೋಗಬಲೇನ ಚೈವ ।**
**ಭ್ರುವೋರ್ಮಧ್ಯೇ ಪ್ರಾಣಮಾವೇಶ್ಯ ಸಮ್ಯಕ್**
**ಸ ತಂ ಪರಂ ಪುರುಷಮುಪೈತಿ ದಿವ್ಯಂ ॥ ೧೦ ॥**

ಸರ್ವಜ್ಞನೂ ಪುರಾತನನೂ ಅಣುವಿಗಿಂತ ಸೂಕ್ಷ್ಮನಾಗಿ ಎಲ್ಲವನ್ನು ಶಿಕ್ಷಿಸಿದವನೂ ಎಲ್ಲಕ್ಕಿಂತ ವಿಲಕ್ಷಣನೂ ಅಪ್ರಾಕೃತರೂಪನೂ ಜಗತ್ತಿಗೆ ಆಧಾರನಾದವನೂ ಆದ ದಿವ್ಯರೂಪವುಳ್ಳವನೂ ದಿವ್ಯನೂ ಆದ ಪರಮಪುರುಷನನ್ನು ನಿರಂತರ ಭಕ್ತಿಯುಕ್ತವಾದ ಯೋಗಬಲವುಳ್ಳವನಾದವನು ನಿಶ್ಚಲವಾದ ಮನಸ್ಸಿನಿಂದ, ಮರಣಕಾಲದಲ್ಲಿ ಹುಬ್ಬುಗಳ ನಡುವೆ ಪ್ರಾಣವನ್ನು ಸರಿಯಾಗಿ ಸ್ಥಾಪಿಸಿ, ಅಲ್ಲಿ ಚಿಂತಿಸುತ್ತಿರುವವನು ಆ ಪರಮ ಪುರುಷನನ್ನು ಪಡೆಯುವನು.

(ಸಂಗತಿ: ಈಗ ಕೈವಲ್ಯಾರ್ಥಿಗಳು (ಜಿಜ್ಞಾಸುಗಳು) ಸ್ಮರಿಸಬೇಕಾದ ಪ್ರಕಾರವನ್ನು ಹೇಳುತ್ತಾನೆ.)

**ಯದಕ್ಷರಂ ವೇದವಿದೋ ವದನ್ತಿ**
**ವಿಶನ್ತಿ ಯದ್ಯತಯೋ ವೀತರಾಗಾಃ ।**
**ಯದಿಚ್ಛನ್ತೋ ಬ್ರಹ್ಮಚರ್ಯಂ ಚರನ್ತಿ**
**ತತ್ತೇ ಪದಂ ಸಂಗ್ರಹೇಣ ಪ್ರವಕ್ಷ್ಯೇ ॥ ೧೧ ॥**

ವೇದಗಳನ್ನು ಬಲ್ಲವರು ಯಾವುದನ್ನು ಅಕ್ಷರವೆಂದು ಹೇಳುವರೋ ವಿರಕ್ತರಾದ ಯತಿಗಳು ಯಾವುದನ್ನು ಪ್ರವೇಶಿಸುವರೋ, ಯಾವುದನ್ನು ಹೊಂದಲು ಇಚ್ಛೆಯುಳ್ಳವರು ಬ್ರಹ್ಮಚರ್ಯವನ್ನು ಆಚರಿಸುವರೋ ಅಂಥ ನನ್ನ ಅಸಾಧಾರಣರೂಪವಾದ ಅಕ್ಷರದ ಉಪಾಸನ ಪ್ರಕಾರವನ್ನು ಸಂಕ್ಷೇಪವಾಗಿ ನಿನಗೆ ಹೇಳುವೆನು.

**ಸರ್ವದ್ವಾರಾಣಿ ಸಂಯಮ್ಯ ಮನೋಹೃದಿ ನಿರುಧ್ಯ ಚ ।**
**ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಂ ಆಸ್ಥಿತೋ ಯೋಗಧಾರಣಾಂ**
**ಓಮಿತ್ಯೇಕಾಕ್ಷರಂ ಬ್ರಹ್ಮ ವ್ಯಾಹರನ್ಮಾಮನುಸ್ಮರನ್ ।**
**ಯಃ ಪ್ರಯಾತಿ ತ್ಯಜನ್ದೇಹಂ ಸ ಯಾತಿ ಪರಮಾಂ ಗತಿಂ ॥೧೩॥**

ಜ್ಞಾನಕ್ಕೆ ದ್ವಾರಗಳಾಗಿರುವ ಎಲ್ಲ ಇಂದ್ರಿಯಗಳನ್ನೂ ನಿಗ್ರಹಿಸಿ, ಹೃದಯಕಮಲದಲ್ಲಿರುವ ಅಕ್ಷರನಾದ ನನ್ನಲ್ಲಿ ಮನಸ್ಸನ್ನು ನಿರೋಧಿಸಿ, ನನ್ನಲ್ಲಿಯೇ ನಿಶ್ಚಲವಾದ ಸ್ಥಿತಿಯುಳ್ಳವನಾಗಿ, ನನಗೆ ವಾಚಕವಾದ ಪ್ರಣವವನ್ನು ಉಚ್ಚರಿಸುತ್ತ, ನನ್ನನ್ನು ಸ್ಮರಿಸುತ್ತ, ಪ್ರಾಣವನ್ನು ಮಸ್ತಕಕ್ಕೆ ಏರಿಸಿ, ಶರೀರವನ್ನು ಬಿಟ್ಟುಹೊರಡುವವನು ಪರಮಗತಿಯನ್ನು ಪಡೆಯು ವನು. (ನನಗೆ ಸಮವೂ ಪುನರಾವೃತ್ತಿಯಿಲ್ಲದುದೂ ಆದ ಪ್ರಕೃತಿ ವಿಯುಕ್ತಾತ್ಮಸ್ವರೂಪವನ್ನು ಪಡೆಯುವನು.)

(ಸಂಗತಿ : ಈಗ ಜ್ಞಾನಿಯಾದವನಿಗೆ ಭಗವದುಪಾಸನ ಪ್ರಕಾರ ವನ್ನೂ ಪ್ರಾಪ್ತಿಪ್ರಕಾರವನ್ನೂ ಹೇಳುತ್ತಾನೆ.)

**ಅನನ್ಯಚೇತಾಸ್ಸತತಂ ಯೋಮಾಂ ಸ್ಮರತಿ ನಿತ್ಯಶಃ ।**
**ತಸ್ಯಾಹಂ ಸುಲಭಃ ಪಾರ್ಥ ನಿತ್ಯಯುಕ್ತಸ್ಯ ಯೋಗಿನಃ ॥ ೧೪ ॥**

ನಿತ್ಯವೂ, ಸತತವೂ ಅನನ್ಯ ಚಿತ್ತದಿಂದ (ನಿರತಿಶಯ ಪ್ರಿಯನಾದ) ನನ್ನನ್ನು ಸ್ಮರಿಸುತ್ತ ನನ್ನೊಡನೆ ನಿತ್ಯಸಂಬಂಧವನ್ನು ಬಯಸುವ ಯೋಗಿಗೆ ನಾನು ಸುಲಭನು.

(ಸಂಗತಿ : ಇನ್ನು ಅಧ್ಯಾಯ ಶೇಷದಿಂದ ಜ್ಞಾನಿ ಮತ್ತು ಜಿಜ್ಞಾಸು ಗಳಿಗೆ ಪುನರಾವೃತ್ತಿಯಿಲ್ಲವೆಂದೂ, ಐಶ್ವರ್ಯಾರ್ಥಿಗೆ ಪುನರಾವೃತ್ತಿಯುಂ ಟೆಂದೂ ಹೇಳುತ್ತಾನೆ.)

**ಮಾಮುಪೇತ್ಯ ಪುನರ್ಜನ್ಮ ದುಃಖಾಲಯಮಶಾಶ್ವತಂ ।**
**ನಾಪ್ನುವಂತಿ ಮಹಾತ್ಮಾನಃ ಸಂಸಿದ್ಧಿಂ ಪರಮಾಂ ಗತಾಃ ॥ ೧೫ ॥**

ನನ್ನನ್ನು ಸೇರಿ ದುಃಖಕ್ಕೆ ಬೀಡಾದ ಮತ್ತು ಅಸ್ಥಿರವಾದ ಜನ್ಮವನ್ನು ಪುನಃ ಪಡೆಯರು ; ಏಕೆಂದರೆ, ಇವರು ನನ್ನ ಸ್ವರೂಪವನ್ನು ಸರಿಯಾಗಿ

ಅರಿತು ನಿರತಿಶಯ ಪ್ರೀತಿಯಿಂದ ನನ್ನಲ್ಲಿಯೇ ಆಸಕ್ತರಾಗಿ ಪರಮ ಪುರುಷಾರ್ಥ ರೂಪವಾದ ನನ್ನನ್ನೇ ಸೇರಿದ ಮಹಾತ್ಮರು !

(ಸಂಗತಿ : ಐಶ್ವರ್ಯಗತಿಯನ್ನು ಪಡೆದವರ ಪುನರ್ಜನ್ಮಕ್ಕೂ ಭಗವಂತನನ್ನು ಪಡೆದವರಿಗೆ ಪುನರ್ಜನ್ಮವಿಲ್ಲದುದಕ್ಕೂ ಕಾರಣವನ್ನು ಹೇಳುತ್ತಾನೆ.)

**ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।**
**ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥ ೧೬ ॥**

ಬ್ರಹ್ಮಲೋಕ ಪರ್ಯಂತವಾದ ಲೋಕಗಳು, ವಿನಾಶಿಗಳು (ಆದುದರಿಂದ ಈ ಸ್ಥಾನಗಳಿಗೆ ಹೋದ ಐಶ್ವರ್ಯಾರ್ಥಿಗಳಿಗೂ ವಿನಾಶವು ತಪ್ಪದು.) ನನ್ನನ್ನು ಸೇರಿದವರಿಗಾದರೋ (ವಿನಾಶಪ್ರಸಂಗವಿಲ್ಲದುದರಿಂದ) ಪುನರ್ಜನ್ಮವು ಇರುವುದಿಲ್ಲ.

(ಸಂಗತಿ : ಬ್ರಹ್ಮಲೋಕದವರಿಗಿನ ಲೋಕಗಳಿಗೂ ಅವುಗಳಲ್ಲಿ ವಾಸಿಸುವವರಿಗೂ ಪರಮ ಪುರುಷನ ಸಂಕಲ್ಪದಿಂದಾದ ಉತ್ಪತ್ತಿ-ವಿನಾಶ ಕಾಲಗಳ ವ್ಯವಸ್ಥೆಯನ್ನು ಹೇಳುತ್ತಾನೆ.

**ಸಹಸ್ರಯುಗಪರ್ಯನ್ತಂ ಅಹರ್ಯದ್ಬ್ರಹ್ಮಣೋ ವಿದುಃ ।**
**ರಾತ್ರಿಂ ಯುಗಸಹಸ್ರಾನ್ತಾಂ ತೇಽಹೋರಾತ್ರವಿದೋ ಜನಾಃ ॥ ೧೭ ॥**

**ಅವ್ಯಕ್ತಾದ್ವ್ಯಕ್ತಯಸ್ಸರ್ವಾಃ ಪ್ರಭವನ್ತ್ಯಹರಾಗಮೇ ।**
**ರಾತ್ರ್ಯಾಗಮೇ ಪ್ರಲೀಯನ್ತೇ ತತ್ರೈವಾವ್ಯಕ್ತಸಂಜ್ಞಕೇ ॥ ೧೮ ॥**

**ಭೂತಗ್ರಾಮಸ್ಸ ಏವಾಯಂ ಭೂತ್ವಾ ಭೂತ್ವಾ ಪ್ರಲೀಯತೇ ।**
**ರಾತ್ರ್ಯಾಗಮೇಽವಶಃ ಪಾರ್ಥ ಪ್ರಭವತ್ಯಹರಾಗಮೇ ॥ ೧೯ ॥**

ನನ್ನ ಸಂಕಲ್ಪದಿಂದ ಆದ ಹಗಲು ರಾತ್ರಿಗಳ ವ್ಯವಸ್ಥೆಯನ್ನು ಅರಿತವರು ಒಂದು ಸಾವಿರ ಚತುರ್ಯುಗಗಳೆಂದರೆ ಬ್ರಹ್ಮನ ಒಂದು ಹಗಲು, ಮತ್ತೊಂದು ಸಾವಿರ ಚತುರ್ಯುಗಗಳೆಂದರೆ ಒಂದು ರಾತ್ರಿ – ಎಂದು ಅರಿತಿದ್ದಾರೆ.

ಬ್ರಹ್ಮನ ಹಗಲು ಪ್ರಾರಂಭವಾದಾಗ ಅವನ ದೇಹದಿಂದ (ಅವ್ಯಕ್ತ ದಿಂದ) ಮೂರು ಲೋಕಗಳಲ್ಲಿರುವ ವ್ಯಕ್ತಿಗಳೆಲ್ಲ ಉಂಟಾಗುವುವು; ರಾತ್ರಿ ಬರಲು ಅವ್ಯಕ್ತವೆನೆಸಿದ ಆ ಬ್ರಹ್ಮನ ದೇಹದಲ್ಲಿಯೇ ಅಡಗುವುವು.

ಕರ್ಮಕ್ಕೆ ವಶವಾದ ಆ ಈ ಪ್ರಾಣಿಗಳ ಸಮೂಹವೇ ಹುಟ್ಟಿ ಹುಟ್ಟಿ, ರಾತ್ರಿಯಾದಾಗ ಬ್ರಹ್ಮನ ದೇಹದಲ್ಲಿ ಅಡಗಿಕೊಳ್ಳುವುದು; ಹಗಲು ಬರಲು (ಮತ್ತೆ) ಹುಟ್ಟುವುದು.

(ಟಿಪ್ಪಣಿ: ಇಲ್ಲಿ ಹೇಳಿರುವ ನೈಮಿತ್ತಿಕ ಪ್ರಳಯವು ಪ್ರಾಕೃತ ಪ್ರಳಯಕ್ಕೂ ಸೂಚಕವು. ಹೀಗೆ ಚತುರ್ಮುಖನಿಗೆ ನೂರು ವರ್ಷಗಳು ಮುಗಿದಾಗ ತನ್ನವರಿಗಿನ ಲೋಕಗಳೊಡನೆ ತಾನೂ ಕ್ರಮವಾಗಿ ಭಗವಂತ ನಲ್ಲಿ ಸೇರಿಹೋಗುವನು. ಈರೀತಿಯಾಗಿ ಭಗವಂತನನ್ನುಳಿದು ಮಿಕ್ಕ ವೆಲ್ಲಕ್ಕೂ ಉತ್ಪತ್ತಿವಿನಾಶಗಳಿರುವುದರಿಂದ ಐಶ್ವರ್ಯಗತಿಯನ್ನು ಹೊಂದಿ ದವರಿಗೂ ಉತ್ಪತ್ತಿವಿನಾಶಗಳು ತಪ್ಪವು. ಭಗವಂತನನ್ನು ಸೇರಿದವರಿಗಾ ದರೋ ಈ ಪ್ರಸಂಗವಿರುವುದಿಲ್ಲವೆಂದು ಭಾವ.)

(ಸಂಗತಿ: ಇನ್ನು ಕೈವಲ್ಯ ಪಡೆದವರಿಗೂ (ಜಿಜ್ಞಾಸುಗಳಿಗೆ ಪ್ರಾಪ್ಯ ವಾದುದು ಕೈವಲ್ಯ) ಪುನರ್ಜನ್ಮವಿಲ್ಲವೆಂದು ಹೇಳುತ್ತಾನೆ.)

**ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ ।**
**ಯಸ್ಸ ಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥ ೨೦ ॥**

**ಅವ್ಯಕ್ತೋಽಕ್ಷರ ಇತ್ಯುಕ್ತಸ್ತಮಾಹುಃ ಪರಮಾಂ ಗತಿಂ ।**
**ಯಂ ಪ್ರಾಪ್ಯ ನ ನಿವರ್ತಂತೇ ತದ್ಧಾಮ ಪರಮಂ ಮಮ ॥೨೧॥**

ಆದರೆ, ಹಿಂದೆ ಹೇಳಿದ ಅವ್ಯಕ್ತಕ್ಕಿಂತ (ಅಚೇತನ ಪ್ರಕೃತಿಗಿಂತ) ಉತ್ಕೃಷ್ಟವೂ, ನಿತ್ಯವೂ ಆದ ಮತ್ತೊಂದು ಅವ್ಯಕ್ತಭಾವವು ಇರುವುದು. (ಇದು ಯಾವ ಪ್ರಮಾಣಕ್ಕೂ ಗೋಚರಿಸದೆ ಸ್ವಸಂವೇದ್ಯವಾಗಿರುವುದ ರಿಂದ ಅವ್ಯಕ್ತವೆನಿಸಿದೆ.) ಎಲ್ಲ ಭೂತಗಳೂ ನಾಶಹೊಂದಿದರೂ ಅದು ನಾಶಹೊಂದುವುದಿಲ್ಲ. ಆ ಅವ್ಯಕ್ತವು ಅಕ್ಷರವೆಂದು ಹೇಳಲ್ಪಟ್ಟಿದೆ. ಅದನ್ನು ಪರಮಗತಿಯೆಂದು (ವೇದವನ್ನು ಬಲ್ಲವರು) ಹೇಳುವರು. (ಪ್ರಕೃತಿ ಸಂಸರ್ಗವನ್ನು ನೀಗಿ ಸ್ವರೂಪದಿಂದಿರುವ ಆತ್ಮವೆಂದು ಭಾವ.)

ಅದನ್ನು ಪಡೆದ ಬಳಿಕ ಪುನರ್ಜನ್ಮವು ಬಾರದು. ಅದು ನನ್ನ ಪರಮ ಪದವು. (ಪರಮ ನಿಯಮನಸ್ಥಾನ)

(ಟಿಪ್ಪಣಿ : "ಯಃ ಪೃಥಿವ್ಯಾಂ ತಿಷ್ಠನ್"—ಇತ್ಯಾದಿಯಿಂದ ಹೇಳಿರುವಂತೆ ಅಚೇತನ ಪ್ರಕೃತಿಯು ಒಂದು ನಿಯಮನ ಸ್ಥಾನ; ಅದರಲ್ಲಿ ಸೇರಿಕೊಂಡಿರುವ ಚೇತನವು ಎರಡನೆಯ ನಿಯಮನಸ್ಥಾನ; ಅಚೇತನ ಪ್ರಕೃತಿಯಿಂದ ಬೇರ್ಪಟ್ಟು ಸ್ವರೂಪದಿಂದಿರುವ ಮುಕ್ತಸ್ವರೂಪವು ಪರಮ ನಿಯಮನಸ್ಥಾನ)

(ಸಂಗತಿ : ಜ್ಞಾನಿಗೆ ಪ್ರಾಪ್ಯವಾದುದು ಇದಕ್ಕಿಂತ ಅತ್ಯಂತ ವಿಲಕ್ಷಣವೆನ್ನುತ್ತಾನೆ.)

**ಪುರುಷಸ್ಸ ಪರಃ ಪಾರ್ಥ ಭಕ್ತ್ಯಾ ಲಭ್ಯಸ್ತ್ವನನ್ಯಯಾ ।**
**ಯಸ್ಯಾನ್ತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಂ ॥೨೨॥**

ಆ ಪರಮ ಪುರುಷನನ್ನು ಅನನ್ಯವಾದ ಭಕ್ತಿಯಿಂದ ಪಡೆಯಲು ಶಕ್ಯವು. ಎಲ್ಲ ಭೂತಗಳೂ ಅವನಲ್ಲಿ ಇರುವುವು. ಇದೆಲ್ಲವೂ ಅವನಿಂದ ವ್ಯಾಪ್ತವಾಗಿರುವುದು.

(ಸಂಗತಿ : ಈಗ, ಕೈವಲ್ಯಾರ್ಥಿಗೂ ಜ್ಞಾನಿಗೂ ಸಾಧಾರಣವಾದ ಅರ್ಚಿರಾದಿಗತಿಯನ್ನು ಹೇಳುತ್ತಾನೆ. ಪುನರ್ಜನ್ಮವಿಲ್ಲದಿರುವುದೇ ಈ ಗತಿಯ ಲಕ್ಷಣ. ಪುನರ್ಜನ್ಮವಿರುವುದು ಧೂಮಾದಿಗತಿಯ ಲಕ್ಷಣ. ಇವೆರಡೂ ಕ್ರಮವಾಗಿ ಅನುಸಂಧೇಯವೂ ಹೇಯವೂ ಆದುದರಿಂದ ಇವುಗಳ ಉಪದೇಶವು ಇಲ್ಲಿ ಆವಶ್ಯಕ.)

**ಯತ್ರಕಾಲೇ ತ್ವನಾವೃತ್ತಿಮಾವೃತ್ತಿಂ ಚೈವ ಯೋಗಿನಃ ।**
**ಪ್ರಯಾತಾ ಯಾನ್ತಿ ತಂ ಕಾಲಂ ವಕ್ಷ್ಯಾಮಿ ಭರತರ್ಷಭ ॥೨೩॥**

**ಅಗ್ನಿರ್ಜ್ಯೋತಿರಹಶ್ಶುಕ್ಲಃ ಷಣ್ಮಾಸಾ ಉತ್ತರಾಯಣಂ ।**
**ಯತ್ರ ಪ್ರಯಾತಾ ಗಚ್ಛನ್ತಿ ಬ್ರಹ್ಮ ಬ್ರಹ್ಮವಿದೋ ಜನಾಃ ॥೨೪॥**

ಯಾವ ಮಾರ್ಗದಲ್ಲಿ ಹೋದ ಯೋಗಿಗಳು ತಿರುಗಿ ಬಾರರೋ ಮತ್ತು ತಿರುಗಿ ಬರುವರೋ ಆ ಮಾರ್ಗವನ್ನು ಹೇಳುವೆನು.

ಅಗ್ನಿ, ಜ್ಯೋತಿಸ್ಸು, ಹಗಲು, ಶುಕ್ಲಪಕ್ಷ, ಉತ್ತರಾಯಣ ಮುಂತಾದುವು ನಡೆಸುವ ಮಾರ್ಗದಲ್ಲಿ ತೆರಳಿದ ಬ್ರಹ್ಮನಿಷ್ಠರು ಬ್ರಹ್ಮವನ್ನು ಸೇರುವರು.

(ಟಿಪ್ಪಣಿ: ಕಾಲಾಭಿಮಾನಿ ದೇವತಾ ಭೂಯಿಷ್ಠವಾದುದರಿಂದ ಇಲ್ಲಿ ಈ ಮಾರ್ಗವನ್ನು ಕಾಲಶಬ್ದದಿಂದ ನಿರ್ದೇಶಿಸಿದೆ.

**ಧೂಮೋ ರಾತ್ರಿಸ್ತಥಾ ಕೃಷ್ಣಃ ಷಣ್ಮಾಸಾ ದಕ್ಷಿಣಾಯನಂ ।**
**ತತ್ರ ಚಾಂದ್ರಮಸಂ ಜ್ಯೋತಿಃ ಯೋಗೀ ಪ್ರಾಪ್ಯ ನಿವರ್ತತೇ ॥**

ಧೂಮ, ರಾತ್ರಿ, ಕೃಷ್ಣಪಕ್ಷ, ದಕ್ಷಿಣಾಯನ,–ಇತ್ಯಾದ್ಯಭಿಮಾನಿ ದೇವತೆಗಳು ಒಯ್ಯುವ ಮಾರ್ಗದಲ್ಲಿ ತೆರಳಿದ ಯೋಗಿಯು ಚಂದ್ರಲೋಕವನ್ನು ಪಡೆದು, ತಿರುಗಿ ಬರುವನು.

(ಟಿಪ್ಪಣಿ: ಇಲ್ಲಿ "ಯೋಗಿ"–ಎಂದರೆ ಪುಣ್ಯಕರ್ಮ ಮಾಡಿದವನೆಂದು ಭಾವ.)

**ಶುಕ್ಲಕೃಷ್ಣೇ ಗತೀ ಹ್ಯೇತೇ ಜಗತಶ್ಶಾಶ್ವತೇ ಮತೇ ।**
**ಏಕಯಾ ಯಾತ್ಯನಾವೃತ್ತಿಂ ಅನ್ಯಯಾಽಽವರ್ತತೇ ಪುನಃ ॥೨೬॥**

ಈ ಶುಕ್ಲ ಮತ್ತು ಕೃಷ್ಣಗಳೆಂಬ ಗತಿಗಳೆರಡೂ (ಅರ್ಚಿರಾದಿ ಮಾರ್ಗ ಮತ್ತು ಧೂಮಾದಿಮಾರ್ಗ) ಜ್ಞಾನಿಗಳಿಗೂ ವಿವಿಧ ಪುಣ್ಯಕರ್ಮಿಗಳಿಗೂ ಶಾಶ್ವತವೆಂದು (ಶ್ರುತಿಯಲ್ಲಿ) ತಿಳಿಯಲ್ಪಟ್ಟಿವೆ. ಒಂದರಿಂದ ತಿರುಗಿ ಬಾರನು; ಮತ್ತೊಂದರಿಂದ ಮರಳಿ ಬರುವನು.

**ನೈತೇ ಸೃತೀ ಪಾರ್ಥ ಜಾನನ್ ಯೋಗೀ ಮುಹ್ಯತಿ ಕಶ್ಚನ ।**
**ತಸ್ಮಾತ್ಸರ್ವೇಷು ಕಾಲೇಷು ಯೋಗಯುಕ್ತೋ ಭವಾರ್ಜುನ ॥**

ಈ ಎರಡು ಗತಿಗಳನ್ನೂ ತಿಳಿದ ಯಾವ ಯೋಗಿಯೂ (ಮರಣಕಾಲದಲ್ಲಿ) ಮೋಹಕ್ಕೊಳಗಾಗನು. (ಅರ್ಚಿರಾದಿ ಮಾರ್ಗದಲ್ಲಿಯೇ ತೆರಳುವನೆಂದು ಭಾವ.) ಆದುದರಿಂದ, ಎಲೈ ಅರ್ಜುನನೆ! ಎಲ್ಲ ಕಾಲಗಳಲ್ಲಿಯೂ (ಅರ್ಚಿರಾದಿಗತಿ ಚಿಂತನವೆಂಬ) ಯೋಗಯುಕ್ತನಾಗು.

(ಸಂಗತಿ: ಈಗ ಹಿಂದಿನ ಎರಡು ಅಧ್ಯಾಯಗಳಿಂದ ಹೇಳಿದ ಶಾಸ್ತ್ರಾರ್ಥಗಳನ್ನು ತಿಳಿಯುವುದರಿಂದ ದೊರಕುವ ಫಲವನ್ನು ಹೇಳುತ್ತಾನೆ)

**ವೇದೇಷು ಯಜ್ಞೇಷು ತಪಸ್ಸು ಚೈವ**
**ದಾನೇ ಚ ಯತ್ಪುಣ್ಯಫಲಂ ಪ್ರದಿಷ್ಟಂ ।**
**ಅತ್ಯೇತಿ ತತ್ಸರ್ವಮಿದಂ ವಿದಿತ್ವಾ**
**ಯೋಗೀ ಪರಂ ಸ್ಥಾನ ಮುಪೈತಿ ಚಾದ್ಯಂ ॥ ೨೮ ॥**

ಈ ಎರಡು ಅಧ್ಯಾಯಗಳಲ್ಲಿ ಹೇಳಿದ ಭಗವನ್ಮಾಹಾತ್ಮ್ಯವನ್ನು ತಿಳಿದು ಯೋಗಿಯಾದವನು (ಈ ಜ್ಞಾನದ ಸುಖಾತಿರೇಕದಿಂದ) ವೇದಗಳಲ್ಲಿ, ಯಜ್ಞಗಳಲ್ಲಿ, ತಪಸ್ಸುಗಳಲ್ಲಿ, ಮತ್ತು ದಾನದಲ್ಲಿ ಹೇಳಲ್ಪಟ್ಟ ಪುಣ್ಯಫಲವನ್ನು ತೃಣದಂತೆ ಭಾವಿಸಿ, ಪರಮವೂ, ಅನಾದಿಯೂ ಆದ ಸ್ಥಾನವನ್ನು ಪಡೆಯುವನು.

ಇಲ್ಲಿಗೆ ಅಕ್ಷರ ಪರಬ್ರಹ್ಮಯೋಗವೆಂಬ ಎಂಟನೆಯ ಅಧ್ಯಾಯ ಮುಗಿಯಿತು.



# ಅಧ್ಯಾಯ ೯

## ಭಕ್ತಿಯೋಗವೂ ಮತ್ತು ಅದರ ಪ್ರಕಾರವೂ

(ಸಂಗತಿ : ಉಪಾಸಕರ ಭೇದ ನಿಬಂಧನವಾದ ಜ್ಞಾತವ್ಯ ಮತ್ತು ಅನುಷ್ಠೇಯಗಳ ಭೇದಗಳು ಹೇಳಲ್ಪಟ್ಟವು. ಈಗ ಉಪಾಸ್ಯನಾದ ಪರಮ ಪುರುಷನ ಮಾಹಾತ್ಮ್ಯವನ್ನೂ ಜ್ಞಾನಿಗಳ ವಿಶೇಷವನ್ನೂ ಶೋಧಿಸಿ ಭಕ್ತಿಯೋಗದ ಸ್ವರೂಪವನ್ನೂ ಹೇಳಲಾಗುವುದು.)

**ಶ್ರೀ ಭಗವಾನುವಾಚ—**

**ಇದಂ ತು ತೇ ಗುಹ್ಯತಮಂ ಪ್ರವಕ್ಷ್ಯಾಮ್ಯನಸೂಯವೇ ।**
**ಜ್ಞಾನಂ ವಿಜ್ಞಾನಸಹಿತಂ ಯಜ್ಜ್ಞಾತ್ವಾ ಮೋಕ್ಷ್ಯಸೇಽಶುಭಾತ್॥**

ಶ್ರೀ ಭಗವಂತನು ಹೇಳಿದನು—

ಅಸೂಯೆಯಿಲ್ಲದ ನಿನಗೆ ಅತ್ಯಂತ ಗುಹ್ಯವಾದ ಈ ಉಪಾಸನವೆಂಬ ಜ್ಞಾನವನ್ನು ಅದರ ವಿಶೇಷಗಳೊಡನೆ ವಿವರವಾಗಿ ಹೇಳುವೆನು. ಅದನ್ನು (ಅನುಷ್ಠಾನಪರ್ಯಂತ) ತಿಳಿದು ನೀನು (ನನ್ನನ್ನು ಪಡೆಯಲು ತಡೆಯಾಗಿರುವ) ಸಕಲ ಅಶುಭದಿಂದಲೂ ಬಿಡಲ್ಪಡುವೆ.

(ಸಂಗತಿ : ಇತರ ಉಪಾಯಗಳಿಗಿಂತ ಭಕ್ತಿಯೋಗಕ್ಕಿರುವ ಅತಿಶಯವನ್ನು ತೋರಿಸುತ್ತಾನೆ.)

**ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದಮುತ್ತಮಂ ।**
**ಪ್ರತ್ಯಕ್ಷಾವಗಮಂ ಧರ್ಮ್ಯಂ ಸುಸುಖಂ ಕರ್ತುಮವ್ಯಯಂ ॥೨॥**

ಇದು ಎಲ್ಲ ವಿದ್ಯೆಗಳಲ್ಲಿಯೂ ಗುಹ್ಯಗಳಲ್ಲಿಯೂ ಶ್ರೇಷ್ಠವಾದುದು; ಪವಿತ್ರವೂ ಉತ್ತಮವೂ ಆದುದು; ಪ್ರತ್ಯಕ್ಷವಾಗಿ ಅನುಭವಕ್ಕೆ ಬರುವಂತಹುದು; ಧರ್ಮಯುಕ್ತವು; ಆಚರಿಸಲು ಸುಲಭವು ಮತ್ತು ಅಕ್ಷಯವಾದುದು.

**ಅಶ್ರದ್ದಧಾನಾಃ ಪುರುಷಾ ಧರ್ಮಸ್ಯಾಸ್ಯ ಪರಂತಪ ।**
**ಅಪ್ರಾಪ್ಯ ಮಾಂ ನಿವರ್ತಂತೇ ಮೃತ್ಯುಸಂಸಾರವರ್ತ್ಮನಿ ॥ ೩ ॥**

ಈ ಭಕ್ತಿರೂಪ ಧರ್ಮದಲ್ಲಿ ಶ್ರದ್ಧೆ (ವಿಶ್ವಾಸಪೂರ್ವಕ ತ್ವರೆ) ಇಲ್ಲದ ಪುರುಷರು ನನ್ನನ್ನು ಪಡೆಯದೆ ಮೃತ್ಯುರೂಪವಾದ ಸಂಸಾರ ಮಾರ್ಗದಲ್ಲಿ ತಿರುತಿರುಗಿ ಬರುವರು.

(ಸಂಗತಿ: ಉಪಾಯದ ಮಹಿಮೆಯನ್ನು ಹೇಳಿ, ಬಳಿಕ ಪ್ರಾಪ್ಯನಾದ ತನ್ನ ಅಚಿಂತ್ಯ ಮಹಿಮೆಯನ್ನು ಹೇಳುತ್ತಾನೆ.)

**ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ।**
**ಮತ್ಸ್ಥಾನಿ ಸರ್ವಭೂತಾನಿ ನ ಚಾಹಂ ತೇಷ್ವವಸ್ಥಿತಃ ॥ ೪ ॥**

**ನ ಚ ಮತ್ಸ್ಥಾನಿ ಭೂತಾನಿ ಪಶ್ಯ ಮೇ ಯೋಗಮೈಶ್ವರಂ ।**
**ಭೂತಭೃನ್ನ ಚ ಭೂತಸ್ಥೋ ಮಮಾತ್ಮಾ ಭೂತಭಾವನಃ ॥ ೫ ॥**

ಅಪ್ರಕಾಶಸ್ವರೂಪನಾದ ನನ್ನಿಂದ ಈ ಜಗತ್ತೆಲ್ಲವೂ ವ್ಯಾಪಿಸಲ್ಪಟ್ಟಿದೆ. ಎಲ್ಲ ಭೂತಗಳೂ ನನ್ನಲ್ಲಿರುವುವು. ನಾನು ಅವುಗಳಲ್ಲಿ ಇರುವುದಿಲ್ಲ. ಭೂತಗಳು ನನ್ನಲ್ಲಿರುವುವೆಂದೂ ಅಲ್ಲ. (ಘಟಾದಿಗಳು ಜಲಾದಿಗಳನ್ನು ಧರಿಸಿರುವಂತೆ ನಾನು ಅವನ್ನು ಧರಿಸವೆ, ಸಂಕಲ್ಪಮಾತ್ರದಿಂದ ಧರಿಸಿದ್ದೇನೆಂದು ತಾತ್ಪರ್ಯ.) ಈಶ್ವರನಾದ ನನ್ನ ಅಸಾಧಾರಣವಾದ ಆಶ್ಚರ್ಯ ಯೋಗವನ್ನು ನೋಡು! ನನ್ನ ಮನೋಮಯವಾದ ಸಂಕಲ್ಪವೇ ಭೂತಗಳಿಗೆಲ್ಲ ಕಾರಣವೂ, ಧಾರಕವೂ, ನಿಯಂತೃವೂ ಆಗಿದೆ. ಆದರೂ ನಾನು ಭೂತಗಳಲ್ಲಿ ಇರುವುದಿಲ್ಲ. (ಅವುಗಳಿಂದ ನನಗೇನೂ ಉಪಕಾರವಿಲ್ಲವೆಂದು ಭಾವ.)

(ಸಂಗತಿ: ಇದೆಲ್ಲದರ ಸ್ಥಿತಿಪ್ರವೃತ್ತಿಗಳೂ ತನ್ನ ಸಂಕಲ್ಪಕ್ಕೆ ಅಧೀನವೆನಲು ನಿದರ್ಶನವನ್ನು ತೋರಿಸುತ್ತಾನೆ.)

**ಯಥಾಕಾಶಸ್ಥಿತೋ ನಿತ್ಯಂ ವಾಯುಸ್ಸರ್ವತ್ರಗೋ ಮಹಾನ್ ।**
**ತಥಾ ಸರ್ವಾಣಿ ಭೂತಾನಿ ಮತ್ಸ್ಥಾನೀತ್ಯುಪಧಾರಯ ॥ ೬ ॥**

ನಿತ್ಯವೂ ಎಲ್ಲೆಡೆಗಳಲ್ಲಿಯೂ ಸಂಚರಿಸುವ ಮಹಾವಾಯುವು (ಅವ

ಲಂಬನವಿಲ್ಲದೆ) ಆಕಾಶದಲ್ಲಿರುವಂತೆ ಎಲ್ಲ ಪ್ರಾಣಿಗಳೂ ನನ್ನಲ್ಲಿ ಇರುವು ವೆಂದು ತಿಳಿ. (ನಾನು ಅದೃಷ್ಟನಾಗಿ ಆ ವಾಯುವನ್ನು ಧರಿಸಿರುವಂತೆಯೇ ಎಲ್ಲವನ್ನೂ ಧರಿಸಿದ್ದೇನೆಂದು ಭಾವ.)

(ಸಂಗತಿ: ಮತ್ತೆ ಯಾವುದನ್ನೂ ಅಪೇಕ್ಷಿಸದ ಭಗವಂತನ ಸಂಕಲ್ಪ ದಿಂದಲೇ ಎಲ್ಲಕ್ಕೂ ಸ್ಥಿತಿ ಮತ್ತು ಪ್ರವೃತ್ತಿಗಳನ್ನು ಹೇಳಿಯಾಯಿತು. ಅಂತಹ ಸಂಕಲ್ಪದಿಂದಲೇ ಎಲ್ಲಕ್ಕೂ ಉತ್ಪತ್ತಿ ಮತ್ತು ಪ್ರಳಯಗಳು ಆಗುವುವೆಂದೂ ಈಗ ಹೇಳುತ್ತಾನೆ.)

**ಸರ್ವಭೂತಾನಿ ಕೌನ್ತೇಯ ಪ್ರಕೃತಿಂ ಯಾನ್ತಿ ಮಾಮಿಕಾಂ।**
**ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌ ವಿಸೃಜಾಮ್ಯಹಂ ॥ ೭ ॥**

ಎಲ್ಲ ಭೂತಗಳೂ ಕಲ್ಪದ ಕೊನೆಯಲ್ಲಿ (ಚತುರ್ಮುಖನ ಅವಸಾನ ಸಮಯದಲ್ಲಿ) ನನ್ನ ಶರೀರ ಭೂತವಾದ ಪ್ರಕೃತಿಯನ್ನು (ತಮಸ್ಸನ್ನು) ಸೇರುವುವು. ಕಲ್ಪಾದಿಯಲ್ಲಿ ಮತ್ತೆ ಅವನ್ನು ನಾನು ಹುಟ್ಟಿಸುವೆನು.

(ಸಂಗತಿ: ಸೃಷ್ಟಿ ಪ್ರಕಾರವನ್ನು ಹೇಳುತ್ತಾನೆ.)

**ಪ್ರಕೃತಿಂ ಸ್ವಾಮವಷ್ಟಭ್ಯ ವಿಸೃಜಾಮಿ ಪುನಃ ಪುನಃ ।**
**ಭೂತಗ್ರಾಮಮಿಮಂ ಕೃತ್ಸ್ನಮವಶಂ ಪ್ರಕೃತೇರ್ವಶಾತ್ ॥ ೮ ॥**

ಪ್ರಕೃತಿಗೆ ವಶವಾಗಿರುವುದರಿಂದ ಪರಂತಂತ್ರವಾದ ಈ ಎಲ್ಲ ಭೂತ ಸಮುದಾಯವನ್ನೂ ನಾನು ನನ್ನ ಪ್ರಕೃತಿಯನ್ನು ಎಂಟು ವಿಧವಾಗಿ ಪರಿಣಾಮಗೊಳಿಸುವುದರ ಮೂಲಕ ಪುನಃ ಪುನಃ ಹುಟ್ಟಿಸುವೆನು.

(ಸಂಗತಿ: ಹೀಗಾದರೆ ವಿಷಮಸೃಷ್ಟ್ಯಾದಿ ಕರ್ಮಗಳಿಂದ ನಿನಗೆ ನೈರ್ಘೃಣ್ಯವೂ ಅದರಿಂದ ಬಂಧನವೂ ಪ್ರಾಪ್ತವಾಗಬೇಕಲ್ಲವೆ? ಎಂದರೆ ಹೇಳುತ್ತಾನೆ.)

**ನ ಚ ಮಾಂ ತಾನಿ ಕರ್ಮಾಣಿ ನಿಬಧ್ನನ್ತಿ ಧನಂಜಯ ।**
**ಉದಾಸೀನವದಾಸೀನಮಸಕ್ತಂ ತೇಷು ಕರ್ಮಸು ॥ ೯ ॥**

ಆ ವಿಷಮ ಕರ್ಮಗಳಲ್ಲಿ ಆಸಕ್ತಿಯಿಲ್ಲದವನಾಗಿ ಉದಾಸೀನನಂತಿ ರುವ ನನ್ನನ್ನು ಆ ವಿಷಮಸೃಷ್ಟ್ಯಾದಿ ವ್ಯಾಪಾರಗಳು ಬಂಧಿಸವು. (ಅದ

ರಿಂದ ನನಗೆ ನೈರ್ಘೃಣ್ಯಾದಿಗಳು ಬರುವುದಿಲ್ಲ–ಏಕೆಂದರೆ, ಆಯಾ ಕ್ಷೇತ್ರಜ್ಞರ ಪೂರ್ವಕರ್ಮಗಳೇ ಆ ವಿಷಮಸೃಷ್ಟ್ಯಾದಿಗಳಿಗೆ ಕಾರಣವೇ ಹೊರತು ತಾನಲ್ಲವೆಂದು ಭಾವ.)

(ಸಂಗತಿ: ವಿಷಮಸೃಷ್ಟ್ಯಾದಿಗಳು ಚೇತನರ ಕರ್ಮಾನುಗುಣವಾದರೆ, ಪರಿಣಾಮಶೀಲವಾದ ಪ್ರಕೃತಿಯೇ ಹಾಗೆ ಪರಿಣಮಿಸಲಿ — ಅದರಲ್ಲಿ ನಿನ್ನದೇನಿದೆ?—ಎಂದರೆ ಹೇಳುತ್ತಾನೆ.)

**ಮಯಾಽಧ್ಯಕ್ಷೇಣ ಪ್ರಕೃತಿಃ ಸೂಯತೇ ಸಚರಾಚರಂ ।**
**ಹೇತುನಾಽನೇನ ಕೌನ್ತೇಯ ಜಗದ್ಧಿ ಪರಿವರ್ತತೇ ॥ ೧೦ ॥**

ನನ್ನ ಅಧ್ಯಕ್ಷತೆಯಲ್ಲಿ ಪ್ರಕೃತಿಯು ಚರಾಚರಾತ್ಮಕವಾದ ಜಗತ್ತನ್ನು ಹುಟ್ಟಿಸುವುದು. ಕ್ಷೇತ್ರಜ್ಞ ಕರ್ಮಾನುಗುಣವಾದ, ನನ್ನ ಈ ಸಂಕಲ್ಪದಿಂದ ಜಗತ್ತು ತಿರುಗುತ್ತಿರುವುದಷ್ಟೆ!

(ಟಿಪ್ಪಣಿ: ನನ್ನ ಸ್ವಾಮ್ಯ, ಸತ್ಯಸಂಕಲ್ಪತ್ವ, ನೈರ್ಘೃಣ್ಯಾದಿ ದೋಷವಿಲ್ಲದಿರುವಿಕೆ — ಎಂಬಿವೇ ಮುಂತಾದ ನನ್ನ ಅಸಾಧಾರಣ ಸಾಮರ್ಥ್ಯವನ್ನು ನೋಡು —ಎಂದು ಭಾವ.)

(ಸಂಗತಿ: ಮಹಾತ್ಮರ ವಿಶೇಷವನ್ನು ಹೇಳಲು, ಈಗ ಮೂಢರ ಸ್ವಭಾವವನ್ನು ಹೇಳುತ್ತಾನೆ.)

**ಅವಜಾನನ್ತಿ ಮಾಂ ಮೂಢಾ ಮಾನುಷೀಂ ತನುಮಾಶ್ರಿತಂ ।**
**ಪರಂ ಭಾವಮಜಾನನ್ತೋ ಮಮ ಭೂತಮಹೇಶ್ವರಂ ॥ ೧೧ ॥**

(ಎಲ್ಲರೂ ಆಶ್ರಯಿಸಲೆಂದು ಪರಮ ಕರುಣೆಯಿಂದ) ಮನುಷ್ಯದೇಹವನ್ನು ಧರಿಸಿದ; ಮಹೇಶ್ವರರೂಪವೂ ಶ್ರೇಷ್ಠವೂ ಆದ ನನ್ನ ಭಾವವನ್ನು (ತಮ್ಮ ಪಾಪಕರ್ಮಗಳಿಂದ) ಮೂಢರಾದವರು ಅರಿಯದೆ ನನ್ನನ್ನು ಪ್ರಾಕೃತ ಮನುಷ್ಯನಂತೆಯೇ ಭಾವಿಸುವರು.

**ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ ।**
**ರಾಕ್ಷಸೀ ಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥ ೧೨ ॥**

ಮನುಷ್ಯಾವತಾರದಲ್ಲಿ ನನ್ನ ಪರತ್ವವನ್ನು ಮರೆಸುವ ತಾಮಸ-ರಾಜಸ ಸ್ವಭಾವವನ್ನು ಆಶ್ರಯಿಸಿದವರಾಗಿ, ವ್ಯರ್ಥವಾದ ಆಸೆಯುಳ್ಳವರೂ

ವ್ಯರ್ಥವಾಗಿ ಕರ್ಮಗಳನ್ನು ಮಾಡುವವರೂ, ವ್ಯರ್ಥವಾದ ಜ್ಞಾನವುಳ್ಳವರೂ (ಎಲ್ಲದರಲ್ಲಿಯೂ) ಯಥಾರ್ಥಜ್ಞಾನಶೂನ್ಯರೂ ಆಗಿರುವರು.

(ಸಂಗತಿ: ಹೀಗೆ ನಿನ್ನಲ್ಲಿ ಅವಜ್ಞತೆಯುಳ್ಳ ಮೂಢಜನರಿಂದ ತುಂಬಿದ ಈ ಲೋಕದಲ್ಲಿ ನೀನು ಅವತರಿಸಿರುವುದು ವ್ಯರ್ಥವಲ್ಲವೆ?— ಎಂದರೆ, ಅವತಾರವನ್ನು ಸಫಲಗೊಳಿಸುವ ಮಹಾತ್ಮರ ವೃತ್ತವನ್ನು ಹೇಳುವ ನೆಪದಿಂದ ಭಕ್ತಿಯನ್ನು ಪ್ರಸ್ತಾಪಿಸುತ್ತಾನೆ.)

**ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ ।**
**ಭಜನ್ತ್ಯನನ್ಯಮನಸೋ ಜ್ಞಾತ್ವಾ ಭೂತಾದಿ ಮವ್ಯಯಂ ॥ ೧೩ ॥**

ಆದರೆ, (ಪುಣ್ಯ ಸಂಚಯಗಳಿಂದ ನನ್ನನ್ನು ಶರಣಹೊಂದಿ ಸಮಸ್ತ ಪಾಪಗಳನ್ನೂ ನೀಗಿದವರಾಗಿ) ದೈವೀ ಪ್ರಕೃತಿಯನ್ನು ಆಶ್ರಯಿಸಿದ ಮಹಾತ್ಮರು ಭೂತಗಳಿಗೆ ಆದಿಯೂ ಅವ್ಯಯನೂ ಆದ ನನ್ನನ್ನು ತಿಳಿದು ಅನನ್ಯ ಮನಸ್ಕರಾಗಿ ಭಜಿಸುವರು.

**ಸತತಂ ಕೀರ್ತಯಂತೋ ಮಾಂ ಯತಂತಶ್ಚ ದೃಢವ್ರತಾಃ ।**
**ನಮಸ್ಯಂತಶ್ಚ ಮಾಂ ಭಕ್ತ್ಯಾ ನಿತ್ಯಯುಕ್ತಾ ಉಪಾಸತೇ ॥ ೧೪ ॥**

ಅತ್ಯಂತ ಪ್ರಿಯವಾದ ನನ್ನ ಕೀರ್ತನ, ಯತನ, ನಮಸ್ಕಾರಗಳನ್ನು ಳಿದು ಕ್ಷಣಾಣುಮಾತ್ರವೂ ಧರಿಸದ ನನ್ನ ಗುಣವಿಶೇಷಗಳಿಗೆ ವಾಚಕವಾದ ನಾಮಗಳನ್ನು ಸ್ಮರಿಸಿ ಹರ್ಷದಿಂದ ರೋಮಾಂಚವುಳ್ಳವರೂ, ಗದ್ಗದಕಂಠರೂ ಆಗಿ, ನಾರಾಯಣ, ವಾಸುದೇವ, ಕೃಷ್ಣ ಮುಂತಾದ ನಾಮಗಳಿಂದ) ನನ್ನನ್ನು ಭಕ್ತಿಯಿಂದ ನಿರಂತರವೂ ಕೀರ್ತಿಸುತ್ತಾ, ಹಾಗೆಯೇ (ನನ್ನ ಅರ್ಚನಾದಿಗಳಲ್ಲಿ) ದೃಢಸಂಕಲ್ಪರಾಗಿ ಯತ್ನಿಸುತ್ತಾ, ಭಕ್ತಿ ಭಾರದಿಂದ (ಚೆನ್ನಾಗಿ ಬಾಗಿದ ಅಷ್ಟಾಂಗಗಳಿಂದ, ನೆಲದಲ್ಲಿರುವ ಧೂಳು, ಕೆಸರು ಮುಂತಾದುವನ್ನೂ ಲಕ್ಷ್ಯಮಾಡದೆ ಬಿದ್ದು) ನಮಸ್ಕರಿಸುತ್ತಾ, ನನ್ನೊಡನೆ ಸದಾ ಸೇರಿರಲು ಆಸೆಯುಳ್ಳವರಾಗಿ ನಿರಂತರವೂ ನನ್ನನ್ನು ಭಜಿಸುತ್ತಾರೆ.

(ಸಂಗತಿ: ಹಿಂದೆ ಎರಡು ಶ್ಲೋಕಗಳಿಂದ ಕ್ರಮವಾಗಿ "ಅನನ್ಯಮನಸ್ತ್ವ" ಮತ್ತು "ಕೀರ್ತನಾ"ದಿಗಳಿಂದ ಉಪಾಸನವನ್ನು ವಿಶೇಷಿಸಿ

ಈಗ ವೇದ್ಯವಾದ ತನ್ನ ವಿಶೇಷಾಕಾರ ಪ್ರದರ್ಶನದಿಂದಲೂ ಉಪಾಸನವನ್ನು ವಿಶೇಷಿಸುತ್ತಾನೆ.)

**ಜ್ಞಾನಯಜ್ಞೇನ ಚಾಪ್ಯನ್ಯೇ ಯಜಂತೋ ಮಾಮುಪಾಸತೇ ।**
**ಏಕತ್ವೇನ ಪೃಥಕ್ತ್ವೇನ ಬಹುಧಾ ವಿಶ್ವತೋಮುಖಂ ॥**

ಬೇರೆಯವರು (ಪೂರ್ವೋಪಾಸಕರಾದ ಮಹಾತ್ಮರು) ಹಿಂದೆ ಹೇಳಿದ ಕೀರ್ತನಾದಿಗಳಿಂದ ಮಾತ್ರವಲ್ಲದೆ, ಜ್ಞಾನವೆಂಬ ಯಜ್ಞದಿಂದಲೂ ನನ್ನನ್ನು ಸಂತೋಷಪಡಿಸುತ್ತ ಉಪಾಸಿಸುವರು—ಹೇಗೆಂದರೆ, ಜಗದಾಕಾರದಿಂದ ಬಹುವಾಗಿ ಬೇರೆಬೇರೆಯಾಗಿರುವ ವಿಶ್ವತೋಮುಖನಾದ ನನ್ನನ್ನು ಏಕತ್ವದಿಂದ ಉಪಾಸಿಸುವರು. (ಅತಿ ಸೂಕ್ಷ್ಮ ಚೇತನಾಚೇತನ ಶರೀರಕನಾದ ಭಗವದ್ವಾಸುದೇವನೊಬ್ಬನೇ ತನ್ನ ಸಂಕಲ್ಪದಿಂದ ದೇವ-ತಿರ್ಯಕ್-ಮನುಷ್ಯ-ಸ್ಥಾವರ ರೂಪವಾದ ವಿಚಿತ್ರ ಜಗಚ್ಛರೀರಕನೂ ಆಗಿದ್ದಾನೆಂದು ತಿಳಿದು ನನ್ನನ್ನು ಉಪಾಸಿಸುವರೆಂದು ಭಾವ.)

(ಸಂಗತಿ : ತಾನೇ ವಿಶ್ವಶರೀರಕನಾಗಿರುವನೆಂಬುದನ್ನೇ ಸಮರ್ಥಿಸುತ್ತಾನೆ.)

**ಅಹಂಕ್ರತುರಹಂ ಯಜ್ಞಃ ಸ್ವಧಾಽಹಮಹಮೌಷಧಂ ।**
**ಮನ್ತ್ರೋಽಹಮಹಮೇವಾಜ್ಯಂ ಅಹಮಗ್ನಿರಹಂ ಹುತಂ ॥೧೬॥**

ಜ್ಯೋತಿಷ್ಟೋಮಾದಿ ಯಾಗವು ನಾನೇ. ಬ್ರಹ್ಮಯಜ್ಞಾದಿ ಪಂಚವಿಧವಾದ ಮಹಾಯಜ್ಞವು ನಾನೇ. ಪಿತೃಗಣಕ್ಕೆ ತೃಪ್ತಿಯನ್ನು ನೀಡುವ ಸ್ವಧೆಯು ನಾನೇ, ಓಷಧಿವಿಕಾರವಾದ ಹವಿರ್ಭಕ್ಷ್ಯವು ನಾನೇ. ಮಂತ್ರವು ನಾನೇ, ಆಜ್ಯಾದಿ ಹವನ ದ್ರವ್ಯವು ನಾನೇ, ಆಹವನೀಯಾದಿ ಅಗ್ನಿಯು ನಾನೇ, ಹೋಮವೂ ನಾನೇ.

**ಪಿತಾಮಹಸ್ಯ ಜಗತೋ ಮಾತಾ ಧಾತಾ ಪಿತಾಮಹಃ ।**
**ವೇದ್ಯಂ ಪವಿತ್ರಮೋಂಕಾರ ಋಕ್ಸಾಮ ಯಜುರೇವ ಚ ॥ ೧೭ ॥**

ಈ ಜಗತ್ತಿಗೆಲ್ಲ ಆಯಾ ತಂದೆ, ತಾಯಿ, ಧಾತೃ, ಪಿತಾಮಹರೆನಿಸುವವರೆಲ್ಲ ನಾನೇ. ವೇದವೇದ್ಯವಾದ ಪವಿತ್ರ ವಸ್ತುವೂ ವೇದಕ್ಕೆ ಬೀಜಭೂತವಾದ ಪ್ರಣವವೂ, ಋಕ್ಸಾಮಯಜುರಾತ್ಮಕವಾದ ವೇದವೂ ನಾನೇ.

(ಟಿಪ್ಪಣಿ :—ಇಲ್ಲಿ " ಧಾತೃ " ಎಂದರೆ, ಮಾತಾಪಿತೃಗಳನ್ನುಳಿದು ಉತ್ಪತ್ತಿ ಪ್ರಯೋಜಕವಾದ ಬೇರೆ ಚೇತನ ವಿಶೇಷವೆಂದು ಅರ್ಥ.)

**ಗತಿರ್ಭರ್ತಾ ಪ್ರಭುಸ್ಸಾಕ್ಷೀ ನಿವಾಸಶ್ಶರಣಂ ಸುಹೃತ್ ।**
**ಪ್ರಭವಪ್ರಲಯಸ್ಥಾನಂ ನಿಧಾನಂ ಬೀಜಮವ್ಯಯಂ ॥ ೧೮ ॥**

ಆಯಾ ಪ್ರಾಪ್ಯಸ್ಥಾನವು, ಧಾರಕನು ಶಾಸಿತೃವು, ಸಾಕ್ಷಿಯು, ಗೃಹಾದಿ ವಾಸಸ್ಥಾನವು, ರಕ್ಷಕನು, ಹಿತೈಷಿಯು, ಉತ್ಪತ್ತಿ ಮತ್ತು ಪ್ರಳಯಸ್ಥಾನವು ಉತ್ಪಾದ್ಯ ಮತ್ತು ಉಪಸಂಹಾರ್ಯವು, (ನಿಧಾನವು) ಅಲ್ಲಲ್ಲಿಯ ವ್ಯಯರಹಿತವಾದ ಕಾರಣವು ಇವೆಲ್ಲ ನಾನೇ ಆಗಿರುವೆನು.

(ಸಂಗತಿ : " ಪ್ರಾಧಾನ್ಯತಃ ಕುರುಶ್ರೇಷ್ಠ . . . . " (10–19) ಎಂದು ಮುಂದೆ ಪ್ರಕೃಷ್ಟ ಪದಾರ್ಥಗಳ ಸತ್ತೆಯು ತನಗಧೀನವೆಂದು ಪ್ರದರ್ಶಿಸಲಾಗುವುದು. ಈಗ ಇಲ್ಲಿ ಎಲ್ಲದರ ಪ್ರವೃತ್ತಿಯು ತನ್ನಧೀನ ವೆಂದು ಹೇಳಲಾಗುತ್ತದೆ.)

**ತಪಾಮ್ಯಹಮಹಂ ವರ್ಷಂ ನಿಗೃಹ್ಣಾಮ್ಯುತ್ಸೃಜಾಮಿ ಚ ।**
**ಅಮೃತಂ ಚೈವ ಮೃತ್ಯುಶ್ಚ ಸದಸಚ್ಚಾಹಮರ್ಜುನ ॥ ೧೯ ॥**

(ಅಗ್ನ್ಯಾದಿತ್ಯಾದಿ ರೂಪದಿಂದ) ನಾನೇ ತಾಪವನ್ನು ಉಂಟುಮಾಡುತ್ತೇನೆ. (ಗ್ರೀಷ್ಮಕಾಲದಲ್ಲಿ ಮಳೆಯನ್ನು ತಡೆಯುತ್ತೇನೆ. ಹಾಗೆಯೇ ಮಳೆಗಾಲದಲ್ಲಿ ಮಳೆಯನ್ನು ಕರೆಯುತ್ತೇನೆ ; ಅಮೃತವೂ, ಮೃತ್ಯುವೂ ನಾನೇ ; (ಹೆಚ್ಚೇಕೆ ?) ಸತ್ (ಇರುವುದು) ಮತ್ತು ಅಸತ್ (ಕಳೆದು ಹೋದುದು) ನಾನೇ.

(ಟಿಪ್ಪಣಿ : ಸರ್ವಾವಸ್ಥಗಳಾದ ಚೇತನಾಚೇತನ ವಸ್ತುಗಳು ನನ್ನ ಶರೀರವಾದುದರಿಂದ ಆಯಾ ಪ್ರಕಾರದಿಂದಿರುವುದೆಲ್ಲ ನಾನೇ. ಹೀಗೆ ಬಹು ಪ್ರಕಾರವಾಗಿರುವ ನನ್ನನ್ನು ಏಕತ್ವ ಜ್ಞಾನದಿಂದ ಅನುಸಂಧಾನ ಮಾಡುತ್ತ ನನ್ನನ್ನು ಉಪಾಸಿಸುತ್ತಾರೆಂದು ಭಾವ.)

(ಸಂಗತಿ : ಹೀಗೆ ಭಗವದನುಭವೈಕಭೋಗರೂ, ಮಹಾತ್ಮರೂ ಆದ ಜ್ಞಾನಿಗಳ ವೃತ್ತವನ್ನು ಹೇಳಿ ಅವರಿಗೇ ಆಧಿಕ್ಯವನ್ನು ತೋರಿಸುವುದ ಕ್ಕಾಗಿ, ಅಜ್ಞರಾದ ಫಲಕಾಮರ ವೃತ್ತವನ್ನು ಈಗ ಹೇಳುತ್ತಾನೆ.)

**ತ್ರೈವಿದ್ಯಾ ಮಾಂ ಸೋಮಪಾಃ ಪೂತಪಾಪಾಃ**
**ಯಜ್ಞೈರಿಷ್ಟ್ವಾ ಸ್ವರ್ಗತಿಂ ಪ್ರಾರ್ಥಯಂತೇ ।**
**ತೇ ಪುಣ್ಯಮಾಸಾದ್ಯ ಸುರೇಂದ್ರಲೋಕಂ**
**ಅಶ್ನಂತಿ ದಿವ್ಯಾನ್ ದಿವಿ ದೇವಭೋಗಾನ್ ॥ ೨೦ ॥**

**ತೇ ತಂ ಭುಕ್ತ್ವಾ ಸ್ವರ್ಗಲೋಕಂ ವಿಶಾಲಂ**
**ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ ।**
**ಏವಂ ತ್ರಯೀಧರ್ಮ ಮನುಪ್ರಪನ್ನಾಃ**
**ಗತಾಗತಂ ಕಾಮಕಾಮಾ ಲಭಂತೇ ॥ ೨೧ ॥**

ಕೇವಲ ವೇದನಿಷ್ಠರು (ವೇದಾಂತದಲ್ಲಿ ನಿಷ್ಠೆಯಿಲ್ಲದವರೆಂದು ಭಾವ) (ಕರ್ಮಭಾಗಮಾತ್ರದಲ್ಲಿ ಪ್ರತಿಪಾದ್ಯವಾದ ಕೇವಲ ಇಂದ್ರಾದಿಯಾಗ ಶಿಷ್ಟವಾದ) ಸೋಮರಸವನ್ನು ಪಾನಮಾಡಿದವರಾಗಿ, (ಸ್ವರ್ಗಾದಿ ಪ್ರಾಪ್ತಿಗೆ ವಿರೋಧಿಯಾದ) ಪಾಪವನ್ನು ಕಳೆದುಕೊಂಡು, (ಇಂದ್ರಾದಿ ದೇವತೋದ್ದಿಷ್ಟ) ಯಾಗಗಳಿಂದ (ವಸ್ತುತಃ ಆ ಇಂದ್ರಾದಿ ರೂಪದಿಂದಿರುವ) ನನ್ನನು ಪೂಜಿಸಿ, ಸ್ವರ್ಗವನ್ನು ಕೋರುವವರು. ಅವರು ದುಃಖಮಿಶ್ರವಿಲ್ಲದ ದೇವೇಂದ್ರ ಲೋಕವನ್ನು ಪಡೆದು ಸ್ವರ್ಗದಲ್ಲಿ ದೇವತೆಗಳು ಭೋಗಿಸುವ ದಿವ್ಯ ಭೋಗಗಳನ್ನು ಭೋಗಿಸುವರು. ವಿಶಾಲವಾದ ಆ ಸ್ವರ್ಗಲೋಕವನ್ನು ಉಪಭೋಗಿಸಿ, ಪುಣ್ಯವು ತೀರಲು, ಅವರು (ಮತ್ತೆ) ಮನುಷ್ಯಲೋಕವನ್ನು ಪ್ರವೇಶಿಸುವರು. ಈ ಮೇರೆಗೆ ಕಾಮ್ಯವಾದ ಸ್ವರ್ಗಾದಿಗಳನ್ನು ಬಯಸುವ ವೇದೈಕನಿಷ್ಠರು. (ಅಲ್ಪವೂ ಅಸ್ಥಿರವೂ ಆದ ಸ್ವರ್ಗಾದಿಗಳನ್ನು ಉಪಭೋಗಿಸಿ) ಪುನಃಪುನಃ ಹಿಂದಕ್ಕೆ ಬರುವರು.

(ಸಂಗತಿ : ಮಹಾತ್ಮರಾದರೋ ನಿರತಿಶಯ ಪ್ರಿಯಪಾದ ನನ್ನ ಉಪಾಸನೆಯನ್ನು ಮಾಡಿ ನಿತ್ಯನೂ ನಿರ್ದೋಷನೂ ನಿರತಿಶಯಾನಂದನೂ ಆದ ನನ್ನನ್ನು ಸೇರಿ ಮತ್ತೆ ಹಿಂದಕ್ಕೆ ಬರುವುದಿಲ್ಲವೆಂದು ಮಹಾತ್ಮರ ವಿಶೇಷವನ್ನು ತೋರಿಸುತ್ತಾನೆ.)

**ಅನನ್ಯಾಶ್ಚಿಂತಯಂತೋಮಾಂ ಯೇ ಜನಾಃ ಪರ್ಯುಪಾಸತೇ ।**
**ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ॥**

ಬೇರೆ ಯಾವ ಪ್ರಯೋಜನವನ್ನೂ ಇಚ್ಛಿಸದವರಾಗಿ (ಅಖಂಡಿತ ಗುಣ ವಿಭೂತಿಕನಾದ) ನನ್ನನ್ನೇ ಚಿಂತಿಸುತ್ತ ನನ್ನೊಡನೆಯೇ ನಿತ್ಯ ಸಂಬಂಧವನ್ನು ಬಯಸುತ್ತ ನನ್ನನ್ನು ಪರಿಪೂರ್ಣವಾಗಿ ಉಪಾಸಿಸುವ ಜನರ ಯೋಗಕ್ಷೇಮಗಳ ಭಾರವನ್ನು ನಾನು ವಹಿಸುವೆನು.

(ಟಿಪ್ಪಣಿ : ಇಲ್ಲಿ " ಯೋಗ "ವೆಂದರೆ ಭಗವತ್ಪ್ರಾಪ್ತಿ. " ಕ್ಷೇಮ " ಎಂದರೆ, ಆ ಪ್ರಾಪ್ತಿಗೆ ಚ್ಯುತಿಬರದಂತೆ ಪರಿಪಾಲಿಸುವುದು.)

(ಸಂಗತಿ : ಸಕಲ ದೇವತೆಗಳೂ ಭಗವಂತನಾದ ನಿನ್ನ ಶರೀರವಾದುದರಿಂದ, ಯಾವ ದೇವತಾರಾಧನವೂ ವಸ್ತುತಃ ನಿನ್ನ ಸಮಾರಾಧನವೇ ಆಗುವುದೆಂದು ಬಲ್ಲ ನೀನು ಕೇವಲ ಕರ್ಮಿಗಳಿಗೂ ಕೂಡ ಮೋಕ್ಷರೂಪ ಯೋಗಕ್ಷೇಮವನ್ನು ಏಕೆ ಕೊಡಬಾರದು ?—ಎಂದರೆ, ಹೇಳುತ್ತಾನೆ.)

**ಯೇ ತ್ವನ್ಯದೇವತಾ ಭಕ್ತಾ ಯಜಂತೇ ಶ್ರದ್ಧಯಾಽನ್ವಿತಾಃ ।**
**ತೇಽಪಿ ಮಾಮೇವ ಕೌಂತೇಯ ಯಜನ್ತ್ಯವಿಧಿಪೂರ್ವಕಂ ॥೨೩॥**

ಶ್ರದ್ಧಾಯುಕ್ತರಾಗಿ ಪೂಜಿಸುವ ಅನ್ಯ ದೇವತೆಗಳ ಭಕ್ತರೂ (ಆ ದೇವತೆಗಳೆಲ್ಲ ನನ್ನ ಶರೀರವಾದುದರಿಂದ ಮತ್ತು ಅವರನ್ನು ಹೇಳುವ ಶಬ್ದಗಳೂ ಮುಖ್ಯವಾಗಿ ನನ್ನನ್ನೇ ಹೇಳುವುದರಿಂದ) ವಸ್ತುತಃ ನನ್ನನ್ನೇ ಪೂಜಿಸುವರು ; ಆದರೆ ವಿಧಿಪೂರ್ವಕವಾಗಿ ಪೂಜಿಸುವುದಿಲ್ಲ. (ಏಕೆಂದರೆ, ವೇದಾಂತಗಳು ಹೇಳುವಂತೆ ಎಲ್ಲ ಕರ್ಮಗಳಿಗೂ ನಾನೇ ನೇರವಾಗಿ ಆರಾಧ್ಯನೆಂಬುದನ್ನು ಅವರು ತಿಳಿದು ಪೂಜಿಸುವುದಿಲ್ಲವೆಂದು ಭಾವ.)

(ಸಂಗತಿ : ಆಹಾ, ಇದು ಬಹು ಆಶ್ಚರ್ಯ ! ಏಕೆಂದರೆ, ಒಂದೇ ಕರ್ಮದಲ್ಲಿ ತೊಡಗಿದವರೊಳಗೇ ಸಂಕಲ್ಪಮಾತ್ರದಲ್ಲಿ ಭೇದದಿಂದ, ಕೆಲವರು ಅತ್ಯಲ್ಪ ಫಲಗಳನ್ನು ಹೊಂದಿ ಚ್ಯುತರಾಗುತ್ತಾರೆ; ಮತ್ತೆ ಕೆಲವರು ಅನವಧಿಕಾತಿಶಯಾನಂದನಾದ ಪರಮ ಪುರುಷನನ್ನು ಸೇರಿ ಎಂದೂ ಚ್ಯುತರಾಗುವುದಿಲ್ಲ ! ಎಂದು ಹೇಳುತ್ತಾನೆ.)

**ಅಹಂ ಹಿ ಸರ್ವಯಜ್ಞಾನಾಂ ಭೋಕ್ತಾ ಚ ಪ್ರಭುರೇವ ಚ ।**
**ನ ತು ಮಾಮಭಿಜಾನಂತಿ ತತ್ತ್ವೇನಾತಶ್ಚ್ಯವಂತಿ ತೇ ॥ ೨೪ ॥**

ಎಲ್ಲ ಯಜ್ಞಗಳಿಗೂ ನಾನೇ ಆರಾಧ್ಯನು ಮತ್ತು ಫಲಪ್ರದನು. ಅನ್ಯ ದೇವತೆಗಳ ಭಕ್ತರು ನನ್ನನ್ನು ತತ್ತ್ವತಃ ಹೀಗೆಂದು ತಿಳಿಯರು. ಆದುದರಿಂದ ಅವರು ಚ್ಯುತರಾಗುವರು.

**ಯಾನ್ತಿ ದೇವವ್ರತಾ ದೇವಾನ್ ಪಿತೄನ್ ಯಾಂತಿ ಪಿತೃವ್ರತಾಃ ।**
**ಭೂತಾನಿ ಯಾನ್ತಿ ಭೂತೇಜ್ಯಾ ಯಾನ್ತಿ ಮದ್ಯಾಜಿನೋಽಪಿ ಮಾಂ**

ದೇವಯಜನ ಸಂಕಲ್ಪದಿಂದ ದರ್ಶಪೂರ್ಣಮಾಸಾದಿ ಕರ್ಮಗಳನ್ನು ಆಚರಿಸುವವರು ದೇವತೆಗಳನ್ನು ಪಡೆಯುವರು. ಪಿತೃಯಜನ ಸಂಕಲ್ಪದಿಂದ ಪಿತೃಯಜ್ಞಾದಿಗಳನ್ನು ಆಚರಿಸುವವರು ಪಿತೃಗಳನ್ನು ಪಡೆಯುವರು ಭೂತಯಜನಸಂಕಲ್ಪದಿಂದ ಯಕ್ಷರಕ್ಷಃಪಿಶಾಚಾದಿಗಳನ್ನು ಪೂಜಿಸುವವರು ಆಯಾ ಭೂತಗಳನ್ನು ಪಡೆಯುವರು. ಅದೇ ಯಜ್ಞಗಳಿಂದ ದೇವಪಿತೃಭೂತಶರೀರಕನಾದ ಪರಮಾತ್ಮನನ್ನು ಪೂಜಿಸುವ ಸಂಕಲ್ಪದಿಂದ ನನ್ನನ್ನು ಪೂಜಿಸುವವರು ನನ್ನನ್ನೇ ಪಡೆಯುವರು. (ಆಯಾಸವು ಸಮಾನವಾದರೂ ಫಲಭೇದಕ್ಕೆ ಸಂಕಲ್ಪಭೇದವೇ ಕಾರಣವೆಂದು ಭಾವ.)

(ಸಂಗತಿ : ಹೀಗೆ ಪ್ರಾಪ್ಯವೈಷಮ್ಯವನ್ನು ಹೇಳಿದ ಬಳಿಕ, ಉಪಾಯವೈಷಮ್ಯವನ್ನು ಹೇಳುತ್ತಾನೆ.)

**ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ**
**ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥ ೨೬ ॥**

(ನನ್ನ ಭಕ್ತರಿಗೆ ಮತ್ತೊಂದು ವಿಶೇಷವೇನೆಂದರೆ ?) ಸರ್ವಸುಲಭವಾದ ಪತ್ರವನ್ನಾಗಲಿ, ಪುಷ್ಪವನ್ನಾಗಲಿ, ಫಲವನ್ನಾಗಲಿ, ನೀರನ್ನಾಗಲಿ, ನನಗೆ ಅರ್ಪಿಸಿದ ಹೊರತು ಧರಿಸಲಾಗದೇ, ತದೇಕಪ್ರಯೋಜನದಿಂದ ಯಾವನು ಅರ್ಪಿಸುತ್ತಾನೆಯೋ—ಪ್ರಯೋಜನಾಂತರ ರಾಗರೂಪವಾದ ಅಶುದ್ಧಿಯಿಲ್ಲದೆ ಭಕ್ತಿಯಿಂದ ಅವನು ಅರ್ಪಿಸಿದ ಅದನ್ನು (ಸರ್ವೇಶ್ವರನಾದ) ನಾನು (ಅಪೂರ್ವಲಾಭದಂತೆ ತಿಳಿದು ಅತ್ಯಂತ ಪ್ರೀತಿಯಿಂದ) ಸೇವಿಸುವೆನು.

(ಸಂಗತಿ : ಜ್ಞಾನಿಗಳಾದ ಮಹಾತ್ಮರಿಗೆ ಇಂತಹ ಅವಾಙ್ಮನಸಗೋಚರವಾದ ವಿಶೇಷವಿರುವುದರಿಂದ, ನೀನೂ ಜ್ಞಾನಿಯಾಗಿ ಭಕ್ತಿಭಾವ

ದಿಂದ ಬಾಗಿದ ಆತ್ಮಾತ್ಮೀಯವುಳ್ಳವನಾಗಿ, ನಿರಂತರವೂ ನನ್ನ ಕೀರ್ತನ-ಯತನ-ಅರ್ಚನ-ಪ್ರಮಾಣಾದಿಗಳನ್ನು ಮಾಡುತ್ತ, ಮುಂದೆ ಹೇಳುವಂತೆ ಲೌಕಿಕ ವೈದಿಕ ಕರ್ಮಗಳೆಲ್ಲವನ್ನೂ ಮಾಡು ಎಂದು ಹೇಳುತ್ತಾನೆ.)

**ಯತ್ಕರೋಷಿ ಯದಶ್ನಾಸಿ ಯಜ್ಜುಹೋಷಿ ದದಾಸಿ ಯತ್ ।**
**ಯತ್ತಪಸ್ಯಸಿ ಕೌಂತೇಯ ತತ್ಕುರುಷ್ವ ಮದರ್ಪಣಂ ॥ ೨೭ ॥**

ದೇಹಯಾತ್ರೆಗೆ ಅತ್ಯಗತ್ಯವಾದ ಯಾವ ಲೌಕಿಕಕರ್ಮವನ್ನು ಮಾಡುತ್ತೀಯೋ, ದೇಹಧಾರಣೆಗಾಗಿ ಏನನ್ನು ತಿನ್ನುತ್ತೀಯೋ, ವೈದಿಕ ವಾದ ಯಾವ ಹೋಮ-ದಾನ-ತಪಸ್ಸುಗಳೇ ಮುಂತಾದ ನಿತ್ಯನೈಮಿತ್ತಿಕ ಕರ್ಮಗಳನ್ನು ಆಚರಿಸುತ್ತೀಯೋ ಅದೆಲ್ಲವನ್ನೂ ನನಗೆ ಅರ್ಪಿಸು. (ನೀನು ನನಗೆ ಅತ್ಯಂತನಿಯಾಮ್ಯನೂ ಶೇಷತ್ವೈಕರಸನೂ ಆದುದರಿಂದ ಆ ಕರ್ಮ ಗಳೆಲ್ಲಕ್ಕೂ ಪರಮಕರ್ತೃವೂ ಭೋಕ್ತೃವೂ ಆರಾಧ್ಯನೂ ನಾನೇ ಎಂದು ಎಲ್ಲಕರ್ಮಗಳನ್ನು ಮಾಡುವಾಗಲೂ ನೆನೆಯುತ್ತಿರು ಎಂದು ಭಾವ.)

**ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧನೈಃ ।**
**ಸಂನ್ಯಾಸಯೋಗಯುಕ್ತಾತ್ಮಾ ವಿಮುಕ್ತೋ ಮಾಮುಪೈಷ್ಯಸಿ ॥**

ಈ ರೀತಿಯಾದ ಸಮರ್ಪಣ ಬುದ್ಧಿಯಿಂದ ಕೂಡಿ ಕರ್ಮಮಾಡುವ ವನಾಗಿ ಶುಭಾಶುಭ ಫಲಗಳನ್ನು ಕೊಡುವ, ನನ್ನ ಪ್ರಾಪ್ತಿಗೆ ವಿರೋಧಿ ಗಳಾದ, ಸಕಲ ಪ್ರಾಚೀನ ಕರ್ಮಗಳೆಂಬ ಬಂಧನಗಳನ್ನು ನೀಗಿ ನನ್ನನ್ನು ಪಡೆಯುವೆ.

(ಸಂಗತಿ : ದುರ್ಲಭ-ಸುಲಭ-ಉತ್ಕೃಷ್ಟ-ಅಪಕೃಷ್ಟಾದಿ ದ್ರವ್ಯ ತಾರ ತಮ್ಯವನ್ನು ಎಣಿಸದೇ ಪತ್ರಪುಷ್ಪಾದಿಗಳನ್ನು ಸ್ವೀಕರಿಸುವುದಾಗಿ ಹೇಳಿ ಅದರಿಂದ ಲೋಕಾತೀತವಾದ ಸೌಲಭ್ಯವನ್ನು ಪ್ರದರ್ಶಿಸಲಾಯಿತು. (26) ಅನಂತರ ಶ್ಲೋಕದಿಂದ, ಮಾಡುವ ಸಕಲ ಕರ್ಮಗಳೂ ಸಮರ್ಪಣ ರೂಪ ಬುದ್ಧಿ ವಿಶೇಷ ಮಾತ್ರದಿಂದಲೇ ಭಗವದಾರಾಧನವಾಗಿ ಸಂಪನ್ನ ವಾಗುವುವೆಂದು ಹೇಳಿ, ಹಿಂದೆ ತೋರಿದ ಸೌಲಭ್ಯವನ್ನೇ ದೃಢೀಕರಿಸ ಲಾಯಿತು. (27) ಬಳಿಕ, ಈ ಮುಂದಿನ ಶ್ಲೋಕದಲ್ಲಿ ಭಕ್ತರ ಜಾತಿ ಆಕಾರ ಸ್ವಭಾವ ಮುಂತಾದ ತಾರತಮ್ಯವನ್ನು ಆದರಿಸದೇ ಅವರೊಡನೆ

ತನಗೆ ಐಕರಸ್ಯವಿರುವುದನ್ನು ಹೇಳಿ, ತನ್ನ ಲೋಕ ವಿಲಕ್ಷಣವಾದ ಸೌಶೀಲ್ಯಾದಿ ಪರಮ ಸ್ವಭಾವವನ್ನು ಪ್ರದರ್ಶಿಸುತ್ತಾನೆ.)

**ಸಮೋಽಹಂ ಸರ್ವಭೂತೇಷು ನ ಮೇ ದ್ವೇಷ್ಯೋಽಸ್ತಿ ನ ಪ್ರಿಯಃ।**
**ಯೇ ಭಜನ್ತಿ ತು ಮಾಂ ಭಕ್ತ್ಯಾ ಮಯಿ ತೇ ತೇಷು ಚಾಪ್ಯಹಂ ॥**

(ನನ್ನನ್ನು ಆಶ್ರಯಿಸುವುದರಲ್ಲಿ) ಎಲ್ಲ ಭೂತಗಳ ವಿಷಯದಲ್ಲಿಯೂ ನಾನು ಸಮದೃಷ್ಟಿಯುಳ್ಳವನು. (ಆಶ್ರಯಿಸುವವರ ಜಾತ್ಯಾಕಾರ ಸ್ವಭಾವ ಜ್ಞಾನಾದಿಗಳ ನಿಮಿತ್ತದಿಂದ) ನನಗೆ ಅಪ್ರಿಯನಾಗಲಿ ಪ್ರಿಯನಾಗಲಿ ಯಾವನೂ ಇಲ್ಲ. ಅನನ್ಯ ಪ್ರಯೋಜನರಾಗಿ ಅತ್ಯರ್ಥ ಪ್ರೀತಿಯಿಂದ ನನ್ನನ್ನು ಭಜಿಸುವವರು ನನ್ನಲ್ಲಿ ಮತ್ತು ನಾನಾದರೂ ಅವರಲ್ಲಿ (ನನಗೆ ಸಮಾನಗುಣವುಳ್ಳವರಂತೆ ಅವರು ಸುಖವಾಗಿ ನನ್ನಲ್ಲಿಯೇ ಇರುವರು. ನಾನೂ ಅವರಲ್ಲಿ ನನಗಿಂತ ಉತ್ಕೃಷ್ಟರಲ್ಲಿ ವರ್ತಿಸುವಂತೆ ವರ್ತಿಸುವೆನು ಎಂದು ಭಾವ.)

(ಸಂಗತಿ : ಹೀಗೆ. ಸಮಾಶ್ರಯಣ ಸ್ವೀಕಾರದಲ್ಲಿ ಜಾತ್ಯಾದ್ಯಪಕರ್ಷವನ್ನು ಆದರಿಸುವುದಿಲ್ಲವೆನ್ನಲಾಯಿತು. ಈಗ ವೃತ್ತಾದ್ಯಪಕರ್ಷವನ್ನೂ ಆದರಿಸುವುದಿಲ್ಲವೆನ್ನುತ್ತಾನೆ.)

**ಅಪಿ ಚೇತ್ಸುದುರಾಚಾರೋ ಭಜತೇ ಮಾಮನನ್ಯಭಾಕ್ ।**
**ಸಾಧುರೇವ ಸ ಮಂತವ್ಯಃ ಸಮ್ಯಗ್ವ್ಯವಸಿತೋ ಹಿ ಸಃ ॥ ೩೦ ॥**

ಅದರಲ್ಲಿಯೂ, ಅತ್ಯಂತ ದುರಾಚಾರಿಯಾದವನೂ ಅನನ್ಯ ಶರಣನಾಗಿ ನನ್ನನ್ನು ಭಜಿಸಿದನಾದರೆ ಅವನು ಭಕ್ತಾಗ್ರೇಸರನೆಂದೇ ಬಗೆಯಬೇಕು ; ಏಕೆಂದರೆ ಅವನು ಯೋಗ್ಯವಾದ ನಿರ್ಧಾರವುಳ್ಳವನು.

(ಸಂಗತಿ : ಇತರರು ಅವನನ್ನು ಹಾಗೆ ಎಷ್ಟಾದರೂ ಗೌರವಿಸಲಿ ; ಆದರೂ ಆಚಾರ ವ್ಯತಿಕ್ರಮದಿಂದ ಆ ದುರಾಚಾರಿಯು ಕೃತಾರ್ಥನಾಗುವುದು ಹೇಗೆ ?—ಎಂದರೆ, ಹೇಳುತ್ತಾನೆ.)

**ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವಚ್ಛಾಂತಿಂ ನಿಗಚ್ಛತಿ ।**
**ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ ಪ್ರಣಶ್ಯತಿ ॥ ೩೧ ॥**

(ನನ್ನ ಭಕ್ತಿಯಲ್ಲಿ ಪ್ರವೃತ್ತನಾದವನು) ಭಜನ ಪ್ರಭಾವದಿಂದ ಪಾಪ ನಿವೃತ್ತಿ ಮತ್ತು ಶಾಶ್ವತವಾದ ವಿರೋಧ ನಿವೃತ್ತಿಗಳನ್ನು ಹೊಂದಿ ಬೇಗನೆ ಪರಿಪೂರ್ಣ ಭಕ್ತಿಯುಳ್ಳವನಾಗುವನು. ಎಲೈ ಕೌಂತೇಯನೇ! ನನ್ನ ಭಕ್ತನಿಗೆ ವಿನಾಶವಿಲ್ಲವೆಂದು ನೀನೇ ಪ್ರತಿಜ್ಞೆ ಮಾಡು.

(ಸಂಗತಿ: "ಅಪಿ ಚೇತ್ಸು ದುರಾಚಾರಃ" ಎಂಬುದು ಆಗಂತುಕ ಪಾಪೋಕ್ತಿ ಮುಂದಿನ ಎರಡು ಶ್ಲೋಕಗಳಿಂದಲಾದರೋ ಜನ್ಮದಿಂದಲೇ ಪಾಪಿಷ್ಠರು ಮತ್ತು ಜಾತ್ಯಾದ್ಯಪಕೃಷ್ಟರಾದವರಿಗೂ ನನ್ನನ್ನು ಆಶ್ರಯಿಸು ವುದರಿಂದ ಮಾತ್ರವೇ ಫಲಸಿದ್ಧಿಯುಂಟೆಂಬುದನ್ನು ವಿಸ್ತರಿಸಿ, ಅದರಿಂದಲೇ ಜಾತ್ಯಾದ್ಯುತ್ಕರ್ಷವೂ ಭಕ್ತಿಪೌಷ್ಕಲ್ಯವೂ ಉಳ್ಳವನಿಗೆ ಕೈಮುತಿಕ ನ್ಯಾಯ ವನ್ನು ತೋರ್ಪಡಿಸಿ, ಜಾತ್ಯಾದ್ಯುತ್ಕೃಷ್ಟನಾದ ನೀನು ಫಲದಲ್ಲಿ ನಿಸ್ಸಂಶಯ ದಿಂದ ಉಪಾಯದಲ್ಲಿ ಪ್ರವರ್ತಿಸು ಎಂದು ಅರ್ಜುನನಿಗೆ ಹೇಳುತ್ತಾನೆ.)

**ಮಾಂ ಹಿ ಪಾರ್ಥವ್ಯಪಾಶ್ರಿತ್ಯ ಯೇಽಪಿ ಸ್ಯುಃ ಪಾಪಯೋನಯಃ ।**
**ಸ್ತ್ರಿಯೋ ವೈಶ್ಯಾಸ್ತಥಾ ಶೂದ್ರಾಸ್ತೇಽಪಿ ಯಾಂತಿ ಪರಾಂಗತಿಂ ॥**

**ಕಿಂ ಪುನರ್ಬ್ರಾಹ್ಮಣಾಃ ಪುಣ್ಯಾ ಭಕ್ತಾ ರಾಜರ್ಷಯಸ್ತಥಾ ।**
**ಅನಿತ್ಯಮಸುಖಂ ಲೋಕಮಿಮಂ ಪ್ರಾಪ್ಯ ಭಜಸ್ವ ಮಾಂ ॥ ೩೩ ॥**

ಸ್ತ್ರೀಯರೂ ವೈಶ್ಯರೂ ಶೂದ್ರರೂ ಪಾಪಯೋನಿಗಳಾದವರೂ ಕೂಡ, ನನ್ನನ್ನು ಆಶ್ರಯಿಸಿ ಪರಮಗತಿಯನ್ನು ಪಡೆಯುವರು, ಎಂದ ಬಳಿಕ ನನ್ನಲ್ಲಿ ಭಕ್ತಿಮಾಡುವ, ಪುಣ್ಯಯೋನಿಗಳಾದ, ಬ್ರಾಹ್ಮಣರು ಮತ್ತು ರಾಜರ್ಷಿಗಳು ಪಡೆಯುವರೆಂದು ಬೇರೆ ಹೇಳಲೇಕೆ? ಆದುದ ರಿಂದ, ಅಸ್ಥಿರವೂ ಸುಖರಹಿತವೂ ಆದ ಈ ಲೋಕದಲ್ಲಿ ಹುಟ್ಟಿರುವ ರಾಜರ್ಷಿಯಾದ ನೀನು ನನ್ನನ್ನು ಭಜಿಸು.

(ಸಂಗತಿ: ಭಕ್ತಿಯ ಸ್ವರೂಪವನ್ನು ಹೇಳುತ್ತಾನೆ.)

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥**

ನನ್ನಲ್ಲಿ ಅತ್ಯಂತ ಪ್ರೀತಿಯುಳ್ಳವನಾಗಿ ಮನಸ್ಸನ್ನಿಡು; ನನಗಾಗಿ ಯಜ್ಞಮಾಡು; ನನ್ನನ್ನು ನಮಸ್ಕರಿಸು. ಹೀಗೆ ಮನಸ್ಸನ್ನು ನನ್ನ ಅನುಭವದಲ್ಲಿ ಸಮರ್ಥವನ್ನಾಗಿ ಮಾಡಿಕೊಂಡು ನನ್ನನ್ನೇ ಆಶ್ರಯಿಸಿದವನಾಗಿ ನನ್ನನ್ನೇ ಪಡೆಯುವೆ.

ಇಲ್ಲಿಗೆ ರಾಜವಿದ್ಯಾ ರಾಜಗುಹ್ಯಯೋಗವೆಂಬ ಒಂಭತ್ತನೆಯ
ಅಧ್ಯಾಯ ಮುಗಿಯಿತು.

---

# ಅಧ್ಯಾಯ ೧೦

## ಗುಣವಿಭೂತಿಗಳ ಆನಂತ್ಯ

(ಸಂಗತಿ : ಸಪರಿಕರವಾಗಿ ಭಕ್ತಿಯೋಗವನ್ನು ಹೇಳಿಯಾಯಿತು. ಈಗ ಭಗವಂತನು, ಆ ಭಕ್ತ್ಯುತ್ಪತ್ತಿ-ವಿವೃದ್ಧಿಗಳಿಗಾಗಿ, ತನ್ನ ಅನಂತ ಕಲ್ಯಾಣಗುಣಗಳನ್ನೂ, ಜಗತ್ತೆಲ್ಲವೂ ಆತ್ಮನಾದ ತನಗೆ ಅಧೀನವೆಂಬು ದನ್ನೂ ವಿಸ್ತರಿಸುತ್ತಾನೆ.)

**ಶ್ರೀ ಭಗವಾನುವಾಚ—**

**ಭೂಯ ಏವ ಮಹಾಬಾಹೋ ಶೃಣು ಮೇ ಪರಮಂ ವಚಃ ।**
**ಯತ್ತೇಽಹಂ ಪ್ರೀಯಮಾಣಾಯ ವಕ್ಷ್ಯಾಮಿ ಹಿತಕಾಮ್ಯಯಾ॥**

ಭಗವಂತನೆಂದನು—

ಎಲೈ ಮಹಾಬಾಹುವೆ! ಮತ್ತೆ ನನ್ನ ಪರಮ ವಚನವನ್ನು ಕೇಳು. (ನನ್ನ ಮಾಹಾತ್ಮ್ಯವನ್ನು ಕೇಳಿ) ಸಂತೋಷಪಡುವ ನಿನಗೆ ಹಿತವನ್ನು ಬಯಸಿ ಇದನ್ನು ಹೇಳುವೆನು.

(ಸಂಗತಿ : ಇನ್ನೂ ಹೆಚ್ಚು ಆದರವನ್ನು ಹುಟ್ಟಿಸುವುದಕ್ಕಾಗಿ, ಹೇಳ ಲಿರುವ ಜ್ಞಾನವು ಅತೀಂದ್ರಿಯಾರ್ಥದರ್ಶಿಗಳೂ ಅಧಿಕತರ ಜ್ಞಾನಿಗಳೂ ಆದ ದೇವತೆಗಳಿಗೂ ಋಷಿಗಳಿಗೂ ಕೂಡ ದುರ್ಲಭವೆನ್ನುತ್ತಾನೆ.)

**ನ ಮೇ ವಿದುಸ್ಸುರಗಣಾಃ ಪ್ರಭವಂ ನ ಮಹರ್ಷಯಃ ।**
**ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂ ಚ ಸರ್ವಶಃ ॥೨॥**

ದೇವತೆಗಳೂ ಮಹರ್ಷಿಗಳೂ ಕೂಡ ನನ್ನ ಪ್ರಭಾವವನ್ನು ಅರಿ ಯರು. ಏಕೆಂದರೆ, ನಾನು ಎಲ್ಲ ಬಗೆಯಿಂದ ದೇವತೆಗಳಿಗೂ ಮಹರ್ಷಿ ಗಳಿಗೂ ಆದಿಯಾಗಿರುವೆನು.

(ಸಂಗತಿ : ಇಂತಹ ತನ್ನ ಯಾಥಾತ್ಮ್ಯವಿಷಯಜ್ಞಾನವು ಭಕ್ತ್ಯುತ್ಪತ್ತಿವಿರೋಧಿಯಾದ ಪಾಪ ವಿಮೋಚನೆಗೆ ಉಪಾಯವೆನ್ನುತ್ತಾನೆ)

**ಯೋಮಾ ಮಜಮನಾದಿಂ ಚ ವೇತ್ತಿ ಲೋಕಮಹೇಶ್ವರಂ ।**
**ಅಸಂಮೂಢಸ್ಸ ಮರ್ತ್ಯೇಷು ಸರ್ವಪಾಪೈಃ ಪ್ರಮುಚ್ಯತೇ ॥**

ನನ್ನನ್ನು ಅಜನು (ಸಂಸಾರಿಗಳಿಗಿಂತ ವಿಲಕ್ಷಣನು) ಅನಾದಿ (ಮುಕ್ತಾತ್ಮರಿಗಿಂತ ವಿಲಕ್ಷಣನು) ಮತ್ತು ಲೋಕಮಹೇಶ್ವರನು (ನಿತ್ಯಾತ್ಮರಿಗಿಂತ ವಿಲಕ್ಷಣನು) ಎಂದು ಮನುಷ್ಯರೊಳಗೆ ಯಾವನು ತಿಳಿಯುತ್ತಾನೆಯೋ ಆ ಜ್ಞಾನಿಯು (ನನ್ನಲ್ಲಿ ಭಕ್ತ್ಯುತ್ಪತ್ತಿಗೆ ವಿರೋಧಿಗಳಾದ) ಎಲ್ಲ ಪಾಪಿಗಳಿಂದಲೂ ಮುಕ್ತನಾಗುವನು.

(ಸಂಗತಿ : ಹೀಗೆ ತನ್ನ ಸ್ವಭಾವ ಸಂಸ್ಮರಣದಿಂದ ಪಾಪನಿರಸನವನ್ನೂ ಅದರಿಂದ ಭಕ್ತ್ಯುತ್ಪತ್ತಿಯಾಗುವುದನ್ನೂ ಪ್ರತಿಪಾದಿಸಿ, ತನ್ನ ಐಶ್ವರ್ಯ ಮತ್ತು ಕಲ್ಯಾಣ ಗುಣಗಣಗಳ ಸಂಸ್ಮರಣದಿಂದ ಭಕ್ತಿಯು ವಿವೃದ್ಧವಾಗುವ ಪ್ರಕಾರವನ್ನು ಹೇಳುತ್ತಾನೆ.)

**ಬುದ್ಧಿರ್ಜ್ಞಾನಮಸಂಮೋಹಃ ಕ್ಷಮಾ ಸತ್ಯಂ ದಮಶ್ಶಮಃ ।**
**ಸುಖಂ ದುಃಖಂ ಭವೋಽಭಾವೋ ಭಯಂ ಚಾ ಭಯಮೇವ ಚ॥**

**ಅಹಿಂಸಾ ಸಮತಾ ತುಷ್ಟಿಸ್ತಪೋ ದಾನಂ ಯಶೋಽಯಶಃ ।**
**ಭವನ್ತಿ ಭಾವಾ ಭೂತಾನಾಂ ಮತ್ತ ಏವ ಪೃಥಗ್ವಿಧಾಃ ॥**

ಬುದ್ಧಿ–(ಮನಸ್ಸಿನ ನಿರೂಪಣ ಸಾಮರ್ಥ್ಯ) ಜ್ಞಾನ–(ಚೇತನಾ ಚೇತನ ವಿಶೇಷ ವಿಷಯಕ ನಿಶ್ಚಯ) ಅಸಮ್ಮೋಹ–(ಭ್ರಮರಾಹಿತ್ಯ) ಕ್ಷಮೆ – (ಕಾರಣಗಳಿದ್ದರೂ ಮನೋವಿಕಾರವನ್ನು ಹೊಂದದಿರುವುದು) ಸತ್ಯ–(ಯಥಾರ್ಥವೂ ಭೂತಹಿತವೂ ಆದ ನುಡಿ) ದಮವು–ಬಾಹ್ಯೇಂದ್ರಿಯ ನಿಗ್ರಹ) ಶಮವು–(ಅಂತಃಕರಣ ನಿಯಮನ) (ಸುಖವು–ಅನುಕೂಲಾನುಭವ) ದುಃಖವು–(ಪ್ರತಿಕೂಲಾನುಭವ) ಭಾವವು–(ಅನುಕೂಲಾನುಭವದಿಂದ ಉಂಟಾಗುವ ಅತಿಸಂತೋಷ) ಅಭಾವವು–(ಪ್ರತಿಕೂಲಾನುಭವದಿಂದುಂಟಾಗುವ ಮನಃಖೇದ) ಭಯವು–(ದುಃಖನಿವೃತ್ತಿ) ಅಹಿಂಸೆ–

(ಪರದುಃಖಕ್ಕೆ ಕಾರಣವಾಗದಿರುವುದು) ಸಮತೆ–(ತನ್ನಲ್ಲಿ ಮಿತ್ರರಲ್ಲಿ ಮತ್ತು ಶತ್ರುಗಳಲ್ಲಿ ಸಮದೃಷ್ಟಿ) ತುಷ್ಟಿ–(ಎಲ್ಲರಲ್ಲಿಯೂ ಸಂತೋಷ ಸ್ವಭಾವದಿಂದ ವರ್ತಿಸುವುದು) ತಪಸ್ಸು – (ಶಾಸ್ತ್ರೀಯ ಕಾಯಕ್ಲೇಶ) ದಾನವು – (ತನ್ನ ಭೋಗ್ಯವಸ್ತುಗಳನ್ನು ಪಾತ್ರಗಳಲ್ಲಿ ಅರ್ಪಿಸುವುದು) ಯಶಸ್ಸು–(ಗುಣವಂತನೆಂಬ ಖ್ಯಾತಿ) ಅಪಯಶಸ್ಸು ಮುಂತಾದ ಭೂತಗಳ ಭಿನ್ನ ಭಿನ್ನ ಮನೋವೃತ್ತಿಗಳು ನನ್ನ ಸಂಕಲ್ಪದಿಂದಲೇ ಉಂಟಾಗುವುವು.

(ಸಂಗತಿ: ಎಲ್ಲ ಭೂತಗಳ ಸೃಷ್ಟಿ ಸ್ಥಿತಿಗಳನ್ನು ನಡೆಸತಕ್ಕವರೂ ನನ್ನ ಸಂಕಲ್ಪದಿಂದಲೇ ಹಾಗೆ ನಡೆಸುತ್ತಾರೆ—ಎಂದು ಮುಂದೆ ಹೇಳುತ್ತಾನೆ.

**ಮಹರ್ಷಯಸ್ಸಪ್ತ ಪೂರ್ವೇ ಚತ್ವಾರೋ ಮನವಸ್ತಥಾ ।**
**ಮದ್ಭಾವಾ ಮಾನಸಾ ಜಾತಾ ಯೇಷಾಂ ಲೋಕ ಇಮಾಃಪ್ರಜಾಃ॥**

(ನಿತ್ಯ ಸೃಷ್ಟಿಯನ್ನು ನಡೆಸುವುದಕ್ಕಾಗಿ) ಕಳೆದ ಮನ್ವಂತರದಲ್ಲಿ ಬ್ರಹ್ಮನ ಮನಸ್ಸಿನಿಂದ ಹುಟ್ಟಿದ ಭೃಗು ಮುಂತಾದ ಸಪ್ತಮಹರ್ಷಿಗಳು ಮತ್ತು (ನಿತ್ಯ ಸ್ಥಿತಿಯನ್ನು ನಡೆಸುವುದಕ್ಕಾಗಿ ದಕ್ಷ ಪುತ್ರಿಯ ಮನಸ್ಸಿನಲ್ಲಿ ಬ್ರಹ್ಮ ಮೊದಲಾದ ನಾಲ್ವರಿಂದ ಜನಿಸಿದ ಬ್ರಹ್ಮಸಾವರ್ಣ, ರುದ್ರಸಾವರ್ಣ, ಧರ್ಮಸಾವರ್ಣ, ದಕ್ಷಸಾವರ್ಣವೆಂಬ) ನಾಲ್ವರು ಮನುಗಳು ನನ್ನ ಸಂಕಲ್ಪವನ್ನೇ ಅನುವರ್ತಿಸುವವರು. ಲೋಕದೊಳಗಿನ ಈ ಪ್ರಜೆಗಳು ಅವರ ಪುತ್ರ ಪೌತ್ರಾದಿಗಳಿಂದ ಹುಟ್ಟಿದರು.

**ಏತಾಂ ವಿಭೂತಿಂ ಯೋಗಂ ಚ ಮಮ ಯೋ ವೇತ್ತಿ ತತ್ತ್ವತಃ ।**
**ಸೋಽವಿಕಂಪ್ಯೇನ ಯೋಗೇನ ಯುಜ್ಯತೇ ನಾತ್ರ ಸಂಶಯಃ ॥**

ಈ ನನ್ನ ಐಶ್ವರ್ಯವನ್ನೂ ಹೇಯರಹಿತ ಕಲ್ಯಾಣಗುಣ ಪೂರ್ತಿಯನ್ನೂ ಸರಿಯಾಗಿ ತಿಳಿದವನು ನಿಶ್ಚಲ (ಎಷ್ಟು ಬಾಧೆಗಳು ಬಂದರೂ ಚಲಿಸದ) ವಾದ ಭಕ್ತಿಯೋಗವನ್ನು ಪಡೆಯುತ್ತಾನೆ. ಇದರಲ್ಲಿ ಸಂಶಯವಿಲ್ಲ.

(ಸಂಗತಿ: ಈ ವಿಭೂತಿ ವಿಷಯವಾದ ಜ್ಞಾನವೇ ಭಕ್ತಿಯಾಗಿ ಪರಿಣಮಿಸುತ್ತದೆಯೆಂದು ಹೇಳುತ್ತಾನೆ.)

**ಅಹಂ ಸರ್ವಸ್ಯ ಪ್ರಭವೋ ಮತ್ತಸ್ಸರ್ವಂ ಪ್ರವರ್ತತೇ ।**
**ಇತಿ ಮತ್ವಾ ಭಜನ್ತೇ ಮಾಂ ಬುಧಾ ಭಾವಸಮನ್ವಿತಾಃ ॥ ೮ ॥**

ನಾನು ಎಲ್ಲವನ್ನೂ ಉತ್ಪತ್ತಿಮಾಡುವವನು, ನನ್ನಿಂದಲೇ ಎಲ್ಲವೂ ಪ್ರವರ್ತಿಸುವುದು ; ಹೀಗೆ ತಿಳಿದು ಜ್ಞಾನಿಗಳು ಭಕ್ತಿಭಾವಯುಕ್ತರಾಗಿ ನನ್ನನ್ನು ಭಜಿಸುವರು.

(ಸಂಗತಿ : ಹೇಗೆ ?)

**ಮಚ್ಚಿತ್ತಾ ಮದ್ಗತಪ್ರಾಣಾಃ ಬೋಧಯನ್ತಃ ಪರಸ್ಪರಂ ।**
**ಕಥಯನ್ತಶ್ಚ ಮಾಂ ನಿತ್ಯಂ ತುಷ್ಯನ್ತಿ ಚ ರಮನ್ತಿ ಚ ॥ ೯ ॥**

ನನ್ನಲ್ಲಿ ಚಿತ್ತವನ್ನಿಟ್ಟು ಪ್ರಾಣಗಳನ್ನು ನನಗೆ ಅರ್ಪಿಸಿದವರು (ನನ್ನನ್ನು ಉಳಿದು ಧರಿಸಲಾಗಗವರು) (ತಾವು ತಾವು ಅನುಭವಿಸಿದ ನನ್ನ ಗುಣಗಳನ್ನು) ಒಬ್ಬರಿಗೊಬ್ಬರು ಬೋಧಿಸುತ್ತ (ನನ್ನ ರಮಣೀಯವಾದ ದಿವ್ಯ ಕರ್ಮಗಳನ್ನು) ಹೇಳುತ್ತ ಸಂತೋಷದಲ್ಲಿಯೂ ಆನಂದದಲ್ಲಿಯೂ ಇರುವರು.

(ಸಂಗತಿ : ಭಗವದ್ಗುಣ ವಿಭೂತಿಗಳ ಜ್ಞಾನದಿಂದ ಭಕ್ತಿಯ ಉತ್ಪತ್ತಿ ಮತ್ತು ವಿವೃದ್ಧಿಗಳನ್ನು ಹೇಳಿದ್ದಾಯಿತು. ಇದರಿಂದ ಭಗವತ್ಪ್ರಾಪ್ತಿಯಾಗುವುದಕ್ಕೆ ಮುಂಚಿತವಾಗಿ ವಿಶದತಮ ಸಾಕ್ಷಾತ್ಕಾರವೆಂಬ ಒಂದು ಅವಾಂತರ ಫಲವೂ ಬರುವುದೆಂದು ಇಲ್ಲಿ ಹೇಳುತ್ತಾನೆ.

**ತೇಷಾಂ ಸತತಯುಕ್ತಾನಾಂ ಭಜತಾಂ ಪ್ರೀತಿಪೂರ್ವಕಂ ।**
**ದದಾಮಿ ಬುದ್ಧಿಯೋಗಂ ತಂ ಯೇನ ಮಾ ಮುಪಯಾಂತಿ ತೇ ॥**

ನನ್ನಲ್ಲಿ ಸತತ ಯೋಗವನ್ನು ಇಚ್ಛಿಸುತ್ತ ನನ್ನನ್ನು ಭಜಿಸುವವರಿಗೆ (ವಿಪಾಕದಶಾಪನ್ನವಾದ) ಅದೇ ಬುದ್ಧಿಯೋಗವನ್ನು ಪ್ರೀತಿಪೂರ್ವಕವಾಗಿ ಕೊಡುವೆನು. ಅದರಿಂದ ಅವರು ನನ್ನೆಡೆಗೆ ಬರುವರು.

(ಸಂಗತಿ : ಮತ್ತೂ ಕೂಡ.)

**ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ ತಮಃ ।**
**ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನ ಭಾಸ್ವತಾ ॥ ೧೧ ॥**

ಆವರನ್ನೇ ಅನುಗ್ರಹಿಸಲು ನಾನು ಅವರ ಮನಸ್ಸಿಗೆ ಗೋಚರನಾಗಿ, (ನನ್ನ ವಿಷಯವಾದ) ಜ್ಞಾನವೆಂಬ ಪ್ರಕಾಶಮಾನವಾದ ದೀಪದಿಂದ (ಪ್ರಾಚೀನ ಕರ್ಮ ರೂಪವಾದ) ಅಜ್ಞಾನದಿಂದ ಹುಟ್ಟಿದ ಅಂಧಕಾರವನ್ನು (ಇತರ ವಿಷಯ ಪ್ರಾವಣ್ಯವನ್ನು) ನಾಶಗೊಳಿಸುವೆನು.

(ಸಂಗತಿ : ಹೀಗೆ ಎಲ್ಲಕ್ಕಿಂತ ವಿಲಕ್ಷಣವೂ, ಭಗವಂತನಿಗೇ ಅಸಾಧಾರಣವೂ, ಕೇಳುವವರಿಗೆ ನಿರತಿಶಯಾನಂದಕರವೂ ಆದ ಕಲ್ಯಾಣಗುಣ ಯೋಗ ಮತ್ತು ನಿರಂಕುಶೈಶ್ವರ್ಯಗಳನ್ನು ಕೇಳಿ ಅದನ್ನು ವಿಸ್ತಾರವಾಗಿ ಕೇಳಲಿಚ್ಛೆಯಿಂದ ಅರ್ಜುನನು ಹೇಳಿದನು.)

**ಅರ್ಜುನ ಉವಾಚ—**

**ಪರಂ ಬ್ರಹ್ಮ ಪರಂ ಧಾಮ ಪವಿತ್ರಂ ಪರಮಂ ಭವಾನ್ ।**

ಪರಬ್ರಹ್ಮ, ಪರಂಜ್ಯೋತಿ, ಪರಮಪವಿತ್ರ—ಎಂಬುದಾಗಿ ಶ್ರುತಿಯು ಹೇಳುವವನು ನೀನು.

(ಸಂಗತಿ : ಶ್ರುತಿಸಿದ್ಧವಾದ ಇದೇ ಅರ್ಥವು ಮಹರ್ಷಿಗಳ ಮತ್ತು ಸರ್ವಜ್ಞನಾದ ಭಗವಂತನ ಮಾತುಗಳಿಂದಲೂ ಸಿದ್ಧವಾದುದೆಂದು ಮುಂದೆ ಹೇಳುತ್ತಾನೆ.)

**ಪುರುಷಂ ಶಾಶ್ವತಂ ದಿವ್ಯಮಾದಿದೇವಮಜಂ ವಿಭುಂ ॥ ೧೨ ॥**

**ಆಹುಸ್ತ್ವಾಂ ಋಷಯಸ್ಸರ್ವೇ ದೇವರ್ಷಿರ್ನಾರದಸ್ತಥಾ ।**
**ಅಸಿತೋ ದೇವಲೋ ವ್ಯಾಸಃ ಸ್ವಯಂ ಚೈವ ಬ್ರವೀಷಿ ಮೇ ॥**

ನಿನ್ನನ್ನು ನಿತ್ಯನು ಮತ್ತು ಪರಮಾಕಾಶದಲ್ಲಿರುವವನೂ ಆದ ಪುರುಷನೆಂದೂ, ಜಗತ್ಕಾರಣ ಭೂತನು, ಕರ್ಮಕೃತ ಜನ್ಮಾದಿಗಳಿಲ್ಲದವನು ಮತ್ತು ವಿಭು ಎಂದೂ ಎಲ್ಲ ಋಷಿಗಳೂ ದೇವರ್ಷಿಯಾದ ನಾರದನೂ ಅಸಿತನೂ ದೇವಲನೂ ಮತ್ತು ವ್ಯಾಸನೂ ಹೇಳುತ್ತಾರೆ. ನೀನೂ ಹಾಗೆಯೇ ನನಗೆ ಹೇಳುವೆ.

**ಸರ್ವಮೇತದೃತಂ ಮನ್ಯೇ ಯನ್ಮಾಂ ವದಸಿ ಕೇಶವ ।**
**ನ ಹಿ ತೇ ಭಗವನ್ ವ್ಯಕ್ತಿಂ ವಿದುರ್ದೇವಾ ನ ದಾನವಾಃ ॥ ೧೪ ॥**

(ಹೀಗೆ ಆಪ್ತತಮವಾದ ವೇದಗಳಿಂದಲೂ ಪರಾವರತತ್ತ್ವಯಾಥಾತ್ಮ್ಯವಿದರಾದ ಮಹರ್ಷಿಗಳಿಂದಲೂ ಮತ್ತು ಸರ್ವಜ್ಞನಾದ ನಿನ್ನಿಂದಲೂ ಹೇಳಲ್ಪಟ್ಟಿರುವುದರಿಂದ) ನೀನು ಹೇಳುವುದೆಲ್ಲವನ್ನೂ ಸತ್ಯವೆಂದು ನಾನು ತಿಳಿಯುತ್ತೇನೆ. ಭಗವಂತನೆ! ನೀನು ಪ್ರಕಾಶಿಸುವ ಪ್ರಕಾರವನ್ನು ದೇವತೆಗಳೂ ಅರಿಯರು, ದಾನವರೂ ಅರಿಯರು. (ಏಕೆಂದರೆ, ಅವರು ಪರಿಮಿತಜ್ಞಾನರೆಂದು ಭಾವ.)

(ಸಂಗತಿ: ದೇವಾದಿಗಳಿಗೆ ಭಗವದ್ವೈಭವವನ್ನು ಹೇಳಲು ಯೋಗ್ಯತೆಯಿಲ್ಲವೆಂದು ಹೇಳಿ, ಈಗ ಭಗವಂತನೊಬ್ಬನಿಗೇ ತನ್ನ ವೈಭವವನ್ನು ಹೇಳುವ ಯೋಗ್ಯತೆಯಿರುವುದನ್ನು ಹೇಳುತ್ತಾನೆ.

**ಸ್ವಯಮೇವಾತ್ಮನಾಽಽತ್ಮಾನಂ ವೇತ್ಥ ತ್ವಂ ಪುರುಷೋತ್ತಮ ।**
**ಭೂತಭಾವನ ಭೂತೇಶ ದೇವದೇವ ಜಗತ್ಪತೇ ॥ ೧೫ ॥**

ಪುರುಷೋತ್ತಮನೇ, ಭೂತಗಳೆಲ್ಲವನ್ನೂ ಸೃಜಿಸಿದವನೇ. ಭೂತಗಳಿಗೆಲ್ಲ ನಿಯಾಮಕನೇ, ದೇವತೆಗಳಿಗೂ ಪರಮದೈವತವಾದವನೇ, ಜಗತ್ಸ್ವಾಮಿಯೇ, ನಿನ್ನನ್ನು ನೀನೇ ಸ್ವಂತ ಜ್ಞಾನದಿಂದಲೇ ಅರಿತಿರುವೆ.

**ವಕ್ತುಮರ್ಹಸ್ಯಶೇಷೇಣ ದಿವ್ಯಾ ಹ್ಯಾತ್ಮವಿಭೂತಯಃ ।**
**ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯ ತಿಷ್ಠಸಿ ॥**

ಯಾವ ವಿಭೂತಿಗಳಿಂದ (ನಿಯಮನ ವಿಶೇಷಗಳಿಂದ) ಕೂಡಿದವನಾಗಿ ಈ ಲೋಕಗಳನ್ನು ನೀನು ವ್ಯಾಪಿಸಿ ನಿಂತಿರುವೆಯೋ ಆ ದಿವ್ಯವಾದ ನಿನ್ನ ವಿಭೂತಿಗಳನ್ನು ನನಗೆ ಸಂಪೂರ್ಣವಾಗಿ ತೋರಿಸು.

**ಕಥಂ ವಿದ್ಯಾಮಹಂ ಯೋಗೀ ತ್ವಾಂ ಸದಾ ಪರಿಚಿಂತಯನ್ ।**
**ಕೇಷು ಕೇಷು ಚ ಭಾವೇಷು ಚಿಂತ್ಯೋಽಸಿ ಭಗವನ್ ಮಯಾ ॥**

ಭಗವಂತನೇ! ಭಕ್ತಿಯೋಗನಿಷ್ಠನಾಗಿ ಸದಾ ನಿನ್ನನ್ನು ಚಿಂತಿಸಲು ಪ್ರವೃತ್ತನಾದ ನಾನು ಪರಿಪೂರ್ಣೈಶ್ವರ್ಯಾದಿ ಕಲ್ಯಾಣಗುಣಗಣನಾದ) ನಿನ್ನನ್ನು ಹೇಗೆ ತಿಳಿಯಲಿ? ಮತ್ತೆ ಯಾವ ಯಾವ ಭಾವಗಳಲ್ಲಿ ನಾನು ನಿನ್ನನ್ನು ಚಿಂತಸಬೇಕು.

**ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ ಜನಾರ್ದನ ।**
**ಭೂಯಃ ಕಥಯ ತೃಪ್ತಿರ್ಹಿ ಶೃಣ್ವತೋ ನಾಸ್ತಿ ಮೇಽಮೃತಂ ॥**

"ಅಹಂ ಸರ್ವಸ್ಯ ಪ್ರಭವಃ . . ."—(10-8) ಇತ್ಯಾದಿಯಾಗಿ ಸಂಕ್ಷೇಪದಿಂದ ಹೇಳಿದ ನಿನ್ನ (ಸ್ರಷ್ಟೃತ್ವಾದಿ) ಯೋಗವನ್ನೂ ವಿಭೂತಿಯನ್ನೂ ಮತ್ತೊಮ್ಮೆ ವಿಸ್ತಾರವಾಗಿ ಹೇಳು. ಏಕೆಂದರೆ ನಿನ್ನ ಮಾಹಾತ್ಮ್ಯಾಮೃತವನ್ನು ಕೇಳುತ್ತಿರುವ ನನಗೆ ತೃಪ್ತಿಯಿಲ್ಲ.

**ಶ್ರೀ ಭಗವಾನುವಾಚ—**

**ಹನ್ತ ತೇ ಕಥಯಿಷ್ಯಾಮಿ ವಿಭೂತೀರಾತ್ಮನಶ್ಶುಭಾಃ ।**
**ಪ್ರಾಧಾನ್ಯತಃ ಕುರುಶ್ರೇಷ್ಠ ನಾಸ್ತ್ಯನ್ತೋ ವಿಸ್ತರಸ್ಯ ಮೇ ॥ ೧೯ ॥**

ಭಗವಂತನು ಹೇಳಿದನು—

ಆಗಲಿ, (ಅನಸೂಯುತ್ವ, ಪ್ರೀಯಮಾಣತ್ವ, ಅತೃಪ್ತತ್ವಾದಿ ಗುಣಪೂರ್ಣನಾದ) ನಿನಗೆ ಮಂಗಳಕರವಾದ ನನ್ನ ವಿಭೂತಿ (ನಿಯಾಮ್ಯವರ್ಗ)ಗಳಲ್ಲಿ ಉತ್ಕೃಷ್ಟವಾದ ಕೆಲವನ್ನು ಹೇಳುವೆನು. ಎಲೈ ಕುರುಶ್ರೇಷ್ಠನೇ! ನನ್ನ ವಿಸ್ತಾರಕ್ಕೆ ಕೊನೆಯಿಲ್ಲ.

(ಸಂಗತಿ : "ವಿಸ್ತರೇಣಾತ್ಮನೋ ಯೋಗಂ ವಿಭೂತಿಂ ಚ" ಎಂಬಲ್ಲಿ ಪ್ರಶ್ನಿಸಿದ ಯೋಗ ಮತ್ತು ವಿಭೂತಿಗಳಲ್ಲಿ, "ವಿಭೂತಿ" (ನಿಯಮನ) ಯೆಂಬುದು ತಾನು ಎಲ್ಲಕ್ಕೂ ಆತ್ಮವಾಗಿರೋಣದರಿಂದ—ಎಂದೂ ಯೋಗವೆಂದರೆ ಸ್ರಷ್ಟೃತ್ವ, ಪಾಲಕತ್ವ, ಸಂಹರ್ತೃತ್ವಗಳೆಂದೂ ಸ್ಪಷ್ಟವಾಗಿ ಮುಂದೆ ಹೇಳುತ್ತಾನೆ. ("ಆತ್ಮಾ" ಎಂದರೆ ಶರೀರಕ್ಕೆ ಸರ್ವಾತ್ಮನಾ ಆಧಾರವು, ನಿಯಂತೃವು ಮತ್ತು ಶೇಷಿಯೆಂದು ಅರ್ಥ.)

**ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ।**
**ಅಹಮಾದಿಶ್ಚ ಮಧ್ಯಂ ಚ ಭೂತಾನಾಮನ್ತ ಏವ ಚ ॥ ೨೦ ॥**

ಎಲೈ ಗುಡಾಕೇಶನೇ : ನಾನು ಎಲ್ಲ ಭೂತಗಳ ಹೃದಯದಲ್ಲಿರುವ ಆತ್ಮನು ಮತ್ತು ಭೂತಗಳ ಆದಿಯೂ, ಮಧ್ಯವು ಮತ್ತು ಅಂತವು ನಾನೇ. (ಅವುಗಳ ಸ್ರಷ್ಟೃವು, ಪಾಲಕನು ಮತ್ತು ಸಂಹರ್ತೃವು ನಾನೇ ಎಂದು ಭಾವ.)

(ಸಂಗತಿ : ಶರೀರವಾಚಿ ಶಬ್ದಗಳೆಲ್ಲವೂ ಶರೀರ (ಆತ್ಮ) ಪರ್ಯಂತ ಅನ್ವಯಿಸುತ್ತವೆ. ಆದುದರಿಂದ ಭಗವಂತನು ತನ್ನವಿಭೂತಿಗಳಾದ ವಸ್ತುಗಳಲ್ಲೆಲ್ಲ ಆತ್ಮನಾಗಿರುವುದೇ ಅವನನ್ನು ಆಯಾ ಶಬ್ದಗಳೊಡನೆ ಸಾಮಾನಾಧಿಕರಣ್ಯದಿಂದ ನಿರ್ದೇಶಿಸಲು ಹೇತುವೆಂದು ಪ್ರತಿಪಾದಿಸಿ, ಅವನ ವಿಭೂತಿ ವಿಶೇಷಗಳನ್ನು ಮುಂದೆ ಸಾಮಾನಾಧಿಕರಣ್ಯದಿಂದ ಹೇಳುತ್ತಾನೆ)

**ಆದಿತ್ಯಾನಾಮಹಂ ವಿಷ್ಣುರ್ಜ್ಯೋತಿಷಾಂ ರವಿರಂಶುಮಾನ್ ।**
**ಮರೀಚಿರ್ಮರುತಾಮಸ್ಮಿ ನಕ್ಷತ್ರಾಣಾಮಹಂ ಶಶೀ ॥ ೨೧ ॥**

ಹನ್ನೆರಡು ಮಂದಿ ಆದಿತ್ಯರೊಳಗೆ ಉತ್ಕೃಷ್ಟನಾದ ವಿಷ್ಣುವೆಂಬುವನು ನಾನು. ಪ್ರಕಾಶಕರವಾದವುಗಳೊಳಗೆ ತೇಜಸ್ವಿಯಾದ ಸೂರ್ಯನು ನಾನು. ಮರುತ್ತುಗಳಲ್ಲಿ ನಾನು ಮರೀಚಿ, ನಕ್ಷತ್ರಗಳಿಗೆ ಪತಿಯಾದ ಚಂದ್ರನು ನಾನು.

**ವೇದಾನಾಂ ಸಾಮವೇದೋಽಸ್ಮಿ ದೇವಾನಾಮಸ್ಮಿ ವಾಸವಃ ।**
**ಇಂದ್ರಿಯಾಣಾಂ ಮನಶ್ಚಾಸ್ಮಿ ಭೂತಾನಾಮಸ್ಮಿ ಚೇತನಾ ॥೨೨॥**

ವೇದಗಳಲ್ಲಿ ಸಾಮವೇದವು ನಾನು; ಸ್ವರ್ಗವಾಸಿಗಳಲ್ಲಿ ಇಂದ್ರನು ನಾನು; ಇಂದ್ರಿಯಗಳಲ್ಲಿ ಮನಸ್ಸು ನಾನು; ಚೇತನರೊಳಗಿರುವ ಚೇತನವು ನಾನು.

**ರುದ್ರಾಣಾಂ ಶಂಕರಶ್ಚಾಸ್ಮಿ ವಿತ್ತೇಶೋ ಯಕ್ಷರಕ್ಷಸಾಂ ।**
**ವಸೂನಾಂ ಪಾವಕಶ್ಚಾಸ್ಮಿ ಮೇರುಶ್ಶಿಖರಿಣಾಮಹಂ ॥ ೨೩ ॥**

ರುದ್ರರಲ್ಲಿ ನಾನು ಶಂಕರನು. ಯಕ್ಷರಾಕ್ಷಸರಲ್ಲಿ ನಾನು ಕುಬೇರನು; ವಸುಗಳಲ್ಲಿ ನಾನು ಅಗ್ನಿ, (ಶಿಖರಗಳಿಂದ ಶೋಭಿಸುವ) ಪರ್ವತಗಳಲ್ಲಿ ನಾನು ಮೇರು.

**ಪುರೋಧಸಾಂ ಚ ಮುಖ್ಯಂ ಮಾಂ ವಿದ್ಧಿ ಪಾರ್ಥ ಬೃಹಸ್ಪತಿಂ ।**
**ಸೇನಾನೀನಾಮಹಂ ಸ್ಕಂದಃ ಸರಸಾಮಸ್ಮಿ ಸಾಗರಃ ॥ ೨೪ ॥**

ನನ್ನನ್ನು ಪುರೋಹಿತರಲ್ಲಿ ಮುಖ್ಯನಾದ ಬೃಹಸ್ಪತಿ ಎಂದು ತಿಳಿ, ಸೇನಾಪತಿಗಳಲ್ಲಿ ನಾನು ಸ್ಕಂದನು; ಜಲಾಶಯಗಳಲ್ಲಿ ನಾನು ಸಮುದ್ರವು.

**ಮಹರ್ಷೀಣಾಂ ಭೃಗುರಹಂ ಗಿರಾಮಸ್ಮ್ಯೇಕಮಕ್ಷರಂ ।**
**ಯಜ್ಞಾನಾಂ ಜಪಯಜ್ಞೋಽಸ್ಮಿ ಸ್ಥಾವರಾಣಾಂ ಹಿಮಾಲಯಃ॥**

ಮಹರ್ಷಿಗಳಲ್ಲಿ ನಾನು ಭೃಗು; ವಾಕ್ಕುಗಳಲ್ಲಿ ಏಕಾಕ್ಷರವಾದ ಪ್ರಣವವು; ಯಜ್ಞಗಳಲ್ಲಿ ನಾನು ಜಪಯಜ್ಞವು; ಸ್ಥಾವರಗಳಲ್ಲಿ (ಪರ್ವತಮಾತ್ರಗಳಲ್ಲಿ) ನಾನು ಹಿಮಾಲಯವು.

**ಅಶ್ವತ್ಥಸ್ಸರ್ವವೃಕ್ಷಾಣಾಂ ದೇವರ್ಷೀಣಾಂ ಚ ನಾರದಃ ।**
**ಗನ್ಧರ್ವಾಣಾಂ ಚಿತ್ರರಥಸ್ಸಿದ್ಧಾನಾಂ ಕಪಿಲೋ ಮುನಿಃ ॥ ೨೬ ॥**

**ಉಚ್ಚೈಶ್ಶ್ರವಸಮಶ್ವಾನಾಂ ವಿದ್ಧಿ ಮಾಮಮೃತೋದ್ಭವಂ ।**
**ಐರಾವತಂ ಗಜೇಂದ್ರಾಣಾಂ ನರಾಣಾಂ ಚ ನರಾಧಿಪಂ ॥ ೨೭ ॥**

**ಆಯುಧಾನಾಮಹಂ ವಜ್ರಂ ಧೇನೂನಾಮಸ್ಮಿ ಕಾಮಧುಕ್ ।**
**ಪ್ರಜನಶ್ಚಾಸ್ಮಿ ಕಂದರ್ಪಃ ಸರ್ಪಾಣಾಮಸ್ಮಿ ವಾಸುಕಿಃ ॥ ೨೮ ॥**

**ಅನಂತಶ್ಚಾಸ್ಮಿ ನಾಗಾನಾಂ ವರುಣೋ ಯಾದಸಾಮಹಂ ।**
**ಪಿತೄಣಾಮರ್ಯಮಾ ಚಾಸ್ಮಿ ಯಮಸ್ಸಂಯಮತಾಮಹಂ ॥ ೨೯ ॥**

ವೃಕ್ಷಗಳೊಳಗೆಲ್ಲ (ಪೂಜ್ಯವಾದ) ಅಶ್ವತ್ಥವು ನಾನು; ದೇವರ್ಷಿಗಳಲ್ಲಿ ನಾನು ನಾರದನು; ಗಂಧರ್ವರಲ್ಲಿ ನಾನು ಚಿತ್ರರಥನು; ಸಿದ್ಧರಲ್ಲಿ ಕಪಿಲಮುನಿಯು

ಅಶ್ವಗಳಲ್ಲಿ ಅಮೃತದಿಂದ ಹುಟ್ಟಿದ ಉಚ್ಚೈಶ್ಶ್ರವಸ್ಸೂ, ಶ್ರೇಷ್ಠ ಗಜಗಳಲ್ಲಿ ಐರಾವತವೂ ಮನುಷ್ಯರಲ್ಲಿ ರಾಜನೂ ನಾನೆಂದು ತಿಳಿ.

ಆಯುಧಗಳಲ್ಲಿ ನಾನು ವಜ್ರವು; ಆಕಳುಗಳಲ್ಲಿ ನಾನು ಕಾಮಧೇನುವು; ಜನನ ಹೇತುವಾದ ಕಂದರ್ಪ (ಮನ್ಮಥ) ನು ನಾನು. ಸರ್ಪ (ಒಂದು ತಲೆಯುಳ್ಳವು) ಗಳಲ್ಲಿ ವಾಸುಕಿಯು ನಾನು.

ನಾಗ (ಅನೇಕ ತಲೆಗಳುಳ್ಳವು) ಗಳಲ್ಲಿ ನಾನು ಅನಂತನು; ಜಲವಾಸಿಗಳಲ್ಲಿ ನಾನು ವರುಣನು; ಪಿತೃಗಳಲ್ಲಿ ರಾಜನಾದ ಅರ್ಯಮನು ನಾನು; ವರುಣನು; ದಂಡಧರರಲ್ಲಿ ನಾನು ಯಮನು.

**ಪ್ರಹ್ಲಾದಶ್ಚಾಸ್ಮಿ ದೈತ್ಯಾನಾಂ ಕಾಲಃ ಕಲಯತಾ ಮಹಂ ।**
**ಮೃಗಾಣಾಂ ಚ ಮೃಗೇನ್ದ್ರೋಽಹಂ ವೈನತೇಯಶ್ಚ ಪಕ್ಷಿಣಾಂ ॥**

ದೈತ್ಯರಲ್ಲಿ ನಾನು ಪ್ರಹ್ಲಾದನು ; ಅನರ್ಥಗಳಲ್ಲಿ ನಾನು ಮೃತ್ಯುವು-ಮೃಗಗಳಲ್ಲಿ ನಾನು ಸಿಂಹವು ; ಪಕ್ಷಿಗಳಲ್ಲಿ ನಾನು ಗರುಡನು.

**ಪವನಃ ಪವತಾಮಸ್ಮಿ ರಾಮಶ್ಶಸ್ತ್ರಭೃತಾಮಹಂ ।**
**ಝುಷಾಣಾಂ ಮಕರಶ್ಚಾಸ್ಮಿ ಸ್ರೋತಸಾಮಸ್ಮಿ ಜಾಹ್ನವೀ ॥೩೧॥**

ಸದಾಗಮನಶೀಲರಾಗಿರುವವರಲ್ಲಿ ನಾನು ಪವನನು ; ಶಸ್ತ್ರಧಾರಿಗಳಲ್ಲಿ (ಅಮೋಘ ಶಸ್ತ್ರವುಳ್ಳ) ಶ್ರೀರಾಮನು ನಾನು. ಮೀನುಗಳಲ್ಲಿ ನಾನು ಮೊಸಳೆಯು ; ನದಿಗಳಲ್ಲಿ ನಾನು ಗಂಗೆಯು.

**ಸರ್ಗಾಣಾಮಾದಿರಂತಶ್ಚ ಮಧ್ಯಂ ಚೈವಾಹಮರ್ಜುನ ।**
**ಅಧ್ಯಾತ್ಮವಿದ್ಯಾ ವಿದ್ಯಾನಾಂ ವಾದಃ ಪ್ರವದತಾಮಹಂ ॥ ೩೨ ॥**

ಸೃಜಿಸಲ್ಪಡುವ ಪ್ರಾಣಿಗಳಿಗೆ ಆಯಾ ಸ್ರಷ್ಟೃಗಳೂ, ಸಂಹರ್ತೃಗಳೂ, ಪಾಲಕರೂ ನಾನೇ; ವಿದ್ಯೆಗಳಲ್ಲಿ ಅಧ್ಯಾತ್ಮವಿದ್ಯೆಯು ನಾನು; ಜಲ್ಪ ವಿತಂಡಾದಿಗಳನ್ನು ಮಾಡುವವರಲ್ಲಿ ತತ್ತ್ವನಿರ್ಣಯಕ್ಕಾಗಿ ಪ್ರವೃತ್ತವಾದ ವಾದವು ನಾನು.

**ಅಕ್ಷರಾಣಾಮಕಾರೋಽಸ್ಮಿ ದ್ವಂದ್ವಸ್ಸಾಮಾಸಿಕಸ್ಯ ಚ ।**
**ಅಹಮೇವಾಕ್ಷಯಃ ಕಾಲಃ ಧಾತಾಽಹಂ ವಿಶ್ವತೋಮುಖಃ ॥೩೩॥**

ಅಕ್ಷರಗಳಲ್ಲಿ (ಅವೆಲ್ಲಕ್ಕೂ ಪ್ರಕೃತಿಯಾದ) ಅಕಾರವು ನಾನು; ಸಮಾಸಸಮುದಾಯದಲ್ಲಿ ದ್ವಂದ್ವವು ನಾನು ; ನಾನೇ ಅಕ್ಷಯವಾದ ಕಾಲವು (ಕಲಾಮುಹೂರ್ತಾದಿಮಯವಾದ ಕಾಲವು) ಎಲ್ಲವನ್ನೂ ಸೃಷ್ಟಿಸುವ ಚತುರ್ಮುಖನಾದ ಹಿರಣ್ಯಗರ್ಭನು ನಾನು.

**ಮೃತ್ಯುಸ್ಸರ್ವಹರಶ್ಚಾಹಂ ಉದ್ಭವಶ್ಚ ಭವಿಷ್ಯತಾಂ ।**
**ಕೀರ್ತಿಶ್ಶ್ರೀರ್ವಾಕ್ಚ ನಾರೀಣಾಂ ಸ್ಮೃತಿರ್ಮೇಧಾ ಧೃತಿಃ ಕ್ಷಮಾ ॥**

ಸರ್ವಪ್ರಾಣಹರನಾದ ಮೃತ್ಯುವು ನಾನು ; ಹುಟ್ಟುವವುಗಳಲ್ಲಿ

ಉತ್ಪತ್ತಿಕ್ರಿಯೆಯು ನಾನು; ಸ್ತ್ರೀಯರಲ್ಲಿ ಲಕ್ಷ್ಮೀ, ಕೀರ್ತಿ, ವಾಣೀ, ಸ್ಮೃತಿ, ಮೇಧೆ (ಬುದ್ಧಿ), ಧೃತಿ, ಕ್ಷಮೆ – ನಾನು.

**ಬೃಹತ್ಸಾಮ ತಥಾ ಸಾಮ್ನಾಂ ಗಾಯತ್ರೀ ಛಂದಸಾಮಹಂ ।**
**ಮಾಸಾನಾಂ ಮಾರ್ಗಶೀರ್ಷೋಽಹಮ್ ಋತೂನಾಂ ಕುಸುಮಾಕರಃ**

ಸಾಮಗಳಲ್ಲಿ ನಾನು ಬೃಹತ್ಸಾಮವು ; ಛಂದಸ್ಸುಗಳಲ್ಲಿ ನಾನು ಗಾಯತ್ರಿಯು ; ತಿಂಗಳುಗಳಲ್ಲಿ ನಾನು ಮಾರ್ಗಶೀರ್ಷವು ; ಋತುಗಳಲ್ಲಿ ನಾನು ವಸಂತವು.

**ದ್ಯೂತಂ ಛಲಯತಾಮಸ್ಮಿ ತೇಜಸ್ತೇಜಸ್ವಿನಾಮಹಂ ।**
**ಜಯೋಽಸ್ಮಿ ವ್ಯವಸಾಯೋಽಸ್ಮಿ ಸತ್ತ್ವಂ ಸತ್ತ್ವವತಾಮಹಂ ॥**

ಮೋಸಗಾರರಲ್ಲಿ ಜೂಜು ನಾನು; ತೇಜಸ್ವಿಗಳಲ್ಲಿ ತೇಜಸ್ಸು ನಾನು; (ಜೇತೃಗಳ) ಜಯವು ನಾನು ; (ವ್ಯವಸಾಯಿಗಳ) ವ್ಯವಸಾಯವು (ನಿಶ್ಚಯವು) ನಾನು ; ಸತ್ತ್ವವಂತರ ಸತ್ತ್ವವು (ಮಹಾ ಮನಸ್ಸಿನ ಗುಣವು) ನಾನು.

**ವೃಷ್ಣೀನಾಂ ವಾಸುದೇವೋಽಸ್ಮಿ ಪಾಂಡವಾನಾಂ ಧನಂಜಯಃ ।**
**ಮುನೀನಾಮಪ್ಯಹಂ ವ್ಯಾಸಃ ಕವೀನಾಮುಶನಾ ಕವಿಃ ॥ ೩೭ ॥**

ವೃಷ್ಣಿಗಳಲ್ಲಿ ನಾನು ವಾಸುದೇವನು ; ಪಾಂಡವರಲ್ಲಿ ಅರ್ಜುನನು ; ಮುನಿಗಳಲ್ಲಿಯೂ ನಾನು ವ್ಯಾಸಮುನಿಯು ; ವಿದ್ವಾಂಸರಲ್ಲಿ ನಾನು ಶುಕ್ರಾಚಾರ್ಯನು.

**ದಂಡೋ ದಮಯತಾಮಸ್ಮಿ ನೀತಿರಸ್ಮಿ ಜಿಗೀಷತಾಂ ।**
**ಮೌನಂ ಚೈವಾಸ್ಮಿ ಗುಹ್ಯಾನಾಂ ಜ್ಞಾನಂ ಜ್ಞಾನವತಾಮಹಂ ॥**

(ನಿಯಮಾತಿಕ್ರಮಣಮಾಡಿದವರನ್ನು) ದಂಡಿಸುವವರ ದಂಡವು ನಾನು ; ಜಯವನ್ನು ಬಯಸುವವರಿಗೆ ಜಯೋಪಾಯಭೂತವಾದ ನೀತಿಯು ನಾನು ; ಗುಹ್ಯವಾದವುಗಳಲ್ಲಿ ಮೌನವು ನಾನು ; ಜ್ಞಾನಿಗಳ ಜ್ಞಾನವು ನಾನು.

**ಯಚ್ಚಾಪಿ ಸರ್ವಭೂತಾನಾಂ ಬೀಜಂ ತದಹಮರ್ಜುನ ।**
**ನ ತದಸ್ತಿ ವಿನಾ ಯತ್ಸ್ಯಾನ್ಮಯಾ ಭೂತಂ ಚರಾಚರಂ ॥೩೯॥**

ಮತ್ತು ಎಲ್ಲ ಭೂತಗಳಿಗೂ ಯಾವುದು ಬೀಜವೋ ಅದು ನಾನು; ನಾನಿಲ್ಲದ ಚರಾಚರವಾದ ಯಾವುದೂ ಇಲ್ಲ.

**ನಾನ್ತೋಽಸ್ತಿ ಮಮ ದಿವ್ಯಾನಾಂ ವಿಭೂತೀನಾಂ ಪರನ್ತಪ ।**
**ಏಷ ತೂದ್ದೇಶತಃ ಪ್ರೋಕ್ತೋ ವಿಭೂತೇರ್ವಿಸ್ತರೋ ಮಯಾ ॥**

ಎಲೈ ಅರ್ಜನನೇ! ನನ್ನ ಶುಭವಿಭೂತಿಗಳಿಗೆ ಅಂತವಿಲ್ಲ. ಈ ವಿಭೂತಿಯ ವಿಸ್ತಾರವನ್ನು ಸಂಕ್ಷೇಪವಾಗಿ ನಾನು ಹೇಳಿರುವೆನು.

**ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತಮೇವ ವಾ ।**
**ತತ್ತದೇವಾವಗಚ್ಛ ತ್ವಂ ಮಮ ತೇಜೋಽಂಶಸಂಭವಂ ॥ ೪೧ ॥**

ಯಾವ ಯಾವ ಜಂತುವು ವಿಭೂತಿಯುಕ್ತವೋ, ಲಕ್ಷ್ಮೀಯುಕ್ತವೋ, ಅಥವಾ ಶುಭಕಾರ್ಯಗಳಲ್ಲಿ ಉದ್ಯುಕ್ತವೋ ಅದೆಲ್ಲವೂ ನನ್ನ ನಿಯಮನ ಶಕ್ತಿಯ ಏಕದೇಶದಿಂದ ಹುಟ್ಟಿರುವುದೆಂದು ತಿಳಿ.

**ಅಥವಾ ಬಹುನೈತೇನ ಕಿಂ ಜ್ಞಾತೇನ ತವಾರ್ಜುನ ।**
**ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ ಜಗತ್ ॥೪೨॥**

ಅಥವಾ, ಅರ್ಜುನನೇ! ಇಷ್ಟು ವಿಸ್ತಾರವಾಗಿ ತಿಳಿದಾದರೂ ನೀನು ಮಾಡುವುದೇನು? ನನ್ನ ಮಹಿಮೆಯ ಒಂದು ಅಂಶಮಾತ್ರದಿಂದ ಈ ಜಗತ್ತೆಲ್ಲವನ್ನೂ ವ್ಯಾಪಿಸಿ ಧರಿಸಿದ್ದೇನೆ.

ಇಲ್ಲಿಗೆ ವಿಭೂತಿ ವಿಸ್ತರಯೋಗವೆಂಬ ಹತ್ತನೆಯ
ಅಧ್ಯಾಯ ಮುಗಿಯಿತು.

---

ಅಧ್ಯಾಯ ೧೧

# ವೈಶ್ವರೂಪ್ಯ ದರ್ಶನೋಪಾಯ

(ಸಂಗತಿ: ಹೀಗೆ ಭಗವಂತನ ಅಸಾಧಾರಣ ಸ್ವಭಾವವನ್ನೂ, ನಿರಂಕುಶೈಶ್ವರ್ಯವನ್ನೂ ಕೇಳಿದಮೇಲೆ ಅದನ್ನು ಹಾಗೆಯೇ ಸಾಕ್ಷಾತ್ಕರಿಸ ಲಿಚ್ಛೆಯಿಂದ ಅರ್ಜುನನು ಹೇಳಿದನು.)

**ಅರ್ಜುನ ಉವಾಚ—**

**ಮದನುಗ್ರಹಾಯ ಪರಮಂ ಗುಹ್ಯಮಧ್ಯಾತ್ಮಸಂಜ್ಞಿತಂ ।**
**ಯತ್ತ್ವಯೋಕ್ತಂ ವಚಸ್ತೇನ ಮೋಹೋಽಯಂ ವಿಗತೋ ಮಮ॥**

(ದೇಹಾಭಿಮಾನದಿಂದ ಮೋಹಿತನಾಗಿದ್ದ) ನನ್ನ ಅನುಗ್ರಹಕ್ಕಾಗಿಯೇ ("ನತ್ವೇವಾಹಂ ಜಾತುನಾಸಂ (2–12") ಎಂಬುದರಿಂದ–"ತಸ್ಮಾದ್ಯೋಗೀ ಭವಾರ್ಜುನ" (6–46) ಎಂಬಲ್ಲಿಯವರಿಗೂ) ನೀನು ಹೇಳಿದ ಪರಮರಹಸ್ಯವಾದ ಅಧ್ಯಾತ್ಮ ವಿಷಯದಿಂದ ಆತ್ಮವಿಷಯದಲ್ಲಿ ನನಗೆ ಇದ್ದ ಮೋಹವು ಹೋಯಿತು.

**ಭವಾಪ್ಯಯೌ ಹಿ ಭೂತಾನಾಂ ಶ್ರುತೌ ವಿಸ್ತರಶೋ ಮಯಾ ।**
**ತ್ವತ್ತಃ ಕಮಲಪತ್ರಾಕ್ಷ ಮಹಾತ್ಮ್ಯಮಪಿ ಚಾವ್ಯಯಂ ॥ ೨ ॥**

(ಹಾಗೂ) ಎಲೈ ಶ್ರೀಕೃಷ್ಣನೇ! (ಏಳರಿಂದ ಹತ್ತನೆಯ ಅಧ್ಯಾಯದವರಿಗೂ) ಭೂತಗಳಿಗೆ ನಿನ್ನಿಂದಾಗುವ ಉತ್ಪತ್ತಿವಿನಾಶಗಳನ್ನೂ ಮತ್ತು ನಿನ್ನ ಅವಿನಾಶಿ ಮಾಹಾತ್ಮ್ಯವನ್ನೂ ವಿಸ್ತಾರವಾಗಿ ಕೇಳಿದೆ.

**ಏವಮೇತದ್ಯಥಾಽಽತ್ಥತ್ವಂ ಆತ್ಮಾನಂ ಪರಮೇಶ್ವರ ।**
**ದ್ರಷ್ಟುಮಿಚ್ಛಾಮಿ ತೇ ರೂಪ ಮೈಶ್ವರಂ ಪುರುಷೋತ್ತಮ ॥ ೩ ॥**

ಪರಮೇಶ್ವರನೇ, ನೀನು ನಿನ್ನ ವಿಷಯದಲ್ಲಿ ನುಡಿದಂತೆಯೇ ಇರುವೆ. ಪುರುಷೋತ್ತಮನೇ, ನಿನ್ನ ಅಸಾಧಾರಣ ರೂಪವನ್ನು ನೋಡಲು ಬಯಸುತ್ತೇನೆ.

**ಮನ್ಯಸೇ ಯದಿ ತಚ್ಛಕ್ಯಂ ಮಯಾ ದ್ರಷ್ಟುಮಿತಿ ಪ್ರಭೋ ।**
**ಯೋಗೇಶ್ವರ ತತೋ ಮೇ ತ್ವಂ ದರ್ಶಯಾತ್ಮಾನಮವ್ಯಯಂ ॥**

ಪ್ರಭುವೇ, ಯೋಗೇಶ್ವರನೇ! ಆ ರೂಪವನ್ನು ನೋಡಲು ನನಗೆ ಶಕ್ಯವೆಂದು ನಿನಗೆ ತೋರಿದರೆ ನಿನ್ನನ್ನು ಸಂಪೂರ್ಣವಾಗಿ ನನಗೆ ತೋರಿಸು.

(ಸಂಗತಿ : ಹೀಗೆ ಕುತೂಹಲ ಮತ್ತು ಹರ್ಷಗಳಿಂದ ಗದ್ಗದಕಂಠ ನಾಗಿ ಬೇಡಿದ ಅರ್ಜುನನಿಗೆ ಭಗವಂತನು ಹೇಳಿದನು.)

**ಶ್ರೀ ಭಗವಾನುವಾಚ—**

**ಪಶ್ಯ ಮೇ ಪಾರ್ಥ ರೂಪಾಣಿ ಶತಶೋಽಥ ಸಹಸ್ರಶಃ ।**
**ನಾನಾವಿಧಾನಿ ದಿವ್ಯಾನಿ ನಾನಾವರ್ಣಾಕೃತೀನಿ ಚ ॥ ೫ ॥**

ಪಾರ್ಥನೇ, ನನ್ನ ನೂರಾರು, ಸಾವಿರಾರು, ನಾನಾವಿಧದ, ದಿವ್ಯ ವಾದ, ನಾನಾವರ್ಣದ ಮತ್ತು ನಾನಾ ಆಕೃತಿಯ ರೂಪಗಳನ್ನು ನೋಡು.

**ಪಶ್ಯಾದಿತ್ಯಾನ್ವಸೂನ್ ರುದ್ರಾನಶ್ವಿನೌ ಮರುತಸ್ತಥಾ ।**
**ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ ॥ ೬ ॥**

ಅರ್ಜುನನೇ, (ನನ್ನ ಒಂದುರೂಪದಲ್ಲಿ) ಆದಿತ್ಯರನ್ನೂ ವಸುಗಳನ್ನೂ ರುದ್ರರನ್ನೂ ಇಬ್ಬರು ಅಶ್ವಿನಿಗಳನ್ನೂ ಮರುತ್ತುಗಳನ್ನೂ ಈ ವರೆಗೆ ನೀನು ಕಂಡಿರದ ಅನೇಕ ಆಶ್ಚರ್ಯಗಳನ್ನೂ ನೋಡು.

**ಇಹೈಕಸ್ಥಂ ಜಗತ್ಕೃತ್ಸ್ನಂ ಪಶ್ಯಾದ್ಯ ಸಚರಾಚರಂ ।**
**ಮಮ ದೇಹೇ ಗುಡಾಕೇಶ ಯಚ್ಚಾನ್ಯದ್ ದ್ರಷ್ಟುಮಿಚ್ಛಸಿ ॥೭॥**

ಈ ನನ್ನ ಒಂದು ದೇಹದಲ್ಲಿ ಒಂದೆಡೆಯಲ್ಲಿ ಅಡಗಿರುವ ಸಕಲ ಸ್ಥಾವರ ಜಂಗಮ ಜಗತ್ತನ್ನೂ, ನೀನು ನೋಡಲು ಬಯಸುವ ಬೇರೆ ಎಲ್ಲ ವನ್ನೂ ನೋಡು.

**ನ ತು ಮಾಂ ಶಕ್ಯಸೇ ದ್ರಷ್ಟುಮನೇನೈವ ಸ್ವಚಕ್ಷುಷಾ ।**
**ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಂ ॥ ೮ ॥**

ನೀನು ಈ ನಿನ್ನ ಚರ್ಮದ ಕಣ್ಣಿನಿಂದಲೇ ನನ್ನನ್ನು ನೋಡಲಾರೆ. ನಾನು ನಿನಗೆ ದಿವ್ಯಚಕ್ಷುಸ್ಸನ್ನು ಕೊಡುತ್ತೇನೆ. ನನ್ನ ಅನಂತ ವಿಭೂತಿ ಮತ್ತು ಜ್ಞಾನಾದಿಗಳ ಯೋಗವನ್ನು ನೋಡು.

**ಸಂಜಯ ಉವಾಚ—**

**ಏವಮುಕ್ತ್ವಾ ತತೋ ರಾಜನ್ ಮಹಾಯೋಗೇಶ್ವರೋ ಹರಿಃ ।**
**ದರ್ಶಯಾಮಾಸ ಪಾರ್ಥಾಯ ಪರಮಂ ರೂಪಮೈಶ್ವರಂ ॥ ೯ ॥**

ಸಂಜಯ ಹೇಳಿದನು—

ಹೀಗೆ ಹೇಳಿ, ಬಳಿಕ, ರಾಜನೇ ! ಮಹಾಯೋಗೇಶ್ವರನಾದ ಶ್ರೀಕೃಷ್ಣನು ತನ್ನ ಅಸಾಧಾರಣವಾದ ರೂಪವನ್ನು ಪಾರ್ಥನಿಗೆ ತೋರಿಸಿದನು.

**ಅನೇಕವಕ್ತ್ರನಯನಂ ಅನೇಕಾದ್ಭುತ ದರ್ಶನಂ ।**
**ಅನೇಕದಿವ್ಯಾಭರಣಂ ದಿವ್ಯಾನೇಕೋದ್ಯತಾಯುಧಂ ॥ ೧೦ ॥**

**ದಿವ್ಯಮಾಲಾಂಬರಧರಂ ದಿವ್ಯಗನ್ಧಾನುಲೇಪನಂ ।**
**ಸರ್ವಾಶ್ಚರ್ಯಮಯಂ ದೇವಮನನ್ತಂ ವಿಶ್ವತೋಮುಖಂ ॥**

(ಆ ರೂಪವು) ಅನೇಕ ಮುಖ ಮತ್ತು ನೇತ್ರಗಳುಳ್ಳದ್ದೂ, ಅನೇಕ ಅದ್ಭುತ ನೋಟ – ಅನೇಕ ದಿವ್ಯ ಭೂಷಣ ಮತ್ತು ಎತ್ತಿಹಿಡಿದ ಅನೇಕ ದಿವ್ಯಾಯುಧಗಳುಳ್ಳದ್ದೂ,

ದಿವ್ಯಮಾಲೆಗಳನ್ನೂ ವಸ್ತ್ರಗಳನ್ನೂ ಧರಿಸಿದುದೂ ದಿವ್ಯಗಂಧಲೇಪವುಳ್ಳದ್ದೂ ಎಲ್ಲ ಬಗೆಯಿಂದಲೂ ಆಶ್ಚರ್ಯಮಯವೂ ಪ್ರಕಾಶಮಾನವೂ ಅನಂತವೂ ಮತ್ತು ವಿಶ್ವತೋಮುಖವೂ ಆದುದು.

**ದಿವಿ ಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।**
**ಯದಿ ಭಾ ಸ್ಸದೃಶೀ ಸಾ ಸ್ಯಾದ್ಭಾಸಸ್ತಸ್ಯ ಮಹಾತ್ಮನಃ ॥ ೧೨ ॥**

ಆಕಾಶದಲ್ಲಿ ಸಾವಿರಾರು ಸೂರ್ಯರ ತೇಜಸ್ಸು ಒಂದೇ ಕಾಲಕ್ಕೆ ಬೆಳಗಿದರೆ ಅದು ಆ ಮಹಾತ್ಮನ ತೇಜಸ್ಸಿಗೆ ಸರಿಯಾಗಬಹುದು.

**ತತ್ರೈಕಸ್ಥಂ ಜಗತ್ಕೃತ್ಸ್ನಂ ಪ್ರವಿಭಕ್ತಮನೇಕಧಾ ।**
**ಅಪಶ್ಯದ್ದೇವದೇವಸ್ಯ ಶರೀರೇ ಪಾಂಡವಸ್ತದಾ ॥ ೧೩ ॥**

ದೇವದೇವನ ಆ ದೇಹದಲ್ಲಿ ಒಂದೆಡೆಯಲ್ಲಿ ಇಡಿಯ ಜಗತ್ತು ಅನೇಕ ವಿಧವಾಗಿ ವಿಭಾಗಿಸಲ್ಪಟ್ಟಿದನ್ನು ಅರ್ಜುನನು ಆಗ ನೋಡಿದನು.

**ತತಸ್ಸ ವಿಸ್ಮಯಾವಿಷ್ಟೋ ಹೃಷ್ಟರೋಮಾ ಧನಂಜಯಃ ।**
**ಪ್ರಣಮ್ಯ ಶಿರಸಾ ದೇವಂ ಕೃತಾಂಜಲಿರಭಾಷತ ॥ ೧೪ ॥**

ಆ ಬಳಿಕ ಆಶ್ಚರ್ಯಗೊಂಡು ರೋಮಾಂಚಿತನಾದ ಅರ್ಜುನನು ದೇವನಿಗೆ ತಲೆಬಾಗಿ ಕೈಮುಗಿದು ನುಡಿದನು.

ಅರ್ಜುನ ಉವಾಚ—

**ಪಶ್ಯಾಮಿ ದೇವಾಂಸ್ತವ ದೇವ ದೇಹೇ**
**ಸರ್ವಾಂಸ್ತಥಾಭೂತವಿಶೇಷ ಸಂಘಾನ್ ।**
**ಬ್ರಹ್ಮಾಣಮೀಶಂ ಕಮಲಾಸನಸ್ಥಂ**
**ಋಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾನ್ ॥ ೧೫ ॥**

**ಅರ್ಜುನನು ಹೇಳಿದನು—**

ದೇವಾ! ನಿನ್ನ ದೇಹದಲ್ಲಿ ಎಲ್ಲ ದೇವತೆಗಳನ್ನೂ, ಅದರಂತೆಯೇ ವಿವಿಧ ಭೂತಸಮೂಹಗಳನ್ನೂ ಬ್ರಹ್ಮನನ್ನೂ, ಅವನಮತದಂತೆ ನಡೆಯುವ ಈಶ್ವರನನ್ನೂ, ಎಲ್ಲ ಋಷಿಗಳನ್ನೂ ಮತ್ತು ದಿವ್ಯವಾದ ಎಲ್ಲ ಸರ್ಪಗಳನ್ನೂ ನೋಡುತ್ತೇನೆ.

**ಅನೇಕಬಾಹೂದರವಕ್ತ್ರನೇತ್ರಂ ಪಶ್ಯಾಮಿ**
**ತ್ವಾಂ ಸರ್ವತೋಽನನ್ತ ರೂಪಂ ।**
**ನಾನ್ತಂ ನ ಮಧ್ಯಂ ನ ಪುನಸ್ತವಾದಿಂ**
**ಪಶ್ಯಾಮಿ ವಿಶ್ವೇಶ್ವರ ವಿಶ್ವರೂಪ ॥ ೧೬ ॥**

ಅನೇಕ ತೋಳುಗಳೂ, ಹೊಟ್ಟೆಗಳೂ ಮತ್ತು ಕಣ್ಣುಗಳೂ ಉಳ್ಳ ನಿನ್ನನ್ನು ಎಲ್ಲೆಲ್ಲಿಯೂ ನೋಡುತ್ತೇನೆ. ವಿಶ್ವೇಶ್ವರನೇ, ವಿಶ್ವರೂಪನೇ!

ನೀನು ಅನಂತರೂಪನಾದುದರಿಂದ ನಿನ್ನ ಅಂತವನ್ನೂ, ಮಧ್ಯವನ್ನೂ, ಆದಿಯನ್ನೂ ಕಾಣೆನು.

ಕಿರೀಟಿನಂ ಗದಿನಂ ಚಕ್ರಿಣಂ ಚ
ತೇಜೋರಾಶಿಂ ಸರ್ವತೋ ದೀಪ್ತಿಮನ್ತಂ ।
ಪಶ್ಯಾಮಿ ತ್ವಾ ದುರ್ನಿರೀಕ್ಷ್ಯಂ ಸಮನ್ತಾತ್
ದೀಪ್ತಾನಲಾರ್ಕದ್ಯುತಿಮಪ್ರಮೇಯಂ ॥ ೧೭ ॥

ತೇಜೋರಾಶಿಯೂ, ಎಲ್ಲೆಲ್ಲಿಯೂ ಹೊಳೆಯುತ್ತಿರುವವನೂ, ನೋಡಲಸಾಧ್ಯನೂ, ಅಪರಿಮಿತನೂ, ಅಗ್ನಿ ಮತ್ತು ಸೂರ್ಯನಂತೆ ಸುತ್ತಲೂ ಜಗಜಗಿಸುತ್ತಿರುವವನೂ ಆದ ನೀನು ಕಿರೀಟಧಾರಿಯೂ, ಗದೆ ಮತ್ತು ಚಕ್ರಗಳನ್ನೂ ಹಿಡಿದವನೂ ಆಗಿರುವುದನ್ನು ನೋಡುತ್ತಿದ್ದೇನೆ.

ತ್ವಮಕ್ಷರಂ ಪರಮಂ ವೇದಿತವ್ಯಂ
ತ್ವಮಸ್ಯ ವಿಶ್ವಸ್ಯ ಪರಂ ನಿಧಾನಂ ।
ತ್ವಮವ್ಯಯಶ್ಶಾಶ್ವತಧರ್ಮಗೋಪ್ತಾ
ಸನಾತನಸ್ತ್ವಂ ಪುರುಷೋ ಮತೋ ಮೇ ॥ ೧೮ ॥

ವೇದ್ಯವೆಂದು (ಉಪನಿಷತ್ತುಗಳಲ್ಲಿ) ನಿರ್ದಿಷ್ಟವಾದ ಪರಮ ಅಕ್ಷರನು ನೀನು; ಈ ಪ್ರಪಂಚದ ಪರಮ ಆಧಾರವು ನೀನು; ಅವ್ಯಯನೂ, ಶಾಶ್ವತ (ವೈದಿಕ) ಧರ್ಮದ ರಕ್ಷಕನೂ ನೀನು; ಸನಾತನ ಪುರುಷನೂ ನೀನು ಎಂದು ನಾನು ತಿಳಿಯುತ್ತೇನೆ.

ಅನಾದಿಮಧ್ಯಾನ್ತಮನನ್ತವೀರ್ಯಂ
ಅನನ್ತಬಾಹುಂ ಶಶಿಸೂರ್ಯನೇತ್ರಂ ।
ಪಶ್ಯಾಮಿ ತ್ವಾ ದೀಪ್ತಹುತಾಶವಕ್ತ್ರಂ
ಸ್ವತೇಜಸಾ ವಿಶ್ವಮಿದಂ ತಪನ್ತಂ ॥ ೧೯ ॥

ಆದಿಮಧ್ಯಾನ್ತಗಳಿಲ್ಲದವನೂ, ಅನವಧಿಕವೀರ್ಯನೂ, ಅನಂತ ಭುಜಗಳುಳ್ಳವನೂ, ಚಂದ್ರನಂತೆ ಪ್ರಸಾದಯುಕ್ತವೂ ಸೂರ್ಯನಂತೆ ಪ್ರತಾಪಯುಕ್ತವೂ ಆದ ನೇತ್ರಗಳುಳ್ಳವನೂ, ಪ್ರಜ್ವಲಿತ ಅಗ್ನಿಮಯಮುಖಗಳುಳ್ಳ

ವನೂ, ಸ್ವಂತ ತೇಜಸ್ಸಿನಿಂದ ಈ ಜಗತ್ತನ್ನು ತಪಿಸುವವನೂ ಆದ ನಿನ್ನನ್ನು ನೋಡುತ್ತಿದ್ದೇನೆ.

**ದ್ಯಾವಾಪೃಥಿವ್ಯೋರಿದಮನ್ತರಂ ಹಿ**
**ವ್ಯಾಪ್ತಂ ತ್ವಯೈಕೇನ ದಿಶಶ್ಚ ಸರ್ವಾಃ ।**
**ದೃಷ್ಟ್ವಾಽದ್ಭುತಂ ರೂಪಮುಗ್ರಂ ತವೇದಂ**
**ಲೋಕತ್ರಯಂ ಪ್ರವ್ಯಥಿತಂ ಮಹಾತ್ಮನ್ ॥ ೨೦ ॥**

ಭೂಮ್ಯಾಕಾಶಗಳ ನಡುವಿನ ಪ್ರದೇಶವೂ, ಎಲ್ಲ ದಿಕ್ಕುಗಳೂ ನಿನ್ನೊಬ್ಬನಿಂದ ವ್ಯಾಪಿಸಲ್ಪಟ್ಟಿರುವುವು. ಮಹಾತ್ಮನೇ! ನಿನ್ನ ಅದ್ಭುತವೂ, ಉಗ್ರವೂ ಆದ ಈ ರೂಪವನ್ನು ಕಂಡು ಮೂರು ಲೋಕಗಳೂ ಅತ್ಯಂತ ಹೆದರಿವೆ.

**ಅಮೀ ಹಿ ತ್ವಾ ಸುರಸಂಘಾ ವಿಶನ್ತಿ**
**ಕೇಚಿದ್ಭೀತಾಃ ಪ್ರಾಂಜಲಯೋ ಗೃಣನ್ತಿ ।**
**ಸ್ವಸ್ತೀತ್ಯುಕ್ತ್ವಾ ಮಹರ್ಷಿಸಿದ್ಧಸಂಘಾಃ**
**ಸ್ತುವನ್ತಿ ತ್ವಾಂ ಸ್ತುತಿಭಿಃ ಪುಷ್ಕಲಾಭಿಃ ॥ ೨೧ ॥**

ಈ ದೇವತೆಗಳ ಗುಂಪುಗಳು ಸೇವೆಗಾಗಿ ಸಂತೋಷದಿಂದ ನಿನ್ನ ಸಮೀಪಕ್ಕೆ ಬರುತ್ತಿವೆ. ಈ ದೇವತೆಗಳಲ್ಲಿ ಕೆಲವರು ಭಯದಿಂದ ಕೈ ಮುಗಿದು ನಿನ್ನನ್ನು ಹೊಗಳುತ್ತಾರೆ. ಮಹರ್ಷಿಗಳು ಮತ್ತು ಸಿದ್ಧರು ಗುಂಪು ಗುಂಪಾಗಿ ನಿನಗೆ ಮಂಗಳಾಶಾಸನಮಾಡಿ ಅನುರೂಪವಾದ ಸ್ತುತಿಗಳಿಂದ ನಿನ್ನನ್ನು ಸ್ತುತಿಸುತ್ತಿದ್ದಾರೆ.

**ರುದ್ರಾದಿತ್ಯಾ ವಸವೋ ಯೇ ಚ ಸಾಧ್ಯಾ**
**ವಿಶ್ವೇಽಶ್ವಿನೌ ಮರುತಶ್ಚೋಷ್ಮಪಾಶ್ಚ ।**
**ಗಂಧರ್ವಯಕ್ಷಾಸುರಸಿದ್ಧಸಂಘಾ**
**ವೀಕ್ಷನ್ತೇ ತ್ವಾಂ ವಿಸ್ಮಿತಾಶ್ಚೈವ ಸರ್ವೇ ॥ ೨೨ ॥**

ರುದ್ರರು, ಆದಿತ್ಯರು, ವಸುಗಳು, ಸಾಧ್ಯರು, ವಿಶ್ವೇದೇವತೆಗಳು, ಅಶ್ವಿನೀದೇವತೆಗಳು, ಮರುತ್ತುಗಳು, ಪಿತೃಗಳು, ಗಂಧರ್ವರ, ಯಕ್ಷರ, ಅಸುರರ, ಸಿದ್ಧರ ಸಂಘಗಳು—ಎಲ್ಲರೂ ಬೆರಗಾಗಿ ನಿನ್ನನ್ನು ನೋಡುತ್ತಿದ್ದಾರೆ.

**ರೂಪಂ ಮಹತ್ತೇ ಬಹುವಕ್ತ್ರನೇತ್ರಂ**
**ಮಹಾಬಾಹೋ ಬಹುಬಾಹೂರುಪಾದಂ ।**
**ಬಹೂದರಂ ಬಹುದಂಷ್ಟ್ರಾಕರಾಳಂ**
**ದೃಷ್ಟ್ವಾ ಲೋಕಾಃ ಪ್ರವ್ಯಥಿತಾಸ್ತಥಾಹಂ ॥ ೨೩ ॥**

ಮಹಾಬಾಹುವೇ! ಅನೇಕ ಮುಖಗಳೂ, ನೇತ್ರಗಳೂ ಉಳ್ಳ, ಅನೇಕ ಬಾಹುಗಳೂ, ತೊಡೆಗಳೂ, ಪಾದಗಳೂ ಉಳ್ಳ, ಅನೇಕ ಉದರಗಳುಳ್ಳ, ಅನೇಕ ದವಡೆಗಳಿಂದ ಉಗ್ರವಾದ ನಿನ್ನ ವಿಶಾಲ ರೂಪವನ್ನು ನೋಡಿ ಜನರೆಲ್ಲರೂ ಭೀತರಾಗಿದ್ದಾರೆ; ನಾನೂ ಭೀತನಾಗಿದ್ದೇನೆ.

**ನಭಸ್ಸ್ಪೃಶಂ ದೀಪ್ತಮನೇಕವರ್ಣಂ**
**ವ್ಯಾತ್ತಾನನಂ ದೀಪ್ತವಿಶಾಲನೇತ್ರಂ ।**
**ದೃಷ್ಟ್ವಾ ಹಿ ತ್ವಾ ಪ್ರವ್ಯಥಿತಾಂತರಾತ್ಮಾ**
**ಧೃತಿಂ ನ ವಿಂದಾಮಿ ಶಮಂ ಚ ವಿಷ್ಣೋ ॥ ೨೪ ॥**

ವಿಷ್ಣುವೇ! ಪರಮಪದವನ್ನು ಮುಟ್ಟುತ್ತಿರುವ, ಪ್ರಜ್ವಲಿಸುತ್ತಿರುವ ಅನೇಕ ವರ್ಣಗಳುಳ್ಳ, ತೆರೆದಬಾಯುಳ್ಳ, ತೇಜೋಮಯವೂ, ವಿಶಾಲವೂ ಆದ ನೇತ್ರಗಳುಳ್ಳ ನಿನ್ನನ್ನು ಕಂಡು ಅತ್ಯಂತ ಹೆದರಿದ ಮನಸ್ಸುಳ್ಳವನಾಗಿ ಧೈರ್ಯವನ್ನೂ, ಶಾಂತಿಯನ್ನೂ ಪಡೆಯೆನು.

**ದಂಷ್ಟ್ರಾಕರಾಳಾನಿ ಚ ತೇ ಮುಖಾನಿ**
**ದೃಷ್ಟ್ವೈವ ಕಾಲಾನಲಸನ್ನಿಭಾನಿ ।**
**ದಿಶೋ ನ ಜಾನೇ ನ ಲಭೇ ಚ ಶರ್ಮ**
**ಪ್ರಸೀದ ದೇವೇಶ ಜಗನ್ನಿವಾಸ ॥ ೨೫ ॥**

ದವಡೆಗಳಿಂದ ಭಯಂಕರವಾದ ಮತ್ತು ಪ್ರಳಯಕಾಲದ ಅಗ್ನಿಗೆ ಸಮಾನವಾದ ನಿನ್ನ ಮುಖಗಳನ್ನು ಕಂಡು ನನಗೆ ದಿಕ್ಕುಗಳು ತೋಚದಂತಾಗಿವೆ. ಸುಖವನ್ನೂ ಪಡೆಯೆನು. ದೇವೇಶ! ಜಗನ್ನಿವಾಸ! ಪ್ರಸನ್ನನಾಗು.

(ಸಂಗತಿ : ಹೀಗೆ ಶ್ರೀ ಕೃಷ್ಣನು ಜಗತ್ತಿನ ಸ್ಥಿತಿ ಪ್ರವೃತ್ತಿಗಳೆಲ್ಲವೂ ತನ್ನಧೀನವೆಂದು ತೋರಿಸುತ್ತ ಭೂಭಾರವನ್ನು ಇಳಿಸುವ ತನ್ನ ಉದ್ದೇಶ

ವನ್ನೂ ತಿಳಿಯಪಡಿಸುವುದಕ್ಕಾಗಿ ತನ್ನ ಭೀಷಣರೂಪವನ್ನು ಪಾರ್ಥನಿಗೆ ತೋರಿಸಿದನು. ಅವನು ಅನುಗ್ರಹಿಸಿದ ದಿವ್ಯನೇತ್ರದಿಂದ ಇದೆಲ್ಲವನ್ನೂ ಕಂಡು ಪಾರ್ಥನು ಹೇಳಿದನು.)

ಅಮೀ ಸರ್ವೇ ಧೃತರಾಷ್ಟ್ರಸ್ಯ ಪುತ್ರಾ
ಸ್ಸರ್ವೈಸ್ಸಹೈವಾವನಿಪಾಲಸಂಘೈಃ ।
ಭೀಷ್ಮೋದ್ರೋಣಸ್ಸೂತಪುತ್ರಸ್ತಥಾऽಸೌ
ಸಹಾಸ್ಮದೀಯೈರಪಿ ಯೋಧಮುಖ್ಯೈಃ ॥ ೨೬ ॥

ವಕ್ತ್ರಾಣಿ ತೇ ತ್ವರಮಾಣಾ ವಿಶನ್ತಿ
ದಂಷ್ಟ್ರಾಕರಾಳಾನಿ ಭಯಾನಕಾನಿ ।
ಕೇಚಿದ್ವಿಲಗ್ನಾ ದಶನಾನ್ತರೇಷು
ಸಂದೃಶ್ಯಂತೇ ಚೂರ್ಣಿತೈರುತ್ತಮಾಂಗೈಃ ॥ ೨೭ ॥

ಧೃತರಾಷ್ಟ್ರನ ಈ ಮಕ್ಕಳೆಲ್ಲರೂ, ಭೀಷ್ಮ, ದ್ರೋಣರೂ ಮತ್ತು ಈ ಕರ್ಣನೂ ಸಕಲ ರಾಜಸಮುದಾಯಗಳೊಡನೆಯೂ, ನಮ್ಮ ಮುಖ್ಯ ಯೋಧರೊಡನೆಯೂ, ದವಡೆಗಳಿಂದ ಉಗ್ರವೂ, ಭಯಂಕರವೂ ಆದ ನಿನ್ನ ಮುಖಗಳನ್ನು ವೇಗವಾಗಿ ಪ್ರವೇಶಿಸುತ್ತಿರುವರು. ಕೆಲವರು ಚೂರು ಚೂರಾದ ತಲೆಗಳೊಡನೆ ನಿನ್ನ ಹಲ್ಲುಗಳ ಸಂದುಗಳಲ್ಲಿ ಸಿಕ್ಕಿದವರಾಗಿ ಕಾಣುತ್ತಾರೆ.

ಯಥಾ ನದೀನಾಂ ಬಹವೋऽಂಬುವೇಗಾಃ
ಸಮುದ್ರಮೇವಾಭಿಮುಖಾಃ ದ್ರವಂತಿ ।
ತಥಾ ತವಾಮೀ ನರಲೋಕವೀರಾಃ
ವಿಶಂತಿ ನಾಶಾಯ ಸಮೃದ್ಧವೇಗಾಃ ॥ ೨೮ ॥

ಯಥಾ ಪ್ರದೀಪ್ತಜ್ವಲನಂ ಪತಂಗಾ
ವಿಶಂತಿ ನಾಶಾಯ ಸಮೃದ್ಧವೇಗಾಃ ।
ತಥೈವ ನಾಶಾಯ ವಿಶಂತಿ ಲೋಕಾ
ಸ್ತವಾಪಿ ವಕ್ತ್ರಾಣಿ ಸಮೃದ್ಧವೇಗಾಃ ॥ ೨೯ ॥

ವೀರರಾದ ಈ ರಾಜರೆಲ್ಲರೂ ನದಿಗಳ ಅನೇಕ ಪ್ರವಾಹಗಳು ಸಮು

ದ್ರವನ್ನೂ–ಪತಂಗಗಳು ಹೆಚ್ಚಿದ ವೇಗದಿಂದ ಉರಿವ ಬೆಂಕಿಯನ್ನೂ, ಪ್ರವೇಶಿಸುವಂತೆ, ತಮ್ಮ ನಾಶಕ್ಕೋಸ್ಕರ ತಾವಾಗಿಯೇ ಹೆಚ್ಚಿದ ವೇಗದಿಂದ ಉರಿಯುತ್ತಿರುವ ನಿನ್ನ ಮುಖಗಳನ್ನು ಪ್ರವೇಶಿಸುತ್ತಿರುವರು.

(ಟಿಪ್ಪಣಿ: ಇಲ್ಲಿ ಪ್ರವಾಹ ದೃಷ್ಟಾಂತಕ್ಕೆ ಸ್ವೇಚ್ಛೆಯಿಂದ ಹಿಂದೆಗೆಯಲು ಅವರಿಗೆ ಅಶಕ್ಯವೆಂದು ಅಭಿಪ್ರಾಯ.

ಪತಂಗ ದೃಷ್ಟಾಂತಕ್ಕೆ ಸ್ವೇಚ್ಛಾಮೂಲ ವ್ಯಾಪಾರವೇ ಅವರ ವಿನಾಶಕ್ಕೆ ಕಾರಣವೆಂದು ಅಭಿಪ್ರಾಯ.)

(ಸಂಗತಿ: ಮೇಲೆ "ತಾವೇ ತ್ವರೆಯಿಂದ ಪ್ರವೇಶಿಸುತ್ತಾರೆ"—ಎಂದು ಹೇಳಿದೆ. ಇದರಿಂದ, ಈಶ್ವರನು ಅತ್ಯಂತ ನಿರ್ವ್ಯಾಪಾರನೆ?—ಎಂದರೆ, ಆಯಾ ಚೇತನರ ವ್ಯಾಪಾರ ವಿಶೇಷವೇ ಸಂಹರಣಾದಿಗಳಿಗೆ ಮೂಲಕಾರಣ. ತನ್ನಿಮಿತ್ತಕೋಪಾದಿಗಳಿಂದ ವಿಶಿಷ್ಟನಾಗಿ ಭಗವಂತನು ಸಂಹಾರಾದಿಗಳನ್ನು ನಡೆಸುತ್ತಾನೆ—ಎಂದು ಕೆಳಗಿನ ಶ್ಲೋಕದಿಂದ ಹೇಳುತ್ತಾನೆ.)

**ಲೇಲಿಹ್ಯಸೇ ಗ್ರಸಮಾನಸ್ಸಮನ್ತಾ**
**ಲ್ಲೋಕಾನ್ ಸಮಗ್ರಾನ್ವದನೈರ್ಜ್ವಲದ್ಭಿಃ ।**
**ತೇಜೋಭಿರಾಪೂರ್ಯ ಜಗತ್ಸಮಗ್ರಂ**
**ಭಾಸಸ್ತವೋಗ್ರಾಃ ಪ್ರತಪನ್ತಿ ವಿಷ್ಣೋ ॥ ೩೦ ॥**

ಯುದ್ಧಕ್ಕಾಗಿ ಸುತ್ತಲೂ ಸೇರಿರುವ ರಾಜಸಮುದಾಯಗಳೆಲ್ಲವನ್ನೂ ಪ್ರಜ್ವಲಿಸುವ ಬಾಯಿಗಳಿಂದ ಆಹುತಿಗೊಳ್ಳುತ್ತ (ಅವರ ರಕ್ತದಿಂದ ಕೊಯ್ದ ನಿನ್ನ ತುಟಿ ಮುಂತಾದುವನ್ನು) ನೆಕ್ಕುತಲಿರುವೆ. ವಿಷ್ಣುವೆ! ನಿನ್ನ ಅತಿ ಘೋರ ರಶ್ಮಿಗಳು ಅಖಿಲ ಜಗತ್ತನ್ನೂ ಪ್ರಕಾಶಗಳಿಂದ ತುಂಬಿ ಸುಡುತ್ತಲಿರುವುವು.

(ಸಂಗತಿ: "ದರ್ಶಯಾತ್ಮಾನಮವ್ಯಯಂ"—ಎಂಬುದರಿಂದ ಭಗವಂತನ ನಿರಂಕುಶೈಶ್ವರ್ಯವನ್ನು ನೋಡಲಿಚ್ಛಿಸಿದ ಅರ್ಜುನನು ಅದನ್ನು ನೋಡುತ್ತಿರುವಾಗ ಭಗವಂತನ ಅಂಥ ಘೋರರೂಪವನ್ನೂ ನೋಡಿ ಸಹಿಸಲಾರದವನಾಗಿ, ಅಂಥ ಘೋರರೂಪಾವಿಷ್ಕಾರಕ್ಕೆ ಕಾರಣವನ್ನೂ

ಹೇಳಬೇಕೆಂದು ಕೇಳಿ, ಪ್ರಸನ್ನರೂಪ ಪರಿಗ್ರಹಕ್ಕಾಗಿ ಅವನ ಪ್ರಸಾದವನ್ನೂ ಅಪೇಕ್ಷಿಸುತ್ತಾನೆ.)

**ಆಖ್ಯಾಹಿ ಮೇ ಕೋ ಭವಾನುಗ್ರರೂಪೋ**
**ನಮೋಽಸ್ತು ತೇ ದೇವವರ ಪ್ರಸೀದ ।**
**ವಿಜ್ಞಾತುಮಿಚ್ಛಾಮಿ ಭವನ್ತಮಾದ್ಯಂ**
**ನ ಹಿ ಪ್ರಜಾನಾಮಿ ತವ ಪ್ರವೃತ್ತಿಂ ॥ ೩೧ ॥**

ಅತಿ ಘೋರರೂಪಿಯಾದ ನೀನು ಯಾರೆಂಬುದನ್ನು ನನಗೆ ಹೇಳು. ಆದಿಪುರುಷನಾದ ನೀನು ಏನುಮಾಡಲು ತೊಡಗಿದ್ದೀಯೆ ಎಂಬುದನ್ನು ಅರಿಯಲು ಬಯಸುತ್ತೇನೆ; ಏತಕ್ಕೆಂದರೆ ನಿನ್ನ ಮನಸ್ಸಿನಲ್ಲಿರುವ ಉದ್ಯೋಗವನ್ನು ನಾನು ತಿಳಿಯೆನು. ದೇವಶ್ರೇಷ್ಠನೇ, ನಿನಗೆ ನಮಸ್ಕಾರವು; ಪ್ರಸನ್ನನಾಗು.

(ಸಂಗತಿ: ಅರ್ಜುನನು ಹೀಗೆ ಪ್ರಶ್ನಿಸಲು, ಶ್ರೀಕೃಷ್ಣನು ಅರ್ಜುನನ ಪ್ರಯತ್ನವಿಲ್ಲದೆಯೇ ತಾನೇ ದುರ್ಯೋಧನಾದಿ ರಾಜಸಮುದಾಯಗಳೆಲ್ಲವನ್ನೂ ಸಂಹರಿಸಲು ಉದ್ಯುಕ್ತನಾಗಿರುವುದನ್ನು ತೋರಿಸಿ ತನ್ಮೂಲಕ ಅವನನ್ನು ಈ ಕೃತ್ಯದಲ್ಲಿ ಪ್ರೇರಿಸುವುದೇ ಆ ಘೋರ ರೂಪಾವಿಷ್ಕಾರದ ತಾತ್ಪರ್ಯವೆಂದು ಇಲ್ಲಿ ತಿಳಿಸುತ್ತಾನೆ.)

**ಶ್ರೀ ಭಗವಾನುವಾಚ—**

**ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ**
**ಲೋಕಾನ್ ಸಮಾಹರ್ತುಮಿಹ ಪ್ರವೃತ್ತಃ ।**
**ಋತೇಽಪಿ ತ್ವಾ ನ ಭವಿಷ್ಯನ್ತಿ ಸರ್ವೇ**
**ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ ॥ ೩೨ ॥**

ಈ ರಾಜಲೋಕಗಳನ್ನು ನಾಶಮಾಡಲು ಘೋರರೂಪದಿಂದ ಪ್ರವೃದ್ಧನಾದ ಕಾಲನು ನಾನು (ಕಾಲನೆಂದರೆ ಇಲ್ಲಿ ಅವರ ಆಯುಸ್ಸು—ಅವಸಾನಗಳನ್ನು ಎಣಿಸುವವನೆಂದು ಭಾವ.) ಈ ರಾಜಲೋಕಗಳನ್ನು ನೇರವಾಗಿ ಸಂಹರಿಸಲು ಇಲ್ಲಿ ಉದ್ಯುಕ್ತನಾಗಿದ್ದೇನೆ. ಶತ್ರುಪಕ್ಷದಲ್ಲಿ ನಿಂತಿರುವ ಯೋಧರೆಲ್ಲರೂ ನೀನಿಲ್ಲದಿದ್ದರೂ ನಾಶಹೊಂದುವರು.

(ಸಂಗತಿ : ನನ್ನ ಯತ್ನವಿಲ್ಲದೆಯೇ ಈ ಶತ್ರುಗಳೆಲ್ಲರೂ ನಾಶಹೊಂದುವುದಾದರೆ, ನನ್ನನ್ನು ಏತಕ್ಕೆ ಈ ಕಾರ್ಯದಲ್ಲಿ ಪ್ರೇರಿಸುತ್ತಿರುವೆ ?— ಎಂಬ ಅರ್ಜುನನ ಶಂಕೆಗೆ, ತನ್ನ ಭಕ್ತನಾದ ಅವನಿಗೆ ಜಯ, ಯಶಸ್ಸು, ರಾಜ್ಯ ಮುಂತಾದುವು ಲಭಿಸಲೆಂದೇ ಹಾಗೆ ಪ್ರೇರಿಸುತ್ತಿರುವುದಾಗಿ ಭಗವಂತನು ಕೆಳಗೆ ಹೇಳುತ್ತಾನೆ.

**ತಸ್ಮಾತ್ತ್ವಮುತ್ತಿಷ್ಠ ಯಶೋ ಲಭಸ್ವ**
**ಜಿತ್ವಾ ಶತ್ರೂನ್ ಭುಂಕ್ಷ್ವ ರಾಜ್ಯಂ ಸಮೃದ್ಧಂ ।**
**ಮಯೈವೈತೇ ನಿಹತಾಃ ಪೂರ್ವಮೇವ**
**ನಿಮಿತ್ತಮಾತ್ರಂ ಭವ ಸವ್ಯಸಾಚಿನ್ ॥ ೩೩ ॥**

ಆದುದರಿಂದ (ಅವರೊಡನೆ ಯುದ್ಧಕ್ಕಾಗಿ) ಏಳು. ಶತ್ರುಗಳನ್ನು ಗೆದ್ದು ಕೀರ್ತಿಯನ್ನು ಪಡೆ; ಸಮೃದ್ಧವಾದ ರಾಜ್ಯವನ್ನು ಭೋಗಿಸು. (ಅಪರಾಧಿಗಳಾದ) ಇವರನ್ನು ಕೊಲ್ಲಲು ಈ ಮೊದಲೇ ನಾನೇ ಸಂಕಲ್ಪಿಸಿದ್ದೇನೆ. ಎರಡು ಕೈಗಳಿಂದ ಯುದ್ಧಮಾಡಬಲ್ಲ ಅರ್ಜುನನೇ ! (ಇವರ ವಧೆಗೆ ಶಸ್ತ್ರಾದಿಗಳಂತೆ) ನೀನು ನಿಮಿತ್ತಮಾತ್ರದವನಾಗು.

(ಸಂಗತಿ : " ಅಸ್ಥಾನ ಸ್ನೇಹ-ಕಾರುಣ್ಯ-ಧರ್ಮಾಧರ್ಮ ಭಯಗಳಿಂದ ಉಂಟಾಗಿದ್ದ "ಕಥಂ ಭೀಷ್ಮಮಹಂ ಸಂಖ್ಯೇ"—ಇತ್ಯಾದಿಯಾದ ಅರ್ಜುನನ ಪ್ರಶ್ನೆಗೆ ಈಗ ಸಾಕ್ಷಾತ್ತಾಗಿ ಉತ್ತರವನ್ನು ಹೇಳುತ್ತಾನೆ.)

**ದ್ರೋಣಂ ಚ ಭೀಷ್ಮಂ ಚ ಜಯದ್ರಥಂ ಚ**
**ಕರ್ಣಂ ತಥಾನ್ಯಾನಪಿ ಯೋಧ ಮುಖ್ಯಾನ್ ।**
**ಮಯಾ ಹತಾಂಸ್ತ್ವಂ ಜಹಿ ಮಾ ವ್ಯಥಿಷ್ಠಾಃ**
**ಯುಧ್ಯಸ್ವ ಜೇತಾಸಿ ರಣೇ ಸಪತ್ನಾನ್ ॥ ೩೪ ॥**

(ಅಪರಾಧಿಗಳಾಗಿ) ನನ್ನಿಂದ ಕೊಲ್ಲಲು ಸಂಕಲ್ಪಿತರಾದ ದ್ರೋಣನನ್ನು, ಭೀಷ್ಮನನ್ನು ಕರ್ಣನನ್ನು ಹಾಗೆಯೇ ಬೇರೆ ಮುಖ್ಯ ಯೋಧರನ್ನೂ ನೀನು ಕೊಲ್ಲು. (ಭೋಗಾಸಕ್ತರಾದ ಗುರುಗಳನ್ನು ಹೇಗೆ ಕೊಲ್ಲುವುದು? ಎಂದು ಅವರ ವಿಷಯದಲ್ಲಿ ಧರ್ಮಾಧರ್ಮ ಭಯದಿಂದಲೂ, ಬಂಧು ಸ್ನೇಹ ಮತ್ತು ಕಾರುಣ್ಯಗಳಿಂದಲೂ) ವ್ಯಥೆಪಡಬೇಡ ; (ಶಂಕೆಯಿಲ್ಲದೆ)

ಯುದ್ಧಮಾಡು. ಯುದ್ಧದಲ್ಲಿ ಶತ್ರುಗಳನ್ನು ಜಯಿಸುವೆ. (ಇವರ ವಧದಿಂದ ದೋಷ ಬರುವುದಿಲ್ಲ; ಜಯವೇ ಲಭಿಸುತ್ತದೆಯೆಂದು ಭಾವ.)

**ಸಂಜಯ ಉವಾಚ—**

**ಏತಚ್ಛ್ರುತ್ವಾ ವಚನಂ ಕೇಶವಸ್ಯ**
**ಕೃತಾಂಜಲಿರ್ವೇಪಮಾನಃ ಕಿರೀಟೀ ।**
**ನಮಸ್ಕೃತ್ವಾ ಭೂಯ ಏವಾಹ ಕೃಷ್ಣಂ**
**ಸಗದ್ಗದಂ ಭೀತಭೀತಃ ಪ್ರಣಮ್ಯ ॥ ೩೫ ॥**

ಸಂಜಯನು ಹೇಳಿದನು—

ಶ್ರೀಕೃಷ್ಣನ ಈ ಮಾತನ್ನು ಕೇಳಿ ಅರ್ಜುನನು ಅವನಿಗೆ ನಮಸ್ಕರಿಸಿ ಅತ್ಯಂತ ಹೆದರಿದವನಾಗಿ ಮತ್ತೆಯೂ ನಮಸ್ಕರಿಸಿ ಕೈಮುಗಿದು ನಡುಗುತ್ತ ಗದ್ಗದ ಕಂಠದಿಂದ ಹೇಳಿದನು.

**ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ**
**ಜಗತ್ಪ್ರಹೃಷ್ಯತ್ಯನುರಜ್ಯತೇ ಚ ।**
**ರಕ್ಷಾಂಸಿ ಭೀತಾನಿ ದಿಶೋ ದ್ರವಂತಿ**
**ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ ॥ ೩೬ ॥**

ಕೃಷ್ಣಾ! ಯುದ್ಧವನ್ನು ನೋಡಲಿಚ್ಛೆಯಿಂದ ಬಂದಿರುವ ದೇವಗಂಧರ್ವ, ಸಿದ್ಧ, ಯಕ್ಷ, ವಿದ್ಯಾಧರ, ಕಿನ್ನರಾದಿ ಸಮೂಹವು (ನಿನ್ನ ಅನುಗ್ರಹದಿಂದ ಸರ್ವೇಶ್ವರನಾದ ನಿನ್ನನ್ನು ನೋಡಿ) ನಿನ್ನ ಪ್ರಕೃಷ್ಟ ಕೀರ್ತಿಯಿಂದ ಸಂತೋಷಿಸುತ್ತಲೂ ಪ್ರೀತಿಸುತ್ತಲೂ ಇರುವುದು. (ನಿನ್ನನ್ನು ನೋಡಿ) ಅಂಜಿದ ರಾಕ್ಷಸರು ದಿಕ್ಕು ದಿಕ್ಕುಗಳಲ್ಲಿ ಓಡುತ್ತಿರುವರು. ಸಿದ್ಧರ ಸಂಘಗಳೆಲ್ಲವೂ ನಿನ್ನನ್ನು ನಮಸ್ಕರಿಸುತ್ತಿರುವುವು. ಇವೆಲ್ಲವೂ ಯೋಗ್ಯವೇ ಸರಿ.

(ಟಿಪ್ಪಣಿ : ಈ ಶ್ಲೋಕವು ಶ್ರೀ ವಿಷ್ಣುಪಂಜರಾದಿಗಳಲ್ಲಿ ವಿನಿಯುಕ್ತವಾದ ಪ್ರಸಿದ್ಧಮಂತ್ರವಾಗಿದೆ.

(ಸಂಗತಿ : ಏಕೆಂದರೆ ?)

**ಕಸ್ಮಾಚ್ಚ ತೇ ನ ನಮೇರನ್ ಮಹಾತ್ಮನ್**
**ಗರೀಯಸೇ ಬ್ರಹ್ಮಣೋಽಪ್ಯಾದಿ ಕರ್ತ್ರೇ ।**

ಮಹಾತ್ಮನೇ! ಶ್ರೇಷ್ಠನಾದ ಮತ್ತು ಬ್ರಹ್ಮನಿಗೂ ಆದಿಕರ್ತೃವಾದ ನಿನ್ನನ್ನು ಅವರು ಏಕೆ ನಮಸ್ಕರಿಸಬಾರದು!

**ಅನನ್ತ ದೇವೇಶ ಜಗನ್ನಿವಾಸ**
**ತ್ವಮಕ್ಷರಂ ಸದಸತ್ತತ್ಪರಂ ಯತ್ ।**
**ತ್ವಮಾದಿದೇವಃ ಪುರುಷಃಪುರಾಣಃ**
**ತ್ವಮಸ್ಯ ವಿಶ್ವಸ್ಯ ಪರಂ ನಿಧಾನಂ ॥ ೩೮ ॥**

ಅನಂತನೇ! ದೇವೇಶನೇ! ಜಗನ್ನಿವಾಸನೇ! ನೀನೇ ಜೀವಾತ್ಮ ತತ್ತ್ವವು. ಸತ್ (ಕಾರ್ಯಾವಸ್ಥವೂ) ಮತ್ತು ಅಸತ್ (ಕಾರಣಾವಸ್ಥವೂ) ಆದ ಪ್ರಕೃತಿ ತತ್ತ್ವವೂ ನೀನೇ. ಈ ಪ್ರಕೃತಿ ಮತ್ತು ಪ್ರಕೃತಿ ಸಂಬಂಧಿಯಾದ ಜೀವಾತ್ಮರಿಗಿಂತ ಬೇರೆಯಾದ ಮುಕ್ತಾತ್ಮ ತತ್ತ್ವವೂ ನೀನೇ. (ಆದುದರಿಂದ) ನೀನು ಆದಿದೇವನು, ಪುರಾಣ ಪುರುಷನು, ಈ ವಿಶ್ವದ ಪರಮ ಆಧಾರವು ನೀನು.

**ವೇತ್ತಾಸಿ ವೇದ್ಯಂ ಚ ಪರಂ ಚ ಧಾಮ**
**ತ್ವಯಾ ತತಂ ವಿಶ್ವಮನಂತರೂಪ ! ॥ ೩೭ ॥**

ಜಗತ್ತಿನಲ್ಲಿರುವ ಎಲ್ಲ ಜ್ಞಾತೃ ಮತ್ತು ಜ್ಞೇಯಗಳು ನೀನು. (ಅಂತರ್ಯಾಮಿಯಾದುದರಿಂದ) ನೀನೇ ಪರಮ ಪ್ರಾಪ್ಯಸ್ಥಾನವು. ಅನಂತ ರೂಪನೇ! ವಿಶ್ವವು ನಿನ್ನಿಂದ ವ್ಯಾಪಿಸಲ್ಪಟ್ಟಿದೆ.

(ಸಂಗತಿ: ಆದುದರಿಂದ ವಾಯು ಮುಂತಾದ ಶಬ್ದಗಳಿಂದ ಹೇಳಲ್ಪಟ್ಟವನು ನೀನೇ—ಎಂದು ಹೇಳುತ್ತಾನೆ.)

**ವಾಯುರ್ಯಮೋಽಗ್ನಿರ್ವರುಣಶ್ಶಶಾಂಕಃ**
**ಪ್ರಜಾಪತಿಸ್ತ್ವಂ ಪ್ರಪಿತಾಮಹಶ್ಚ ।**

ನೀನು ವಾಯು, ಯಮನು, ಅಗ್ನಿ, ವರುಣನು, ಚಂದ್ರನು, ಪ್ರಜಾಪತಿ ಮತ್ತು ಪ್ರಪಿತಾಮಹನು.

**ನಮೋ ನಮಸ್ತೇಽಸ್ತು ಸಹಸ್ರಕೃತ್ವಃ**
**ಪುನಶ್ಚ ಭೂಯೋಽಪಿ ನಮೋ ನಮಸ್ತೇ ॥ ೩೯ ॥**

**ನಮಃ ಪುರಸ್ತಾದಥ ಪೃಷ್ಠತಸ್ತೇ**
**ನಮೋಽಸ್ತು ತೇ ಸರ್ವತ ಏವ ಸರ್ವ ।**

ನಿನಗೆ ಸಾವಿರಸಲ ನಮಸ್ಕಾರವು ಮತ್ತೆ ಮತ್ತೆ ನಿನಗೆ ನಮಸ್ಕಾರವು. ರ್ವಶಬ್ದವಾಚ್ಯನೇ ! ಮುಂದೆ ಹಿಂದೆ ಎತ್ತಲೂ ನಿನಗೆ ನಮಸ್ಕಾರವು.

**ಅನಂತವೀರ್ಯಾಮಿತವಿಕ್ರಮಸ್ತ್ವಂ**
**ಸರ್ವಂ ಸಮಾಪ್ನೋಷಿ ತತೋಽಸಿ ಸರ್ವಃ । ॥ ೪೦ ॥**

ಅಪರಿಮಿತವೀರ್ಯನೇ ! ನೀನು ಅಪರಿಮಿತ ಪರಾಕ್ರಮನು ಎಲ್ಲಕ್ಕೂ ಆತ್ಮನಾದುದರಿಂದ) ಎಲ್ಲವನ್ನೂ ನೀನು ವ್ಯಾಪಿಸಿರುವೆ ಆದುದ ಂದ ನೀನು ಸರ್ವನೆನಿಸಿರುವೆ.

**ಸಖೇತಿ ಮತ್ವಾ ಪ್ರಸಭಂ ಯದುಕ್ತಂ**
**ಹೇ ಕೃಷ್ಣ ಹೇ ಯಾದವ ಹೇ ಸಖೇತಿ ।**
**ಅಜಾನತಾ ಮಹಿಮಾನಂ ತವೇಮಂ**
**ಮಯಾ ಪ್ರಮಾದಾತ್ಪ್ರಣಯೇನ ವಾಽಪಿ ॥ ೪೧ ॥**

**ಯಚ್ಚಾಪಹಾಸಾರ್ಥಮಸತ್ಕೃತೋಽಸಿ**
**ವಿಹಾರಶಯ್ಯಾಸನ ಭೋಜನೇಷು ।**
**ಏಕೋಽಥವಾಽಪ್ಯಚ್ಯುತ ತತ್ಸಮಕ್ಷಂ**
**ತತ್ ಕ್ಷಾಮಯೇ ತ್ವಾಮಹಮಪ್ರಮೇಯಮ್ ॥ ೪೨ ॥**

ನಿನ್ನ (ಅನಂತವೀರ್ಯತ್ವ-ಅಮಿತವಿಕ್ರಮತ್ವ- ಸರ್ವಾನ್ತರ್ಯಾತ್ಮತ್ವ- ಸ್ರಷ್ಟೃತ್ವವೇ ಮುಂತಾದ) ಈ ಮಹಿಮೆಯನ್ನು ಅರಿಯದೆ ನಾನು ನಿನ್ನನ್ನು ಮಿತ್ರನೆಂದು ಬಗೆದು, ಮೋಹದಿಂದಾಗಲಿ, ಪ್ರೇಮದಿಂದಾಗಲಿ, (ಚಿರ ಪರಿಚಯದಿಂದಾಗಲಿ ಕೃಷ್ಣಾ, ಯಾದವಾ, ಸಖಾ ! ಎಂದು ಮರ್ಯಾದೆ ಮೀರಿ ನುಡಿದುದನ್ನೂ, ಮತ್ತು ಆಡುವಾಗ, ಮಲಗುವಾಗ, ಕುಳಿತಿರುವಾಗ ಏಕಾಂತದಲ್ಲಿಯಾಗಲಿ ಸಮಕ್ಷದಲ್ಲಿಯಾಗಲಿ ವಿನೋದಕ್ಕಾಗಿ ನಾನು (ಸತ್ಕಾರಾರ್ಹನಾದ) ನಿನ್ನನ್ನು ಅಲಕ್ಷಿಸಿರುವುದಾದರೆ ಅದನ್ನು ಕ್ಷಮಿಸೆಂದು ಅಪ್ರಮೇಯನಾದ ನಿನ್ನನ್ನು ಬೇಡಿಕೊಳ್ಳುತ್ತೇನೆ.

(ಟಿಪ್ಪಣಿ: ಪರಿಹಾಸಕ್ಕಾಗಿಯಾದರೂ ಮಹದ್ವಿಷಯದಲ್ಲಿ ಅಸತ್ಕಾರವು ಅಪರಾಧವೆಂದು ಭಾವ.)

(ಸಂಗತಿ: ನೀನು ಕ್ಷಮೆ ಬೇಡಿದರೂ ನಾನು ಕ್ಷಮಿಸುವುದು ಏನು ನಿಶ್ಚಯ? ಬೇರೆ ಯಾವನನ್ನಾದರೂ ಆಶ್ರಯಿಸು— ಎಂಬ ಭಗವಂತನ ಅಭಿಪ್ರಾಯವನ್ನು ಆಶಂಕೆ ಮಾಡಿ ಹೇಳುತ್ತಾನೆ.)

**ಪಿತಾಽಸಿ ಲೋಕಸ್ಯ ಚರಾಚರಸ್ಯ**
**ತ್ವಮಸ್ಯ ಪೂಜ್ಯಶ್ಚ ಗುರುರ್ಗರೀಯಾನ್ ।**
**ನ ತ್ವತ್ಸಮೋಽಸ್ತ್ಯಭ್ಯಧಿಕಃ ಕುತೋಽನ್ಯೋ**
**ಲೋಕತ್ರಯೇಽಪ್ಯಪ್ರತಿಮಪ್ರಭಾವ ॥ ೪೩ ॥**

ಎಣೆಯಿಲ್ಲದ ಪ್ರಭಾವಶಾಲಿಯೇ: ಚರಾ ಚರಾತ್ಮಕವಾದ ಈ ಲೋಕಕ್ಕೆ ನೀನು (ನಿರುಪಾಧಿಕ) ತಂದೆ, ಪೂಜ್ಯನು ಮತ್ತು ಗುರು. (ಆದುದರಿಂದ) ಪೂಜ್ಯತಮನು. ಮೂರು ಲೋಕಗಳಲ್ಲಿಯೂ ನಿನಗೆ ಸಮಾನನಿಲ್ಲ; ನಿನಗಿಂತಲೂ ಅಧಿಕನು ಇನ್ನಾವನಿರಬಲ್ಲನು?

**ತಸ್ಮಾತ್ಪ್ರಣಮ್ಯ ಪ್ರಣಿಧಾಯ ಕಾಯಂ**
**ಪ್ರಸಾದಯೇ ತ್ವಾಮಹಮೀಶಮೀಡ್ಯಂ ।**
**ಪಿತೇವ ಪುತ್ರಸ್ಯ ಸಖೇವ ಸಖ್ಯುಃ**
**ಪ್ರಿಯಃ ಪ್ರಿಯಾಯಾರ್ಹಸಿ ದೇವ ಸೋಢುಂ ॥ ೪೪ ॥**

(ಲೋಕತ್ರಯಕ್ಕೂ ನೀನು ನಿರುಪಾಧಿಕ ಪಿತೃ, ಗುರು ಮತ್ತು ಪೂಜ್ಯತಮನೂ, ಕಾರುಣ್ಯಾದಿಗುಣಗಳಿಂದ ಸರ್ವಾಧಿಕನೂ) ಆದುದರಿಂದ ಸ್ವಾಮಿಯೂ ಸ್ತುತ್ಯನೂ ಆದ ನಿನ್ನನ್ನು ಶರಣಹೊಂದಿ ಪ್ರಸನ್ನನಾಗು ಎಂದು ಸಾಷ್ಟಾಂಗವಾಗಿ ನಮಸ್ಕರಿಸಿ ಬೇಡುತ್ತೇನೆ. ಸ್ವಾಮಿಯೇ! ತಂದೆ ಮಗನನ್ನು, ಸಖನು ಸಖನನ್ನು, ಸಹಿಸುವಂತೆ ಪ್ರಿಯನಾದ ನೀನು ಪ್ರಿಯನಾದ ನನಗಾಗಿ ಎಲ್ಲವನ್ನೂ ಸಹಿಸಲು ಯೋಗ್ಯನಾಗಿದ್ದೀಯೆ.

**ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ**
**ಭಯೇನ ಚ ಪ್ರವ್ಯಥಿತಂ ಮನೋ ಮೇ ।**

**ತದೇವ ಮೇ ದರ್ಶಯ ದೇವ ರೂಪಂ**
**ಪ್ರಸೀದ ದೇವೇಶ ಜಗನ್ನಿವಾಸ** || ೪೫ ||

ಹಿಂದೆ ನೋಡದಿದ್ದ (ಅತ್ಯದ್ಭುತವೂ ಅತ್ಯುಗ್ರವೂ ಆದ) ನಿನ್ನ ವನ್ನು ನೋಡಿ ನಾನು ಸಂತುಷ್ಟನಾಗಿದ್ದೇನೆ; ಮತ್ತು ಭಯದಿಂದ ಮನಸ್ಸು ವ್ಯಾಕುಲವಾಗಿರುವುದು. (ಆದುದರಿಂದ) ದೇವನೇ! ನಿನ್ನ ಮೊದಲಿನ ಸುಪ್ರಸನ್ನವಾದ) ರೂಪವನ್ನೇ ನನಗೆ ತೋರಿಸು. ದೇವೇ ! ಜಗತ್ತುಗಳಿಗೆಲ್ಲ ಆಶ್ರಯಭೂತನೇ! ಪ್ರಸನ್ನನಾಗು.

**ಕಿರೀಟಿನಂ ಗದಿನಂ ಚಕ್ರಹಸ್ತಮಿಚ್ಛಾಮಿ**
**ತ್ವಾಂ ದ್ರಷ್ಟುಮಹಂ ತಥೈವ ।**
**ತೇನೈವ ರೂಪೇಣ ಚತುರ್ಭುಜೇನ**
**ಸಹಸ್ರಬಾಹೋ ಭವ ವಿಶ್ವಮೂರ್ತೇ** || ೪೬ ||

ಮೊದಲಿನಂತೆಯೇ ಕಿರೀಟಧಾರಿಯಾದ, ಗದೆಯನ್ನು ಧರಿಸಿದ, ಕ್ರವನ್ನು ಹಿಡಿದ ನಿನ್ನನ್ನು ನೋಡಲು ನಾನು ಬಯಸುತ್ತೇನೆ. ಸಹಸ್ರ ಾಹುಗಳುಳ್ಳವನಾಗಿಯೂ, ವಿಶ್ವಶರೀರಕನಾಗಿಯೂ ತೋರುತ್ತಿರುವ ನು ನಿನ್ನ ಆ ಚತುರ್ಭುಜ ರೂಪವನ್ನೇ ಧರಿಸು.

**ಶ್ರೀ ಭಗವಾನುವಾಚ—**

**ಮಯಾ ಪ್ರಸನ್ನೇನ ತವಾರ್ಜುನೇದಂ**
**ರೂಪಂ ಪರಂ ದರ್ಶಿತಮಾತ್ಮಯೋಗಾತ್ ।**
**ತೇಜೋಮಯಂ ವಿಶ್ವಮನನ್ತಮಾದ್ಯಂ**
**ಯನ್ಮೇ ತ್ವದನ್ಯೇನ ನ ದೃಷ್ಟಪೂರ್ವಂ** || ೪೭ ||

ಶ್ರೀ ಭಗವಂತನು ಹೇಳಿದನು—

ಅರ್ಜುನನೇ! ಪ್ರಸನ್ನನಾದ ನಾನು ತೇಜೋರಾಶಿಯೂ, ವಿಶ್ವವ್ಯಾಪಕವೂ, ಅಂತರಹಿತವೂ, ಎಲ್ಲಕ್ಕೂ ಆದಿಯೂ ಆದ ಈ ನನ್ನ ಶ್ರೇಷ್ಠವಾದ ರೂಪವನ್ನು ನನ್ನ ಸತ್ಯಸಂಕಲ್ಪತ್ವ ಯೋಗದಿಂದ ನಿನಗೆ ತೋರಿಸಿದೆನು. ಅದನ್ನು ನೀನಲ್ಲದೆ ಮತ್ತಾವನೂ ಈವರೆಗೆ ನೋಡಿಲ್ಲ.

(ಸಂಗತಿ : ಅದೇಕೆ ಯಾವನೂ ನೋಡಿಲ್ಲ? ಒಂದಲ್ಲ, ಒಂದು ಉಪಾಯದಿಂದ ನೋಡಬಹುದಲ್ಲವೆ?—ಎಂದರೆ, ಅನನ್ಯಭಕ್ತಿಯಿಂದ ಹೊರತು ಬೇರೆ ಯಾವ ಉಪಾಯಗಳಿಂದಲೂ ನನ್ನನ್ನು ನಿಜಸ್ವರೂಪದಿಂದ ನೋಡಲು ಸಾಧ್ಯವಿಲ್ಲವೆನ್ನುತ್ತಾನೆ.)

**ನ ವೇದ ಯಜ್ಞಾಧ್ಯಯನೈರ್ನ ದಾನೈರ್ನ ಚ**
**ಕ್ರಿಯಾಭಿರ್ನ ತಪೋಭಿರುಗ್ರೈಃ ।**
**ಏವಂರೂಪ ಶ್ಯಕ್ಯ ಅಹಂ ನೃಲೋಕೇ**
**ದ್ರಷ್ಟುಂ ತ್ವದನ್ಯೇನ ಕುರುಪ್ರವೀರ ॥ ೪೮ ॥**

ಕುರುಶ್ರೇಷ್ಠನೇ! (ಏಕಾಂತವೂ, ಆತ್ಯಂತಿಕವೂ ಆದ ಭಕ್ತಿಯುಳ್ಳ) ನಿನ್ನನ್ನುಳಿದು ಇನ್ನಾವನೂ ನಿಜಸ್ವರೂಪದಿಂದ ಇರುವ ನನ್ನನ್ನು ನರಲೋಕದಲ್ಲಿ, ಕೇವಲ ವೇದಗಳಿಂದ, ಯಜ್ಞಗಳಿಂದ, ಅಧ್ಯಯನಗಳಿಂದ, ದಾನಗಳಿಂದ, ಇತರ ಹೋಮಾದಿ ಕ್ರಿಯೆಗಳಿಂದ ಮತ್ತು ಉಗ್ರ ತಪಸ್ಸುಗಳಿಂಧ ನೋಡಲು ಸಮರ್ಥನಾಗನು.

**ಮಾ ತೇ ವ್ಯಥಾ ಮಾ ಚ ವಿಮೂಢಭಾವೋ**
**ದೃಷ್ಟ್ವಾ ರೂಪಂ ಘೋರಮೀದೃಙ್ಮಮೇದಂ ।**
**ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂ**
**ತದೇವ ಮೇ ರೂಪಮಿದಂ ಪ್ರಪಶ್ಯ ॥ ೪೯ ॥**

ನನ್ನ ಈ ಬಗೆಯ ಘೋರರೂಪವನ್ನು ಕಂಡುದರಿಂದ ನಿನಗೆ ಉಂಟಾಗಿದ್ದ ವ್ಯಥೆ ಮತ್ತು ಭ್ರಾಂತಿಯು ಇನ್ನು ಇರಬೇಡ. ನಿರ್ಭಯನೂ ಹೃಷ್ಟಚಿತ್ತನೂ ಆಗಿ ನಿನಗೆ ಪರಿಚಿತವಾದ ಅದೇ ಸೌಮ್ಯರೂಪವನ್ನು ನೋಡು.

**ಸಂಜಯ ಉವಾಚ—**

**ಇತ್ಯರ್ಜುನಂ ವಾಸುದೇವಸ್ತಥೋಕ್ತ್ವಾ**
**ಸ್ವಕಂ ರೂಪಂ ದರ್ಶಯಾಮಾಸ ಭೂಯಃ ।**
**ಆಶ್ವಾಸಯಾಮಾಸ ಚ ಭೀತಮೇನಂ**
**ಭೂತ್ವಾ ಪುನಸ್ಸೌಮ್ಯವಪುರ್ಮಹಾತ್ಮಾ ॥ ೫೦ ॥**

ಸಂಜಯನು ಹೇಳಿದನು—

ಹೀಗೆ ವಾಸುದೇವನು ಅರ್ಜುನನಿಗೆ ನುಡಿದು ಮತ್ತೆ ತನ್ನ (ಈ ಅವತಾರಕ್ಕೆ ಸಹಜವಾದ ಚತುರ್ಭುಜ) ರೂಪವನ್ನು ತೋರಿಸಿದನು. (ಅಪರಿಚಿತ ಸ್ವರೂಪದರ್ಶನದಿಂದ) ಹೆದರಿದ ಇವನನ್ನು ಸತ್ಯ ಸಂಕಲ್ಪನಾದ ಶ್ರೀ ಕೃಷ್ಣನು (ಪರಿಚಿತವಾದ) ಸೌಮ್ಯರೂಪವನ್ನು ಮತ್ತೆ ತಳೆದು ಸಮಾಧಾನಗೊಳಿಸಿದನು.

**ಅರ್ಜುನ ಉವಾಚ—**

**ದೃಷ್ಟ್ವೇದಂ ಮಾನುಷಂ ರೂಪಂ ತವ ಸೌಮ್ಯಂ ಜನಾರ್ದನ ।**
**ಇದಾನೀಮಸ್ಮಿ ಸಂವೃತ್ತಸ್ಸಚೇತಾಃ ಪ್ರಕೃತಿಂ ಗತಃ ॥ ೫೧ ॥**

ಅರ್ಜುನನು ಎಂದನು—

ಜನಾರ್ದನನೇ ! ನಿನ್ನ ಅತಿ ಸೌಮ್ಯವಾದ ಈ ಮನುಷ್ಯರೂಪವನ್ನು ಕಂಡು ನಾನು ಈಗ ಸಚೇತನನೂ ಶಾಂತಚಿತ್ತನೂ ಆಗಿದ್ದೇನೆ.

**ಶ್ರೀ ಭಗವಾನುವಾಚ—**

**ಸುದುರ್ದರ್ಶಮಿದಂ ರೂಪಂ ದೃಷ್ಟವಾನಸಿ ಯನ್ಮಮ ।**
**ದೇವಾ ಅಪ್ಯಸ್ಯ ರೂಪಸ್ಯ ನಿತ್ಯಂ ದರ್ಶನಕಾಂಕ್ಷಿಣಃ ॥ ೫೨ ॥**

ಭಗವಂತನು ಎಂದನು—

ನೀನು ನೋಡಿದ ನನ್ನ ರೂಪವು ಕಾಣಲು ಅತ್ಯಂತ ದುರ್ಲಭವು. ದೇವತೆಗಳೂ ಈ ರೂಪವನ್ನು ನೋಡಲು ನಿತ್ಯವೂ ಆಸಕ್ತರಾಗಿರುವರು.

(ಸಂಗತಿ : ಏಕೆಂದರೆ ?)

**ನಾಹಂ ವೇದೈರ್ನ ತಪಸಾ ನ ದಾನೇನ ನ ಚೇಜ್ಯಯಾ ।**
**ಶಕ್ಯ ಏವಂ ವಿಧೋ ದ್ರಷ್ಟುಂ ದೃಷ್ಟವಾನಸಿ ಮಾಂ ಯಥಾ ॥೫೩॥**

**ಭಕ್ತ್ಯಾ ತ್ವನನ್ಯಯಾ ಶಕ್ಯ ಅಹಮೇವಂ ವಿಧೋಽರ್ಜುನ ।**
**ಜ್ಞಾತುಂ ದ್ರಷ್ಟುಂ ಚ ತತ್ತ್ವೇನ ಪ್ರವೇಷ್ಟುಂ ಚ ಪರನ್ತಪ ॥೫೪॥**

ನೀನು ನೋಡಿದ ಈ ನನ್ನ ದರ್ಶನವು (ನನ್ನಲ್ಲಿ ಭಕ್ತಿರಹಿತವಾದ ಕೇವಲ) ವೇದಗಳಿಂದ ಆಗದು ; ತಪಸ್ಸಿನಿಂದ ಆಗದು ; ಯಜ್ಞದಿಂದಲೂ

ಆಗದು. ಆದರೆ, ಅರ್ಜುನನೇ! ಅನನ್ಯಭಕ್ತಿಯಿಂದ ಈ ವಿಧವಾದ ನನ್ನನ್ನು ತತ್ತ್ವತಃ ತಿಳಿಯಲು, ತತ್ತ್ವತಃ ನೋಡಲು ಮತ್ತು ಪರಿಪೂರ್ಣ ವಾಗಿ ಅನುಭವಿಸಲು ಶಕ್ಯವು.

(ಸಂಗತಿ : ಈಗ "ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷಂತಿ ಯಜ್ಞೇನ, ದಾನೇನ ತಪಸಾಽನಾಶಕೇನ" ಇತ್ಯಾದಿ ಶ್ರುತಿ ವಿರೋಧ ಪರಿಹಾರಕ್ಕಾಗಿ, ವೇದಾನುವಚನಾದಿಗಳೆಲ್ಲವೂ ಭಕ್ತಿಗೆ ಅಂಗ ಗಳೆಂದು ಹೇಳಿ, "ಪ್ರವೇಷ್ಟುಂ"—ಎಂಬುದರಿಂದ ಹೇಳಿದ ಭಗವತ್ಪ್ರಾಪ್ತಿಗೆ ಕಾರಣವಾದ ಭಕ್ತಿಯ ಅವಸ್ಥಾ ವಿಶೇಷವನ್ನು ವ್ಯಕ್ತಪಡಿಸುತ್ತಾನೆ.

**ಮತ್ಕರ್ಮಕೃನ್ಮತ್ಪರಮೋ ಮದ್ಭಕ್ತಸ್ಸಙ್ಗವರ್ಜಿತಃ ।**
**ನಿರ್ವೈರಸ್ಸರ್ವಭೂತೇಷು ಯಸ್ಸ ಮಾಮೇತಿ ಪಾಂಡವ ॥ ೫೫ ॥**

ಪಾಂಡವನೇ! ವೇದಾಧ್ಯಯನಾದಿ ಸಕಲ ಕರ್ಮಗಳನ್ನೂ ನನ್ನ ಆರಾಧನಕ್ಕಾಗಿ ಮಾಡುತ್ತ, ನನ್ನನ್ನೇ ಪರಮೋದ್ದೇಶ್ಯವಾಗಿ ಭಾವಿಸಿ, (ನನ್ನ ಪ್ರಯೋಜನಕ್ಕಾಗಿಯೇ) ಸದಾ ನನ್ನ ಕೀರ್ತನ-ಸ್ತುತಿ-ಧ್ಯಾನ ಮುಂತಾದುವನ್ನು ಮಾಡುತ್ತ, (ನನ್ನ ಮೇಲಣ ಅತ್ಯಂತ ಪ್ರೇಮದಿಂದ ನನ್ನನ್ನುಳಿದು) ಇತರ ಸಂಗವನ್ನು ಸಹಿಸದೆ, (ಎಲ್ಲವೂ ನನಗೆ ಅಧೀನವೆಂಬ ಭಾವನೆಯಿಂದ) ಸರ್ವಭೂತಗಳಲ್ಲಿಯೂ ವೈರವಿಲ್ಲದೆ ಯಾವನು ಇರು ವನೋ ಅವನು ನನ್ನನ್ನೇ ಪಡೆಯುವನು.

ಇಲ್ಲಿಗೆ ಶ್ರೀ ವಿಶ್ವರೂಪಸಂದರ್ಶನಯೋಗವೆಂಬ ಹನ್ನೊಂದನೆಯ ಅಧ್ಯಾಯ ಮುಗಿಯಿತು.

# ಅಧ್ಯಾಯ ೧೨
# ಭಕ್ತ್ಯಾರೋಹಕ್ರಮ

ಭಕ್ತಿಯೋಗಿಗಳಿಗೆ ಪ್ರಾಪ್ಯನಾದ ಪರಮಪುರುಷನ ನಿರಂಕುಶೈಶ್ವರ್ಯವನ್ನು ಕಾಣಲು ಬಯಸಿದ ಅರ್ಜುನನಿಗೆ ಅನವಧಿಕಾತಿಶಯ ಕಾರುಣ್ಯೌದಾರ್ಯ ಸೌಶೀಲ್ಯಾದಿ ಗುಣಸಾಗರನಾದ ಭಗವಂತನು ಅದನ್ನು ಯಥಾವಸ್ಥಿತವಾಗಿ ತೋರಿಸಿದನು. ಭಗವಂತನ ಜ್ಞಾನ-ದರ್ಶನ-ಪ್ರಾಪ್ತಿಗಳು ಅವನ ವಿಷಯವಾದ ಭಕ್ತಿಯಿಂದ ಮಾತ್ರವೇ ಲಭ್ಯವೆಂದೂ ಹೇಳಲಾಯಿತು. ತರುವಾಯ, ಆತ್ಮಪ್ರಾಪ್ತಿಗೆ ಸಾಧನವಾದ ಜ್ಞಾನಯೋಗಕ್ಕಿಂತ ಭಗವತ್ಪ್ರಾಪ್ತಿಗೆ ಸಾಧನವಾದ ಭಕ್ತಿಯೋಗವು ಸುಕರವೂ ಶೀಘ್ರಫಲಪ್ರದವೂ ಆದುದರಿಂದ ಅತಿಶ್ರೇಷ್ಠವೆಂದೂ ಹೇಳಿ, ಆ ಭಕ್ತಿಯೋಗದ ಉಪಾಯವೂ, ಅದರಲ್ಲಿ ಶಕ್ತಿಯಿಲ್ಲದವನಿಗೆ ಜ್ಞಾನಯೋಗವೂ, ಮತ್ತು ಅದರ ಸಹಕಾರಿಗಳೂ ಇಲ್ಲಿ ಹೇಳಲ್ಪಡುತ್ತವೆ.

**ಅರ್ಜುನ ಉವಾಚ—**

**ಏವಂ ಸತತಯುಕ್ತಾ ಯೇ ಭಕ್ತಾಸ್ತ್ವಾಂ ಪರ್ಯುಪಾಸತೇ ।**
**ಯೇ ಚಾಪ್ಯಕ್ಷರಮವ್ಯಕ್ತಂ ತೇಷಾಂ ಕೇ ಯೋಗವಿತ್ತಮಾಃ ॥೧॥**

ಅರ್ಜುನನು ಹೇಳಿದನು—

"ಮತ್ಕರ್ಮಕೃತ್" (11–55) — ಇತ್ಯಾದಿಯಿಂದ ಹೇಳಿದಂತೆ ನಿನ್ನೊಡನೆಯೇ ನಿತ್ಯಯೋಗವನ್ನು ಬಯಸುವ ಭಕ್ತರು ಪರಿಪೂರ್ಣನಾದ ನಿನ್ನನ್ನು ಉಪಾಸಿಸುತ್ತಾರೆ. ಬೇರೆಯವರು ಚಕ್ಷುರಾದಿಗಳಿಗೆ ಅಗೋಚರವಾದ ಪ್ರತ್ಯಗಾತ್ಮಸ್ವರೂಪವನ್ನು (ಅಕ್ಷರಂ) ಉಪಾಸಿಸುತ್ತಾರೆ. ಈ ಎರಡು ಬಗೆಯ ಉಪಾಸಕರೊಳಗೆ ಯೋಗವಿತ್ತಮರು (ಶೀಘ್ರವಾಗಿ ಫಲವನ್ನು ಪಡೆಯುವರು) ಯಾರು ?

(ಟಿಪ್ಪಣಿ : "ಭವಾಮಿ ನ ಚಿರಾತ್ ಪಾರ್ಥ" (12–7)—ಎಂಬು

ಮುಂದೆ ಹೇಳುವುದರಿಂದ ಇಲ್ಲಿ ಯೋಗವಿತ್ತಮರೆಂಬುದು ಶೀಘ್ರಫಲ ಸಿದ್ಧಿ ಯಾಗುವವರ ವಿಷಯವೆಂದು ಅರ್ಥವಾಗುವುದು.)

**ಶ್ರೀ ಭಗವಾನುವಾಚ—**

**ಮಯ್ಯಾವೇಶ್ಯ ಮನೋ ಯೇ ಮಾಂ ನಿತ್ಯಯುಕ್ತಾ ಉಪಾಸತೇ**
**ಶ್ರದ್ಧಯಾ ಪರಯೋಪೇತಾಸ್ತೇ ಮೇ ಯುಕ್ತತಮಾ ಮತಾಃ ||**

ಶ್ರೀ ಭಗವಂತನು ಹೇಳಿದನು—

ನನ್ನಲ್ಲಿ ಮನಸ್ಸನ್ನಿಟ್ಟು ನನ್ನೊಡನೆ ನಿತ್ಯಯೋಗವನ್ನು ಬಯಸುತ್ತ ಪರಮ ಶ್ರದ್ಧೆಯಿಂದ ನನ್ನನ್ನು ಉಪಾಸಿಸುವವರು ಸುಖವಾಗಿಯೂ, ಶೀಘ್ರ ವಾಗಿಯೂ ನನ್ನನ್ನು ಪಡೆಯುವವರೆಂದು ನಾನು ಎಣಿಸುತ್ತೇನೆ.

(ಸಂಗತಿ : ಈಗ ಜೀವಾತ್ಮೋಪಾಸಕರಿಗೆ (ಅಕ್ಷರನಿಷ್ಠರಿಗೆ) ಅಪ ಕರ್ಷತೆಯನ್ನು ಹೇಳುತ್ತಾನೆ.)

**ಯೇ ತ್ವಕ್ಷರಮನಿರ್ದೇಶ್ಯಂ ಅವ್ಯಕ್ತಂ ಪರ್ಯುಪಾಸತೇ |**
**ಸರ್ವತ್ರಸಮಚಿನ್ತ್ಯಂ ಚ ಕೂಟಸ್ಥಮಚಲಂ ಧ್ರುವಂ || ೩ ||**

**ಸನ್ನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ |**
**ತೇ ಪ್ರಾಪ್ನುವಂತಿ ಮಾಮೇವ ಸರ್ವಭೂತಹಿತೇ ರತಾಃ || ೪ ||**

**ಕ್ಲೇಶೋಽಧಿಕತರಸ್ತೇಷಾಂ ಅವ್ಯಕ್ತಾಸಕ್ತಚೇತಸಾಂ |**
**ಅವ್ಯಕ್ತಾ ಹಿ ಗತಿರ್ದುಃಖಂ ದೇಹವದ್ಭಿರವಾಪ್ಯತೇ || ೫ ||**

ಇಂದ್ರಿಯ ಸಮುದಾಯವನ್ನು ನಿಗ್ರಹಿಸಿ (ಆತ್ಮರೆಲ್ಲರೂ ಜ್ಞಾನೈಕಾ ಕಾರರಾದುದರಿಂದ) ದೇವಾದಿ ದೇಹಗಳು ವಿಷಮಾಕಾರಗಳಾಗಿದ್ದರೂ ಅವೆಲ್ಲದರೊಳಗೆ ಇರತಕ್ಕ ಆತ್ಮರಲ್ಲಿ ಸಮದೃಷ್ಟಿಯುಳ್ಳವರೂ, ಎಲ್ಲ ಪ್ರಾಣಿ ಗಳ ಹಿತದಲ್ಲಿ ನಿರತರೂ ಆಗಿ, (ದೇಹಕ್ಕಿಂತ ಭಿನ್ನವಾದುದರಿಂದ) ದೇವಾದಿ ಶಬ್ದಗಳಿಂದ ನಿರ್ದೇಶಿಸಲು ಯೋಗ್ಯವಲ್ಲದ, (ಅನಿರ್ದೇಶ್ಯ) ಚಕ್ಷುರಾದಿ ಇಂದ್ರಿಯಗಳಿಗೆ ವ್ಯಕ್ತವಾಗದ (ಅವ್ಯಕ್ತ) ದೇವಾದಿ ದೇಹಗಳಲ್ಲಿ ಇರುತ್ತಿ ದ್ದರೂ ಅವುಗಳಿಗಿಂತ ವಿಜಾತೀಯವಾದುದರಿಂದ ಆಯಾ ದೇವಾದಿ ರೂಪ

ದಿಂದ ಚಿಂತಿಸಲು ಅರ್ಹವಲ್ಲದ (ಸರ್ವತ್ರಗಂ, ಅಚಿಂತ್ಯಂಚ) (ಆದುದರಿಂದಲೇ) ಆ ದೇವಾದ್ಯಸಾಧಾರಣಾಕಾರದೊಡನೆ ಸಂಬದ್ಧವಲ್ಲದ (ಕೂಟಸ್ಥಂ) (ಅಪರಿಣಾಮಿಯಾದುದರಿಂದ) ಸ್ವಾಸಾಧಾರಣಾಕಾರದಿಂದ ಚಲಿಸದ (ಅಚಲಂ), (ಆದುದರಿಂದಲೇ) ನಿತ್ಯ (ಧ್ರುವ) ವಾದ ಅಕ್ಷರ (ಜೀವಾತ್ಮ ಸ್ವರೂಪ) ವನ್ನು ಉಪಾಸಿಸುವವರೂ ಕೂಡ ನನ್ನನ್ನೇ (ನನಗೆ ಸಮಾನಾಕಾರವಾದ ಮುಕ್ತಾತ್ಮ ಸ್ವರೂಪವನ್ನು) ಪಡೆದೇ ಪಡೆಯುವರು. (ಆದರೆ) ಆ ಆತ್ಮನಿಷ್ಠರಿಗೆ ಕ್ಲೇಶವು ಹೆಚ್ಚು. ಏಕೆಂದರೆ, ದೇಹಾತ್ಮಾಭಿಮಾನಿಗಳು ಅವ್ಯಕ್ತ (ಜೀವಾತ್ಮ) ವಿಷಯವಾದ ಮನೋವೃತ್ತಿಯನ್ನು ಕಷ್ಟದಿಂದ ಪಡೆವರು. (ದೇಹವಂತರು ದೇಹವನ್ನೇ ಆತ್ಮವೆಂದು ತಿಳಿಯುವರು ಎಂದು ಭಾವ.)

(ಸಂಗತಿ: ಭಗವಂತನನ್ನು ಉಪಾಸಿಸುವವರು ಯುಕ್ತತಮರೆಂದು ಸುವ್ಯಕ್ತವಾಗಿ ಹೇಳುತ್ತಾನೆ)

**ಯೇ ತು ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಾಃ ।**
**ಅನನ್ಯೇನೈವ ಯೋಗೇನ ಮಾಂ ಧ್ಯಾಯಂತ ಉಪಾಸತೇ ॥ ೬ ॥**
**ತೇಷಾಮಹಂ ಸಮುದ್ಧರ್ತಾ ಮೃತ್ಯುಸಂಸಾರಸಾಗರಾತ್ ।**
**ಭವಾಮಿ ನ ಚಿರಾತ್ ಪಾರ್ಥ ಮಯ್ಯಾವೇಶಿತಚೇತಸಾಂ ॥ ೭ ॥**

ಅರ್ಜುನನೆ! ಎಲ್ಲ ಕರ್ಮಗಳನ್ನೂ ನನಗೆ ಅರ್ಪಿಸಿ, ನನ್ನಲ್ಲಿ ಪರಾಯಣರಾಗಿ, ಅನನ್ಯಪ್ರಯೋಜನವಾದ ಯೋಗದಿಂದ ನನ್ನನ್ನು ಸ್ಮರಿಸುತ್ತ ಉಪಾಸಿಸುವ ನನ್ನಲ್ಲಿಯೇ ಏಕಾಗ್ರಬುದ್ಧಿಯುಳ್ಳ ಅವರನ್ನು ನನ್ನ ಪ್ರಾಪ್ತಿಗೆ ವಿರೋಧಿಯಾದ ಸಂಸಾರ ಸಾಗರದಿಂದ ಬೇಗನೆ ನಾನು ಉದ್ಧರಿಸುವೆನು.

**ಮಯ್ಯೇವ ಮನ ಆಧತ್ಸ್ವ ಮಯಿ ಬುದ್ಧಿಂ ನಿವೇಶಯ ।**
**ನಿವಸಿಷ್ಯಸಿ ಮಯ್ಯೇವ ಅತ ಊರ್ಧ್ವಂ ನ ಸಂಶಯಃ ॥ ೮ ॥**

(ನಾನು ಅತಿಶಯ ಪುರುಷಾರ್ಥ ಭೂತನೂ ಶ್ರೀಘ್ರದಿಂದ ಲಭ್ಯನೂ ಆದುದರಿಂದ) ನನ್ನಲ್ಲಿಯೇ ಮನಸ್ಸನ್ನಿಡು; ನಾನೇ ಪರಮಪ್ರಾಪ್ಯನೆಂಬುದನ್ನು ನಿರ್ಧರ ಮಾಡಿಕೋ. ಬಳಿಕ ನೀನು ನನ್ನಲ್ಲಿಯೇ ಇರುವೆ. ಇದರಲ್ಲಿ ಸಂಶಯವಿಲ್ಲ.

(ಸಂಗತಿ : ಶಬ್ದಾದಿ ವಿಷಯವಾಸನೆಯಿಂದ ಆಕೃಷ್ಟವಾದ ಮನಸ್ಸನ್ನು ಳ್ಳವನು ಅತ್ಯಂತ ಅಪರಿಚಿತನಾದ ನಿನ್ನಲ್ಲಿ ಸ್ಥಿರವಾಗಿ ಮನಸ್ಸನ್ನು ಇಡುವುದು ಹೇಗೆ ?—ಎಂದರೆ, ಅದಕ್ಕೆ ಉಪಾಯವನ್ನು ಉಪದೇಶಿಸುತ್ತಾನೆ ;-)

**ಅಥ ಚಿತ್ತಂ ಸಮಾಧಾತುಂ ನ ಶಕ್ನೋಷಿ ಮಯಿ ಸ್ಥಿರಂ ।**
**ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ ಧನಂಜಯ ॥೯॥**

(ಕೂಡಲೆ) ನನ್ನಲ್ಲಿ ಮನಸ್ಸನ್ನು ಸ್ಥಿರವಾಗಿ ಇಡಲು ನೀನು ಅಸಮರ್ಥನಾಗಿದ್ದರೆ, (ನನ್ನಲ್ಲಿ ನಿರತಿಶಯಪ್ರೇಮಗರ್ಭವಾದ) ಸ್ಮೃತ್ಯಭ್ಯಾಸವೆಂಬ ಯೋಗದಿಂದ ನನ್ನನ್ನು ಪಡೆಯಲು ಬಯಸು.

(ಸಂಗತಿ : ಅನಾಗಿಕಾಲದಿಂದ ಅಭ್ಯಸ್ತವೂ ಪ್ರತ್ಯಕ್ಷವೂ ಶೀಘ್ರದಲ್ಲಿ ಲಭಿಸತಕ್ಕುವೂ ಆದ ಭೋಗ್ಯವಸ್ತುಗಳಲ್ಲಿಯೇ ಮನಸ್ಸು ಪ್ರಸಕ್ತವಾಗುವುದರಿಂದ, ಅದನ್ನು ನಿಗ್ರಹಿಸುವುದು ಅಸಾಧ್ಯ. ಆಯಾ ವಾಸನಾನುಗುಣವಾಗಿ ಕರ್ಮಗಳಲ್ಲಿಯೇ ಮನಸ್ಸು ಪ್ರವರ್ತಿಸುವುದು ! ನೀನು ಎಷ್ಟು ಗುಣವಂತನೂ ವಿಶುದ್ಧನೂ ಆದರೂ ನಿನ್ನ ಸ್ಮೃತಿಯನ್ನು ಅಭ್ಯಾಸ ಮಾಡುವುದು ಹೇಗೆ ?—ಎಂದರೆ, ಆ ಮನೋವಾಸನೆಗೆ ಅನುಸಾರವಾದ ಅಭ್ಯಾಸೋಪಾಯವನ್ನೇ ಉಪದೇಶಿಸುತ್ತಾನೆ.)

**ಅಭ್ಯಾಸೇಽಪ್ಯಸಮರ್ಥೋಽಸಿ ಮತ್ಕರ್ಮಪರಮೋ ಭವ ।**
**ಮದರ್ಥಮಪಿ ಕರ್ಮಾಣಿ ಕುರ್ವನ್ ಸಿದ್ಧಿಮವಾಪ್ಸ್ಯಸಿ ॥ ೧೦ ॥**

(ಇಂತಹ ಸ್ಮೃತಿಯ) ಅಭ್ಯಾಸವೂ ನಿನ್ನಿಂದಾಗದಿದ್ದರೆ, ನನಗಾಗಿ (ಆಲಯ ನಿರ್ಮಾಣ, ಉದ್ಯಾನಕರಣ, ದೀಪಾರೋಪಣ, ಮಾರ್ಜನ, ಅಭ್ಯುಕ್ಷಣ, ಉಪಲೇಪನ-ಪುಷ್ಪಾಹರಣ-ಪೂಜಾಪ್ರವರ್ತನ, ನಾಮ ಸಂಕೀರ್ತನ-ಪ್ರದಕ್ಷಿಣ-ಸ್ತುತಿ-ನಮಸ್ಕಾರ ಮುಂತಾದ) ಕರ್ಮಗಳನ್ನು ಅತಿ ಪ್ರೀತಿಯಿಂದ ಮಾಡು. (ಹೀಗೆ) ನನಗಾಗಿಯೇ ಕರ್ಮಗಳನ್ನು ಮಾಡುವವನಾದರೂ ಕೂಡ, ನೀನು (ನನ್ನಲ್ಲಿ ಸ್ಥಿರವಾದ ಚಿತ್ತಸ್ಥಿತಿಯನ್ನು ಹೊಂದುವುದರ ಮೂಲಕ (ಸಿದ್ಧಿಯನ್ನು ಪಡೆಯುವೆ. ನನ್ನನ್ನು ಪಡೆಯುವೆ.)

(ಸಂಗತಿ : ಸ್ವಾರ್ಥಕ್ಕೋಸ್ಕರವಾದ ಕರ್ಮಗಳಲ್ಲಿಯೇ ಚಿತ್ತವು ನಿಬದ್ಧವಾಗಿರುವುದರಿಂದ, ನಿನಗೋಸ್ಕರ ಭಕ್ತಿಯೋಗದ ಅಂಕುರವಾದ ಕರ್ಮಗಳಲ್ಲಿ ಅದು ಪ್ರೀತಿಯಿಂದ ಪ್ರವರ್ತಿಸುವುದು ಹೇಗೆ?—ಎಂದರೆ, ಹಾಗೆ ಅದು ಸಾಧ್ಯವಾಗದಿದ್ದರೆ ಜೀವಾತ್ಮಯೋಗವನ್ನು ಆಶ್ರಯಿಸಿ, ಅದಕ್ಕೆ ಅಂಕುರವಾದ ಕರ್ಮಯೋಗವನ್ನು ಮಾಡಬೇಕೆಂದು ಜ್ಞಾಪಕಪಡಿಸುತ್ತಾನೆ.

**ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ ।**
**ಸರ್ವಕರ್ಮಫಲತ್ಯಾಗಂ ತತಃ ಕುರು ಯತಾತ್ಮವಾನ್ ॥ ೧೧ ॥**

ಭಕ್ತಿಯೋಗವನ್ನು ಆಶ್ರಯಿಸಿ ಅದಕ್ಕೆ ಅಂಕುರವಾದ ಕರ್ಮಗಳನ್ನು ನನಗಾಗಿ ಪ್ರೀತಿಯಿಂದ ಮಾಡಲು ನೀನು ಅಸಮರ್ಥನಾಗಿದ್ದರೆ, ಆಗ ಮನಸ್ಸನ್ನು ನಿಗ್ರಹಿಸಿದವನಾಗಿ, ಫಲಸಂಗವಿಲ್ಲದ ಮತ್ತು ನನ್ನ ಆರಾಧನ ರೂಪವಾದ ಕರ್ಮಯೋಗವನ್ನು ಮಾಡು. (ಇದರಿಂದ ಜ್ಞಾನಯೋಗವು ಸಿದ್ಧಿಸಿ ನನ್ನಲ್ಲಿ ಶೇಷತ್ವೈಕರತಿಯಾದ ಪ್ರತ್ಯಗಾತ್ಮನ ಸಾಕ್ಷಾತ್ಕಾರವಾಗು ವುದು. ಅದರಿಂದ ನನ್ನಲ್ಲಿ ಭಕ್ತಿಯು ತಾನಾಗಿಯೇ ಉದಯಿಸುವುದು— ಎಂದು ಭಾವ.)

(ಸಂಗತಿ : ಅನಂತರ, ಭಗವತ್ಪ್ರಾಪ್ತಿಗೆ ಸಾಕ್ಷಾತ್ತಾಗಿ ಉಪಾಯ ವಾದ ಭಕ್ತಿಯೋಗದಲ್ಲಿ ಅಧಿಕಾರವಿಲ್ಲದ ಪ್ರಯುಕ್ತ ಉಂಟಾಗಬಹುದಾದ ಖೇದವನ್ನು ಹೋಗಲಾಡಿಸುವುದಕ್ಕಾಗಿಯೂ, ಅಶಕ್ಯವಾದ ಉಪಾಯದಲ್ಲಿ ಪ್ರವರ್ತಿಸದಿರುವುದಕ್ಕಾಗಿಯೂ, ಸೌಕರ್ಯಾತಿಶಯವುಳ್ಳ (ವ್ಯವಹಿತ) ಮತ್ತು ಆಯಾ ಅಧಿಕಾರಾನುಗುಣವಾದ, ಪರೋಕ್ಷವಾದ ಉಪಾಯ ಗಳನ್ನೇ ಪ್ರಶಂಸಿಸುತ್ತ ಹಿಂದೆ ಹೇಳಿದುದನ್ನು ಉಪಪಾದಿಸುತ್ತಾನೆ.)

**ಶ್ರೇಯೋ ಹಿ ಜ್ಞಾನಮಭ್ಯಾಸಾತ್ ಜ್ಞಾನಾದ್ಧ್ಯಾನಂ ವಿಶಿಷ್ಯತೇ ।**
**ಧ್ಯಾನಾತ್ಕರ್ಮಫಲತ್ಯಾಗಃ ತ್ಯಾಗಾಚ್ಛಾಂತಿರನಂತರಂ ॥ ೧೨ ॥**

(ಅತ್ಯರ್ಥ ಪ್ರೀತಿವಿರಹಿತವೂ ಆದುದರಿಂದಲೇ ಕರ್ಕಶವೂ ಆದ) ಸ್ಮೃತ್ಯಭ್ಯಾಸಕ್ಕಿಂತ ಆತ್ಮಸಾಕ್ಷಾತ್ಕಾರರೂಪ ಜ್ಞಾನವನ್ನು ಪಡೆಯುವುದು ಶ್ರೇಯಸ್ಕರವು. (ಇದು ನಿಷ್ಪನ್ನವಾಗದಿದ್ದರೆ ಆಗ) ಈ ಆತ್ಮಸಾಕ್ಷಾತ್ಕಾರ ಜ್ಞಾನಕ್ಕಿಂತಲೂ ಇದಕ್ಕೆ ಉಪಾಯವಾದ (ಆತ್ಮಧ್ಯಾನವು) ಜ್ಞಾನ

ಯೋಗವು ಶ್ರೇಯಸ್ಕರವು (ಈ ಜ್ಞಾನಯೋಗವೂ ಇನ್ನೂ ನಿಷ್ಪನ್ನವಾಗದಿದ್ದಲ್ಲಿ,—ಆಗ) ಆ ಜ್ಞಾನಯೋಗಕ್ಕಿಂತ ಅದಕ್ಕೂ ಮೂಲವಾದ ಕರ್ಮಯೋಗ (ಕರ್ಮಫಲತ್ಯಾಗ) ವು ಶ್ರೇಯಸ್ಕರವು. ಫಲತ್ಯಾಗಪೂರ್ವಕವಾಗಿ ಅನುಷ್ಠಿತವಾದ ಕರ್ಮದಿಂದ (ಕರ್ಮಯೋಗದಿಂದ) ಬೇಗನೆ ಶಾಂತಿ ದೊರಕುವುದು.

(ಸಂಗತಿ: ಫಲತ್ಯಾಗಪೂರ್ವಕ ಕರ್ಮಗಳಲ್ಲಿ ನಿಷ್ಠನಾದವನಿಗೆ ಆವಶ್ಯಕವಾದ ಗುಣಗಳನ್ನು ಹೇಳುತ್ತಾನೆ ;)

**ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣ ಏವ ಚ ।**
**ನಿರ್ಮಮೋ ನಿರಹಂಕಾರಃ ಸಮದುಃಖಸುಖಃ ಕ್ಷಮೀ ॥ ೧೩ ॥**

**ಸನ್ತುಷ್ಟಸ್ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ ।**
**ಮಯ್ಯರ್ಪಿತಮನೋಬುದ್ಧಿಃ ಯೋ ಮದ್ಭಕ್ತಸ್ಸ ಮೇ ಪ್ರಿಯಃ ॥**

(ವಿದ್ವೇಷಿಗಳು, ಅಪಕಾರಿಗಳು ಮುಂತಾದ) ಎಲ್ಲ ಭೂತಗಳಲ್ಲಿಯೂ ದ್ವೇಷವಿಲ್ಲದವನು. (ದ್ವೇಷವಿಲ್ಲದುದು ಮಾತ್ರವಲ್ಲದೆ, ನನ್ನ ಅಪರಾಧಾನುಗುಣವಾಗಿ ಈಶ್ವರ ಪ್ರೇರಣೆಯಿಂದ ಇವು ನನ್ನನ್ನು ದ್ವೇಷಿಸುತ್ತವೆ ಅಥವಾ ಅಪಕಾರಮಾಡುತ್ತವೆಯೆಂಬ ಭಾವನೆಯಿಂದ ಎಲ್ಲ ಭೂತಗಳ) ಹಿತೈಷಿಯಾದವನು, (ಆ ಭೂತಗಳಿಗೇ ದುಃಖವೊದಗಿದಾಗ ಅವುಗಳಲ್ಲಿ) ದಯೆ ತೋರುವವನೂ, (ದೇಹೇಂದ್ರಿಯಗಳು ಮತ್ತು ಅವುಗಳ ಸಂಬಂಧಿಗಳಲ್ಲಿ) ಮಮತೆಯಿಲ್ಲದವನು, ದೇಹದಲ್ಲಿ ಆತ್ಮವೆಂಬ ಅಭಿಮಾನವಿಲ್ಲದವನು, (ಅಹಂಕಾರ ಮಮಕಾರ ಪ್ರಯುಕ್ತವಾದ) ಸುಖ ದುಃಖಗಳು ಒದಗಿದಾಗ ಹರ್ಷೋದ್ವೇಗಗಳಿಲ್ಲದವನು, (ಅವರ್ಜನೀಯವಾದ ಸಾಂಸ್ಪರ್ಶಿಕ ಸುಖ ದುಃಖಗಳಿಂದ) ವಿಕಾರ ಹೊಂದದವನು, (ತಾನಾಗಿ ದೊರೆತ ಎಂತಹ ದೇಹಧಾರಣ ದ್ರವ್ಯದಿಂದಲಾದರೂ) ಸಂತುಷ್ಟನು, ಯಾವಾಗಲೂ ಪರಿಶುದ್ಧಾತ್ಮಸ್ವರೂಪದ ಧ್ಯಾನದಲ್ಲಿ ನಿರತನು, ಮನೋವೃತ್ತಿಯನ್ನು ನಿಯಮನದಲ್ಲಿಟ್ಟಿರುವವನು, ಅಧ್ಯಾತ್ಮ ಶಾಸ್ತ್ರಾರ್ಥಗಳಲ್ಲಿ ದೃಢನಿಶ್ಚಯವುಳ್ಳವನು, ಮತ್ತು (ಭಗವಂತನಾದ ವಾಸುದೇವನೇ ಫಲಾಭಿಸಂಧಿಯಿಲ್ಲದೆ ಆಚರಿಸುವ ಕರ್ಮದಿಂದ ಆರಾಧ್ಯನು-ಆರಾಧಿತನಾದ ಅವನೇ ನನಗೆ ಆತ್ಮ

ಸಾಕ್ಷಾತ್ಕಾರವನ್ನು ಸಾಧಿಸುವನು ಎಂದು) ಮನೋ ಬುದ್ಧಿಗಳನ್ನು ನನಗೆ ಅರ್ಪಿಸಿದವನೂ ಆದ ನನ್ನ ಭಕ್ತನು (ಹೀಗೆ ಕರ್ಮಯೋಗದಿಂದ ನನ್ನನ್ನು ಭಜಿಸುವವನು) ನನಗೆ ಪ್ರಿಯನು.

(ಸಂಗತಿ: ಅನಂತರ, ಮೇಲೆ ಹೇಳಿದ ನಿರ್ಮಮತ್ವಾದಿಗಳ ಫಲಭೂತವಾದ ಲೋಕೋದ್ವೇಗಕರ ಕರ್ಮಗಳ ತ್ಯಾಗವೆಂಬ ಗುಣವನ್ನು ವಿಧಿಸುತ್ತ, ಅದರ ಫಲವನ್ನೂ ತೋರಿಸುತ್ತಾನೆ.)

**ಯಸ್ಮಾನ್ನೋದ್ವಿಜತೇ ಲೋಕೋ**
**ಲೋಕಾನ್ನೋದ್ವಿಜತೇ ಚ ಯಃ ।**
**ಹರ್ಷಾಮರ್ಷಭಯೋದ್ವೇಗೈಃ**
**ಮುಕ್ತೋ ಯಸ್ಸ ಚ ಮೇ ಪ್ರಿಯಃ ॥ ೧೫ ॥**

ಯಾವ (ಕರ್ಮನಿಷ್ಠ)ನಿಂದ ಲೋಕಕ್ಕೆ ತೊಂದರೆಯಿಲ್ಲವೋ, (ಎಲ್ಲರಿಗೂ ಅವಿರೋಧಿಯಾದುದರಿಂದ) ಯಾವನಿಗೆ ಲೋಕದಿಂದಲೂ ತೊಂದರೆಯಿಲ್ಲವೋ, ಆದುದರಿಂದಲೇ ಯಾರ ವಿಷಯದಲ್ಲಿಯೂ ಹರ್ಷ, ಕ್ರೋಧ, ಭಯ ಮತ್ತು ಉದ್ವೇಗಗಳಿಂದ ಬಿಡಲ್ಪಟ್ಟಿದ್ದಾನೆಯೋ ಅವನೂ ನನಗೆ ಪ್ರಿಯನು.

(ಟಿಪ್ಪಣಿ: ಇಲ್ಲಿ, "ಸ ಚ ಮೇ ಪ್ರಿಯಃ"—ಎಂಬುದರಿಂದ, ಹಿಂದಿನ ಶ್ಲೋಕಗಳಲ್ಲಿ ಹೇಳಿದ ಮೈತ್ರತ್ವ, ಕರುಣತ್ವವೇ ಮುಂತಾದ ಗುಣಗಳು ಇಲ್ಲದಿದ್ದರೂ, ಕರ್ಮಯೋಗಿಯು ಲೋಕದಲ್ಲಿ ಯಾವ ಪ್ರಾಣಿಗೂ ಉದ್ವೇಗವುಂಟಾಗದ ಹಾಗೆ ಮಾತ್ರ ವರ್ತಿಸುವುದರಿಂದಲೂ ಭಗವಂತನಿಗೆ ಪ್ರಿಯನೆಂದು ಭಾವ.)

(ಸಂಗತಿ: ಆತ್ಮಸಾಕ್ಷಾತ್ಕಾರದಲ್ಲಿ ಮಾತ್ರವೇ ಅಪೇಕ್ಷೆಯಿರುವುದರಿಂದ, ಶಾಸ್ತ್ರೀಯವಾದವುಗಳಲ್ಲಿ ಮಾತ್ರ ಜಾಗರೂಕತೆಯೂ ಬೇರೆಯವುಗಳಲ್ಲಿ ಅತ್ಯಂತ ಔದಾಸೀನ್ಯವೂ ಕರ್ಮಯೋಗಿಗೆ ಆವಶ್ಯಕವೆಂದು ಇಲ್ಲಿ ಹೇಳುತ್ತಾನೆ.)

**ಅನಪೇಕ್ಷಶ್ಶುಚಿರ್ದಕ್ಷಃ ಉದಾಸೀನೋ ಗತವ್ಯಥಃ ।**
**ಸರ್ವಾರಂಭಪರಿತ್ಯಾಗೀ ಯೋ ಮದ್ಭಕ್ತಸ್ಸ ಮೇ ಪ್ರಿಯಃ ॥೧೬॥**

ಆತ್ಮವೊಂದನ್ನುಳಿದು ಮಿಕ್ಕ ಎಲ್ಲದರಲ್ಲಿಯೂ ಇಚ್ಛಾರಹಿತನೂ, ಶಾಸ್ತ್ರವಿಹಿತ ದ್ರವ್ಯಗಳಿಂದ ವರ್ಧಿತವಾದ ದೇಹವುಳ್ಳವನೂ, ಶಾಸ್ತ್ರೀಯ ಕ್ರಿಯೆಗಳ ಅನುಷ್ಠಾನದಲ್ಲಿ ಸಮರ್ಥನೂ, ಅನ್ಯತ್ರ ಉದಾಸೀನನೂ, ಶಾಸ್ತ್ರೀಯ ಕ್ರಿಯಾನುಷ್ಠಾನದಲ್ಲಿ ಅವರ್ಜನೀಯವಾದ ಶೀತೋಷ್ಣ ಪರುಷ ಸ್ಪರ್ಶಾದಿ ದುಃಖಗಳಲ್ಲಿ ವ್ಯಥಾರಹಿತನೂ, ಶಾಸ್ತ್ರೀಯಗಳಲ್ಲದ ಸರ್ವಕರ್ಮಗಳನ್ನು ತೊರೆದವನೂ ಆದ ನನ್ನ ಭಕ್ತನು ನನಗೆ ಪ್ರಿಯನು.

(ಸಂಗತಿ: ದೈವಾತ್ತಾಗಿ ಒದಗಿದ ಪ್ರಿಯಾಪ್ರಿಯಾದಿಗಳಲ್ಲಿಯೂ ಶೋಕ ಹರ್ಷಾದ್ಯಭಾವಾದಿಗಳು ಕರ್ಮಯೋಗಿಗೆ ಇರಬೇಕೆಂದು ಇಲ್ಲಿ ಹೇಳುತ್ತಾನೆ.)

**ಯೋ ನ ಹೃಷ್ಯತಿ ನ ದ್ವೇಷ್ಟಿ ನ ಶೋಚತಿ ನ ಕಾಂಕ್ಷತಿ ।**
**ಶುಭಾಶುಭಪರಿತ್ಯಾಗೀ ಭಕ್ತಿಮಾನ್ ಯಸ್ಸ ಮೇ ಪ್ರಿಯಃ ॥೧೭॥**

ಯಾವ ಕರ್ಮಯೋಗಿಯು ಹರ್ಷನಿಮಿತ್ತವಾದ ಅರ್ಥಲಾಭಾದಿಗಳಿಂದ ಹರ್ಷಗೊಳ್ಳುವುದಿಲ್ಲವೋ, ಅಪ್ರಿಯವನ್ನು ಹೊಂದಿ ದ್ವೇಷಿಸುವುದಿಲ್ಲವೋ, ದುಃಖನಿಮಿತ್ತವಾದ ಭಾರ್ಯಾ, ಪುತ್ರ, ವಿತ್ತ, ಕ್ಷಯಾದಿಗಳನ್ನು ಹೊಂದಿ ದುಃಖಿಸುವುದಿಲ್ಲವೋ, ಅಪ್ರಾಪ್ತ ವಿಷಯಗಳಿಗಾಗಿ ಆಶಿಸುವುದಿಲ್ಲವೋ ಮತ್ತು (ಬಂಧಹೇತುವಾದುವರಿಂದ) ಪುಣ್ಯಾಪುಣ್ಯಗಳೆರಡನ್ನೂ ಬಿಟ್ಟಿರುವನೋ—ಆ ಭಕ್ತಿವಂತನು ನನಗೆ ಪ್ರಿಯನು.

(ಸಂಗತಿ: "ಅದ್ವೇಷ್ಟಾಸರ್ವಭೂತಾನಾಂ" – ಇತ್ಯಾದಿಯಿಂದ ಶತ್ರುಮಿತ್ರಾದಿಗಳಲ್ಲಿ ರಾಗದ್ವೇಷವಿರಕೂಡದೆನ್ನಲಾಯಿತು. ಇಲ್ಲಿ ಶತ್ರುಮಿತ್ರಾದಿಗಳು ಸನ್ನಿಹಿತರಾಗಿದ್ದಾಗಲೂ ಸಮಚಿತ್ತನಾಗಿರಬೇಕೆಂದು ಹೇಳಿದೆ. ಸಾನ್ನಿಧ್ಯದಲ್ಲಿ ಹೀಗಿರುವುದು ಇನ್ನೂ ವಿಶೇಷ.)

**ಸಮಶ್ಶತ್ರೌ ಚ ಮಿತ್ರೇ ಚ ತಥಾ ಮಾನಾಪಮಾನಯೋಃ ।**
**ಶೀತೋಷ್ಣಸುಖದುಃಖೇಷು ಸಮಸ್ಸಙ್ಗವಿವರ್ಜಿತಃ ॥ ೧೮ ॥**

**ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ ಯೇನ ಕೇನಚಿತ್ ।**
**ಅನಿಕೇತಃ ಸ್ಥಿರಮತಿಃ ಭಕ್ತಿಮಾನ್ಮೇ ಪ್ರಿಯೋ ನರಃ ॥ ೧೯ ॥**

ಯಾವುದರಲ್ಲಿಯೂ ಆಸಕ್ತಿಯಿಲ್ಲದವನಾದುದರಿಂದ ಶತ್ರು ಮಿತ್ರರು ಮಾನಾಪಮಾನಗಳು, ಶೀತೋಷ್ಣಗಳು, ಸುಖದುಃಖಗಳು ಇವುಗಳಲ್ಲಿ ಸಮ ಚಿತ್ತನಾಗಿರುವವನೂ,

ನಿಂದೆಯನ್ನೂ, ಸ್ತುತಿಯನ್ನೂ ಸಮನಾಗಿ ಎಣಿಸುವವನೂ ಯಾವುದರಿಂದಲೂ ಸಂತುಷ್ಟನೂ ಆದುದರಿಂದ ಮೌನಿಯೂ, ಆತ್ಮದಲ್ಲಿ ಸ್ಥಿರ ಬುದ್ಧಿಯಿರೋಣದರಿಂದ ಗೃಹಾದಿಗಳಲ್ಲಿ ಅಸಕ್ತನೂ ಆದ ಭಕ್ತಿವಂತ ಮನುಷ್ಯನು ನನಗೆ ಪ್ರಿಯನು.

(ಸಂಗತಿ : ಈ ಆತ್ಮನಿಷ್ಠನಿಗಿಂತ ಭಕ್ತಿಯೋಗನಿಷ್ಠನಿಗೆ ಶ್ರೇಷ್ಠತೆಯನ್ನು ಪ್ರತಿಪಾದಿಸುತ್ತ ಉಪಕ್ರಮಾನುಸಾರ ಉಪಸಂಹರಿಸುತ್ತಾನೆ ;)

**ಯೇತು ಧರ್ಮ್ಯಾಮೃತಮಿದಂ ಯಥೋಕ್ತಂ ಪರ್ಯುಪಾಸತೇ ।**
**ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇತೀವ ಮೇ ಪ್ರಿಯಾಃ ॥ ೨೦॥**

ಧರ್ಮಯುಕ್ತವೂ ಅಮೃತದಂತೆ ಭೋಗ್ಯವೂ ಆದ ಈ ಭಕ್ತಿಯೋಗವನ್ನು " ಮಯ್ಯಾವೇಶ್ಯ ಮನೋ ಯೇ ಮಾಂ " ಇತ್ಯಾದಿಯಾಗಿ ಹೇಳಿದ ಪ್ರಕಾರದಿಂದ ಶ್ರದ್ಧೆಯಿಂದ ಕೂಡಿ ಮತ್ಪರಾಯಣರಾಗಿ ಆಚರಿಸುವ ಭಕ್ತರು ನನಗೆ ಅತ್ಯಂತ ಪ್ರಿಯರು.

ಇಲ್ಲಿಗೆ ಭಕ್ತಿಯೋಗವೆಂಬ ಹನ್ನೆರಡನೆಯ ಅಧ್ಯಾಯವು
ಸಮಾಪ್ತವಾಯಿತು.

---

## ಅಧ್ಯಾಯ ೧೩

# ವಿಶುದ್ಧ ಕ್ಷೇತ್ರ ವಿಜ್ಞಾನ

(ಸಂಗತಿ: ಮೊದಲನೆಯ ಷಟ್ಕದಲ್ಲಿ—ಪರಮಪ್ರಾಪ್ಯವಾದ ಭಗವಂತನನ್ನು ಹೊಂದಲು ಭಕ್ತಿಯೋಗವೇ ಉಪಾಯ. ಜೀವಾತ್ಮನ ಯಾಥಾತ್ಮ್ಯದರ್ಶನವು ಇದಕ್ಕೆ ಅಂಗ. ಇದು ಕರ್ಮಯೋಗ, ಜ್ಞಾನಯೋಗಗಳಿಂದ ಸಾಧ್ಯವೆನ್ನಲಾಯಿತು. ಎರಡನೆಯ ಷಟ್ಕದಲ್ಲಿ—ಆ ಭಗವಂತನ ನಿಜವಾದ ಸ್ವಭಾವ ಮತ್ತು ಮಾಹಾತ್ಮ್ಯವನ್ನು ತಿಳಿದು ಅನಂತರ ಅನುಷ್ಠಿಸಬೇಕಾದ ಭಕ್ತಿಯೋಗವನ್ನು ಪ್ರತಿಪಾದಿಸಿ, ಅತಿಶಯಿತೈಶ್ವರ್ಯ ಮತ್ತು ಕೈವಲ್ಯವನ್ನು ಅಪೇಕ್ಷಿಸತಕ್ಕವರಿಗೂ ಈ ಭಕ್ತಿಯೋಗವೇ ಸಾಧನವೆಂದೂ ಹೇಳಲಾಯಿತು. ಈಗ ಮೂರನೆಯ ಷಟ್ಕದಲ್ಲಿ—ಹಿಂದಿನ ಷಟ್ಕಗಳಲ್ಲಿ ಹೇಳಿದ ಪ್ರಕೃತಿ ಮತ್ತು ಜೀವರು, ಇವುಗಳ ಸಂಸರ್ಗದಿಂದ ಏರ್ಪಟ್ಟ ಪ್ರಪಂಚ, ಈಶ್ವರ ಇವೆಲ್ಲದರ ಯಾಥಾತ್ಮ್ಯ, ಕರ್ಮಯೋಗ ಜ್ಞಾನಯೋಗ, ಭಕ್ತಿಯೋಗಗಳು, ಇವುಗಳ ಸ್ವರೂಪ ಮತ್ತು ಇವನ್ನು ಅನುಷ್ಠಿಸುವ ವಿಧಗಳೂ ಶೋಧಿಸಲ್ಪಟ್ಟಿವೆ. ಇದರಲ್ಲಿ ಮೊದಲನೆಯದಾದ ಹದಿಮೂರನೆಯ ಅಧ್ಯಾಯದಲ್ಲಿ—ದೇಹ ಮತ್ತು ಆತ್ಮರ ಸ್ವರೂಪವೂ, ದೇಹಯಾಥಾತ್ಮ್ಯದ ಶೋಧನವೂ, ದೇಹದಿಂದ ಬೇರ್ಪಟ್ಟ ಆತ್ಮವನ್ನು ಹೊಂದುವ ಉಪಾಯವೂ, ದೇಹದಿಂದ ಬೇರ್ಪಟ್ಟ ಆತ್ಮದ ಸ್ವರೂಪಸಂಶೋಧನವೂ, ಅಂತಹ ಆತ್ಮನಿಗೆ ಅಚೇತನದೊಡನೆ ಸಂಬಂಧವುಂಟಾಗುವ ಕಾರಣವೂ ಮತ್ತು ಆ ದೇಹದಿಂದ ಆತ್ಮನು ಬೇರ್ಪಟ್ಟವನೆಂದು ತಿಳಿದುಕೊಳ್ಳುವ ಪ್ರಕಾರಗಳೂ ಹೇಳಲ್ಪಟ್ಟಿವೆ.)

**ಶ್ರೀ ಭಗವಾನುವಾಚ—**

**ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ ।**
**ಏತದ್ಯೋ ವೇತ್ತಿ ತಂ ಪ್ರಾಹುಃ ಕ್ಷೇತ್ರಜ್ಞ ಇತಿ ತದ್ವಿದಃ ॥ ೧ ॥**

ಭಗವಂತ ಹೇಳಿದನು —

ಎಲೈ ಅರ್ಜುನನೆ! ಈ ದೇಹವು ಕ್ಷೇತ್ರವೆನಿಸುವುದು. ಈ ದೇಹವನ್ನು (ನಾನು ತಿಳಿಯುತ್ತೇನೆ ಎಂದು) ತಿಳಿಯುವವನನ್ನು ಕ್ಷೇತ್ರಜ್ಞನೆಂದು ತಜ್ಞರು ಹೇಳುವರು.

(ಟಿಪ್ಪಣಿ : ತನ್ನ ದೇಹಕ್ಕಿಂತ ಬೇರೆಯಾದ ಘಟಾದಿವಸ್ತುಗಳನ್ನು ಅರಿಯುವಾಗ, ದೇವನಾದ ನಾನು, ಮನುಷ್ಯನಾದ ನಾನು ಘಟಾದಿಗಳನ್ನು ಅರಿಯುತ್ತೇನೆ ಎಂದು ದೇಹದೊಡನೆ ಒಂದಾಗಿ ತೋರುವ ಆತ್ಮವಸ್ತುವನ್ನೂ ಅರಿಯುತ್ತಾನೆ. ಹಾಗಾದರೂ, ದೇಹವನ್ನು ಅರಿಯುವಾಗ, ಘಟಾದಿಗಳನ್ನು ಅರಿಯುವ ಹಾಗೆಯೇ ಈ ದೇಹವನ್ನೂ ನಾನು ಅರಿಯುತ್ತೇನೆ ಎಂದು ತಿಳಿಯುತ್ತಾನೆ. ಆದುದರಿಂದ ಅರಿಯುವವನಾದ ಆತ್ಮನಿಗಿಂತ ಅರಿಯಲ್ಪಡುವ ದೇಹವೂ ಘಟಾದಿಗಳಂತೆ ಬೇರೆಯಾದ ವಸ್ತು. ಹಾಗೆಯೇ ಘಟಾದಿಗಳಂತೆ ತನ್ನಿಂದ ಅರಿಯಲ್ಪಡುವುದಾದ. ದೇಹಕ್ಕಿಂತ ಅದನ್ನು ಅರಿಯುವವನಾದ ಕ್ಷೇತ್ರಜ್ಞನು ಬೇರೆಯಾದವನು. ಆದರೂ ಒಂದಾಗಿ ತೋರುವುದಾದರೋ–ವಸ್ತುತಃ ಶರೀರವು (ಗೋತ್ವಾದಿ) ಜಾತಿ ಮುಂತಾದುವುಗಳಂತೆ ಆತ್ಮನಿಗೆ ವಿಶೇಷಣವಾಗಿರುವುದನ್ನೇ ಸ್ವಭಾವವಾಗಿ ಹೊಂದಿ ಅವನಿಂದ ಪ್ರತ್ಯೇಕಿಸಲು ಆಗದಿರುವುದರಿಂದ ಉಚಿತವೇ ಸರಿ. ಅದರಲ್ಲಿ, ಅರಿಯುವವನಾದ ಆತ್ಮನ ಅಸಾಧರಣ ಸ್ವಭಾವವು ಕಣ್ಣು ಮೊದಲಾದ ಇಂದ್ರಿಯಗಳಿಗೆ ಗೋಚರಿಸದೆ ಯೋಗದಿಂದ ಪರಿಶುದ್ಧವಾದ ಮನಸ್ಸಿಗೆ ಗೋಚರಿಸತಕ್ಕುದು ಮಾತ್ರವೇ ಆದುದರಿಂದ, ಪ್ರಕೃತಿಯೊಡನೆ ಸೇರಿರುವುದು ಮಾತ್ರದಿಂದಲೇ ಮೂಢರು ಜ್ಞಾತೃವಾದ ಆತ್ಮನನ್ನೂ ಪ್ರಕೃತಿಯನ್ನಾಗಿಯೇ ನೋಡುತ್ತಾರೆ.)

**ಕ್ಷೇತ್ರಜ್ಞಂ ಚಾಪಿಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ ।**
**ಕ್ಷೇತ್ರ ಕ್ಷೇತ್ರಜ್ಞಯೋರ್ಜ್ಞಾನಂ ಯತ್ತಜ್ಜ್ಞಾನಂ ಮತಂ ಮಮ॥**

ಅರ್ಜುನ! ಎಲ್ಲ ಶರೀರಗಳಲ್ಲಿರುವ ಜೀವಾತ್ಮನನ್ನೂ ಕೂಡ ನನ್ನನ್ನಾಗಿ (ನನ್ನನ್ನು ಆತ್ಮನಾಗಿ ಉಳ್ಳವನೆಂದು) ತಿಳಿ. ಶರೀರ ಮತ್ತು

ಜೀವಾತ್ಮರ ಜ್ಞಾನವೆಂಬುದು ಯಾವುದೋ ಅದು (ಅವಶ್ಯತಿಳಿಯ ಬೇಕಾದುದು) ಜ್ಞಾನವೆಂದು ನನ್ನ ಅಭಿಪ್ರಾಯ.

**ತತ್ ಕ್ಷೇತ್ರಂ ಯಚ್ಚ ಯಾದೃಕ್ ಚ ಯದ್ವಿಕಾರಿ ಯತಶ್ಚ ಯತ್ ।**
**ಸ ಚ ಯೋ ಯತ್ಪ್ರಭಾವಶ್ಚ ತತ್ಸಮಾಸೇನ ಮೇ ಶೃಣು ॥ ೩ ॥**

ಆ ಶರೀರವು ಯಾವವಸ್ತು, ಎಂತಹದು, ಎಂತಹವಿಕಾರವುಳ್ಳದು, ಏತರಿಂದ ಉಂಟಾದುದು, ಎಂತಹ ಸ್ವಭಾವವುಳ್ಳುದು ? ಆ ಜೀವಾತ್ಮನೂ ಎಂತಹ ಸ್ವಭಾವದವನು ; ಎಂತಹ ಮಹಿಮೆಗಳುಳ್ಳವನು. ಅವೆಲ್ಲವನ್ನೂ ಸಂಗ್ರಹವಾಗಿ ನನ್ನಿಂದ ಕೇಳು.

**ಋಷಿಭಿರ್ಬಹುಧಾ ಗೀತಂ ಛನ್ದೋಭಿರ್ವಿವಿಧೈಃ ಪೃಥಕ್ ।**
**ಬ್ರಹ್ಮಸೂತ್ರಪದೈಶ್ಚೈವ ಹೇತುಮದ್ಭಿರ್ವಿನಿಶ್ಚಿತೈಃ ॥ ೪ ॥**

(ಸಂಗತಿ : ತಾನು ಉಪದೇಶಿಸುವ ಅರ್ಥವು ಇತಿಹಾಸ-ಪುರಾಣ-ಮೀಮಾಂಸೆಗಳಿಂದ ಅನುಗೃಹೀತವಾದ ಅನೇಕಶ್ರುತಿಗಳಿಂದ ಸಿದ್ಧವಾದುದೆಂದು ಹೇಳುತ್ತಾನೆ.)

ಋಷಿಗಳಿಂದಲೂ ಅನೇಕ ವಿಧಗಳಾದ ವೇದಗಳಿಂದಲೂ, ಕಾರಣ ಸಹಿತಗಳಾದ ಚೆನ್ನಾಗಿ ನಿಶ್ಚಯಿಸಲ್ಪಟ್ಟಿರುವ ಬ್ರಹ್ಮ ಪ್ರತಿಪಾದನ ಸೂತ್ರಗಳೆಂಬ ಪದಗಳಿಂದಲೂ ಬೇರೆ ಬೇರೆ ಅನೇಕ ವಿಧಗಳಿಂದ (ಈ ಶರೀರ ಮತ್ತು ಜೀವಾತ್ಮರ ಸ್ವರೂಪವು) ಹೇಳಲ್ಪಟ್ಟಿರುವುದು.

**ಮಹಾಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವ ಚ ।**
**ಇಂದ್ರಿಯಾಣಿ ದಶೈಕಂ ಚ ಪಂಚಚೇಂದ್ರಿಯಗೋಚರಾಃ ॥ ೫ ॥**
**ಇಚ್ಛಾದ್ವೇಷಸ್ಸುಖಂ ದುಃಖಂ ಸಂಘಾತಶ್ಚೇತನಾ ಧೃತಿಃ ।**
**ಏತತ್ ಕ್ಷೇತ್ರಂ ಸಮಾಸೇನ ಸವಿಕಾರಮುದಾಹೃತಂ ॥ ೬ ॥**

ಪಂಚ ಮಹಾಭೂತಗಳೂ, ಅಹಂಕಾರವೂ, ಬುದ್ಧಿಯೂ (ಮಹತ್ತತ್ತ್ವ) ಪ್ರಕೃತಿಯೂ, (ಶರೀರಕ್ಕೆ ಕಾರಣ ಭೂತವಾದ ವಸ್ತುಗಳು) ಹನ್ನೊಂದು ಇಂದ್ರಿಯಗಳೂ, ಇಂದ್ರಿಯಗಳಿಗೆ ಗೋಚರವಾಗುವ ಶಬ್ದ ಸ್ಪರ್ಶರೂಪರಸಗಂಧಗಳೂ, (ಇವು ಶರೀರಗತವಾದುವುಗಳು) ಆಸೆ, ದ್ವೇಷ, ಸುಖ, ದುಃಖ (ಇವು ಶರೀರದಿಂದುಂಟಾಗುವ ವಿಕಾರಗಳು) ಜೀವಾತ್ಮನಿಗೆ

ಆಧಾರವಾದ ಭೂತ ಸಂಘಾತ—ಇಂತಹ ಶರೀರವು ಸಂಗ್ರಹವಾಗಿ ಅದರ ಕಾರ್ಯಗಳೊಡನೆ ಹೇಳಿದೆ. (5-6)

(ಭಾವಾರ್ಥ : ಪ್ರಕೃತಿ ಮೊದಲಾಗಿ ಪೃಥಿವಿಯವರಿಗಿನವಸ್ತುಗಳಿಂದ ಉಂಟಾದುದೂ, ಇಂದ್ರಿಯಗಳಿಗೆ ಆಶ್ರಯವೂ, ಆಸೆ, ದ್ವೇಷ, ಸುಖ, ದುಃಖ ಗಳೆಂಬ ವಿಕಾರವುಳ್ಳದ್ದೂ, ಪಂಚಭೂತಗಳ ಸಂಘಾತರೂಪವೂ, ಜೀವನಿಗೆ ಸುಖದುಃಖಗಳನ್ನು ಅನುಭವಿಸಲು ಆಧಾರವಾಗಿರುವುದನ್ನೇ ಪ್ರಯೋಜನ ವಾಗಿ ಉಳ್ಳದೂ ಆಗಿರುವುದು ಶರೀರವೆಂದು ಹೇಳಲ್ಪಟ್ಟಿದೆಯೆಂದು ಭಾವ)

(ಸಂಗತಿ : ಇನ್ನು ಶರೀರದ ಕಾರ್ಯಗಳಲ್ಲಿ ಆತ್ಮಜ್ಞಾನಕ್ಕೆ ಸಾಧನ ವಾಗಿರೋಣದರಿಂದ ಅಂಗೀಕರಿಸಲು ಯೋಗ್ಯವಾದ ಗುಣಗಳು ಹೇಳ ಲ್ಪಡುತ್ತವೆ.)

**ಅಮಾನಿತ್ವಮದಂಭಿತ್ವಮಹಿಂಸಾ ಕ್ಷಾಂತಿರಾರ್ಜವಂ ।**
**ಆಚಾರ್ಯೋಪಾಸನಂ ಶೌಚಂ ಸ್ಥೈರ್ಯಮಾತ್ಮವಿನಿಗ್ರಹಃ ॥೭॥**

ಗರ್ವವಿಲ್ಲದಿರುವುದು, ದಂಭವಿಲ್ಲದಿರುವಿಕೆ, ಹಿಂಸಿಸದಿರುವುದು, ತಾಳ್ಮೆ, ಕಪಟವಿಲ್ಲದಿರುವುದು, ಆಚಾರ್ಯಸೇವೆ, (ಆತ್ಮಜ್ಞಾನ ಪ್ರದ ನಾದ ಆಚಾರ್ಯನಲ್ಲಿ ಪ್ರಣಿಪಾತ ಪರಿಪ್ರಶ್ನ ಸೇವಾದಿಗಳಲ್ಲಿ ನಿರತನಾಗಿ ರುವುದು) ಶಾಸ್ತ್ರಸಿದ್ಧವಾದ ಪರಿಶುದ್ಧಿ, ಅಧ್ಯಾತ್ಮ ಶಾಸ್ತ್ರೋಕ್ತವಾದ ಅರ್ಥದಲ್ಲಿ ನಿಶ್ಚಲವಾದ ಸ್ಥಿತಿ, ಆತ್ಮಸ್ವರೂಪಕ್ಕೆ ವ್ಯತಿರಿಕ್ತವಾದ ವಿಷಯ ಗಳಿಂದ ಮನಸ್ಸನ್ನು ಹಿಂದೆಗೆದು ಅಡಗಿಸಿಡಿವುದು.

**ಇಂದ್ರಿಯಾರ್ಥೇಷು ವೈರಾಗ್ಯಂ ಅನಹಙ್ಕಾರ ಏವ ಚ ।**
**ಜನ್ಮಮೃತ್ಯುಜರಾವ್ಯಾಧಿದುಃಖದೋಷಾನುದರ್ಶನಂ ॥ ೮ ॥**

ಆತ್ಮವ್ಯತಿರಿಕ್ತವಾದ ವಿಷಯಗಳಲ್ಲಿ (ರೂಪಾದಿಗಳಲ್ಲಿ)(ಸದೋಷತಾನು ಸಂಧಾನದಿಂದ) ಆಸೆಯಿಲ್ಲದಿರುವುದು, ದೇಹದಲ್ಲಿ ಆತ್ಮವೆಂಬ ಅಭಿಮಾನ ವಿಲ್ಲದಿರುವುದು, ಜನ್ಮ, ಮೃತ್ಯು, ಮುಪ್ಪು, ರೋಗ—ಇವುಗಳಿಂದುಂಟಾದ ದುಃಖರೂಪವಾದ ಅವರ್ಜನೀಯದೋಷಗಳನ್ನು ಅರಿತುಕೊಳ್ಳುವುದು.

**ಅಸಕ್ತಿರನಭಿಷ್ವಂಗಃ ಪುತ್ರದಾರಗೃಹಾದಿಷು ।**
**ನಿತ್ಯಂ ಚ ಸಮಚಿತ್ತತ್ವಮಿಷ್ಟಾನಿಷ್ಟೋಪಪತ್ತಿಷು ॥ ೯ ॥**

ಆತ್ಮವಲ್ಲದ ವಸ್ತುಗಳಲ್ಲಿ ಆಸಕ್ತಿಯಿಲ್ಲದಿರುವಿಕೆ, ಪುತ್ರ, ಪತ್ನಿ, ಮನೆ ಮುಂತಾದುವುಗಳಲ್ಲಿ ಅವು ಶಾಸ್ತ್ರೀಯಕರ್ಮಗಳನ್ನು ಆಚರಿಸಲು ಒತ್ತಾಸೆಯಾಗಿರುವುವೆಂಬುದೊಂದನ್ನು ಬಿಟ್ಟು ಬೇರೆ ವಿಧವಾದ ಆಸೆಯಿಲ್ಲದಿರುವುದು, (ತನ್ನ ಆಸೆಯಿಂದ ಒದಗಿದ) ಇಷ್ಟ ಮತ್ತು ಅನಿಷ್ಟಗಳು ಸಂಭವಿಸಿದರೂ ಸಂತೋಷ ಮತ್ತು ಭಯಗಳಿಲ್ಲದಿರುವುದು.

**ಮಯಿ ಚಾನನ್ಯಯೋಗೇನ ಭಕ್ತಿರವ್ಯಭಿಚಾರಿಣೀ ।**
**ವಿವಿಕ್ತದೇಶಸೇವಿತ್ವಮರತಿರ್ಜನಸಂಸದಿ ॥ ೧೦ ॥**

ಸರ್ವೇಶ್ವರನಾದ ನನ್ನಲ್ಲಿ, ದೇವತಾಂತರಾದಿ ಪರಿತ್ಯಾಗದಿಂದ ಸ್ಥಿರವಾದ ಭಕ್ತಿಯೂ ವಿಜನವಾದ ಸ್ಥಳದಲ್ಲಿ ವಾಸಿಸುವುದೂ, ಜನಗಳ ಗುಂಪಿನಲ್ಲಿ ಪ್ರೀತಿಯಿಲ್ಲದಿರುವುದೂ

**ಅಧ್ಯಾತ್ಮಜ್ಞಾನನಿತ್ಯತ್ವಂ ತತ್ತ್ವಜ್ಞಾನಾರ್ಥಚಿನ್ತನಂ ।**
**ಏತಜ್ಜ್ಞಾನಮಿತಿ ಪ್ರೋಕ್ತಮಜ್ಞಾನಂ ಯದತೋಽನ್ಯಥಾ ॥೧೧॥**

ಆತ್ಮವಿಷಯವಾದ ಜ್ಞಾನದಲ್ಲಿ ಯಾವಾಗಲೂ ನಿಷ್ಠನಾಗಿರುವುದು, ಯಾವ ಚಿಂತೆಯಿಂದ ತತ್ತ್ವಜ್ಞಾನವುಂಟಾಗುವುದೋ ಅದರಲ್ಲಿಯೇ ನಿರತನಾಗಿರುವುದು. ಇದು ಆತ್ಮಜ್ಞಾನಕ್ಕೆ ಸಾಧನವೆಂದು ಹೇಳಲ್ಪಟ್ಟಿದೆ. ಈ ಅಮಾನಿತ್ವಾದಿಗಳನ್ನು ಉಳಿದು ಶರೀರದ ಕಾರ್ಯವಾದ ಮತ್ತೆಲ್ಲವೂ (ಆತ್ಮಜ್ಞಾನಕ್ಕೆ ವಿರೋಧಿಯಾದುದರಿಂದ) ಅಜ್ಞಾನವು.

(ಸಂಗತಿ : " ಏತದ್ಯೋವೇತ್ತಿ ತಂ ಪ್ರಾಹುಃ "—ಎಂಬುದರಿಂದ ಜ್ಞಾತೃವಾಗಿ ಹೇಳಲ್ಪಟ್ಟ ಕ್ಷೇತ್ರಜ್ಞನ ಸ್ವರೂಪವು ಈಗ ನಿರೂಪಿಸಲ್ಪಡುವುದು.)

**ಜ್ಞೇಯಂ ಯತ್ತತ್ಪ್ರವಕ್ಷ್ಯಾಮಿ ಯಜ್ಜ್ಞಾತ್ವಾಽಮೃತಮಶ್ನುತೇ ।**
**ಅನಾದಿಮತ್ಪರಂ ಬ್ರಹ್ಮ ನ ಸತ್ತನ್ನಾಸದುಚ್ಯತೇ ॥ ೧೨ ॥**

ಯಾವ ಜೀವಾತ್ಮಸ್ವರೂಪವು (ಅಮಾನಿತ್ವಾದಿ ಸಾಧನಗಳಿಂದ) ಅರಿಯಲ್ಪಡತಕ್ಕುದೋ ಮತ್ತು ಯಾವ ಜೀವಾತ್ಮಸ್ವರೂಪವನ್ನು ತಿಳಿದುಕೊಂಡು ನಾಶವಿಲ್ಲದ ಪರಿಶುದ್ಧಾತ್ಮ ಸ್ವರೂಪವನ್ನು (ಮನುಷ್ಯನು) ಹೊಂದುತ್ತಾನೆಯೋ, ಅಂತಹ ಜೀವಾತ್ಮ ಸ್ವರೂಪವನ್ನು ಹೇಳುವೆನು.

(ಅದು) ಆದಿ (ಕಾರಣ) ಯಿಲ್ಲದ್ದು, ನನ್ನನೇ ಶೇಷಿಯಾಗಿ ಉಳ್ಳದ್ದು. (ಸ್ವರೂಪದಿಂದ ಅದಕ್ಕೆ ಕಾರ್ಯ-ಕಾರಣರೂಪವಾದ ಅವಸ್ಥೆಗಳೆರಡೂ ಇಲ್ಲವಾದುದರಿಂದ) ಅದು " ಸತ್ " ಎಂದಾಗಲಿ " ಅಸತ್ " ಎಂದಾಗಲಿ ಹೇಳಲ್ಪಡುವುದಿಲ್ಲ. (ಕರ್ಮರೂಪವಾದ ಅವಿದ್ಯೆಯಿಂದ ಆತ್ಮನಿಗೆ ಕಾರ್ಯ ಕಾರಣರೂಪವಾದ ಅವಸ್ಥೆಗಳೆರಡೂ ಅನ್ವಯಿಸುವುವೆಂದು ಭಾವ.)

**ಸರ್ವತಃ ಪಾಣಿಪಾದಂ ತತ್ ಸರ್ವತೋಽಕ್ಷಿ ಶಿರೋಮುಖಂ ।**
**ಸರ್ವತಶ್ಶ್ರುತಿಮಲ್ಲೋಕೇ ಸರ್ವಮಾವೃತ್ಯ ತಿಷ್ಠತಿ ॥ ೧೩ ॥**

ಆ ಪರಿಶುದ್ಧವಾದ ಆತ್ಮಸ್ವರೂಪವು ಎಲ್ಲಕಡೆಗಳಲ್ಲಿಯೂ ಕೈಕಾಲುಗಳುಳ್ಳದ್ದು; ಎಲ್ಲಕಡೆಗಳಲ್ಲಿಯೂ ಕಣ್ಣು, ತಲೆ ಮುಖಗಳುಳ್ಳದ್ದು; ಎಲ್ಲ ಕಡೆಗಳಲ್ಲಿಯೂ ಕಿವಿಯುಳ್ಳದ್ದು. ಈ ಲೋಕದಲ್ಲಿ ಎಲ್ಲ ವಸ್ತುಗಳಲ್ಲಿಯೂ ವ್ಯಾಪಿಸಿರುತ್ತದೆ.

(ಸಂಗತಿ : ಸ್ವರೂಪವು ಇಂದ್ರಿಯಗಳ ವೃತ್ತಿಗಳಿಂದ ಪ್ರಕಾಶಿಸುತ್ತದೆಯೆಂಬ ಪರಮತದ ನಿರಾಕರಣಕ್ಕಾಗಿ ಹೇಳುತ್ತಾನೆ.)

**ಸರ್ವೇಂದ್ರಿಯಗುಣಾಭಾಸಂ ಸರ್ವೇಂದ್ರಿಯವಿವರ್ಜಿತಂ ।**
**ಅಸಕ್ತಂ ಸರ್ವಭೃಚ್ಚೈವ ನಿರ್ಗುಣಂ ಗುಣಭೋಕ್ತೃ ಚ ॥ ೧೪ ॥**

ಎಲ್ಲಾ ಇಂದ್ರಿಯಗಳ ವ್ಯಾಪಾರದಿಂದಲೂ ಕೂಡ ವಿಷಯಗಳನ್ನು ಅರಿಯಲು ಸಮರ್ಥವಾದುದು. (ಆದರೂ ಸ್ವಭಾವತಃ) ಇಂದ್ರಿಯಗಳ ವ್ಯಾಪಾರವಿಲ್ಲದೆಯೇ ತಾನಾಗಿಯೇ ಎಲ್ಲವನ್ನೂ ಅರಿಯುತ್ತದೆ. (ಸ್ವಭಾವದಲ್ಲಿ) ದೇವಾದಿ ದೇಹಗಳೊಡನೆ ಸಂಬಂಧವಿಲ್ಲದ್ದು. (ಆದರೂ) ದೇವಾದಿ ದೇಹಗಳನ್ನೆಲ್ಲ ಧರಿಸಲು ಸಮರ್ಥವಾದುದು. (" ಸ ಏಕಧಾ ಭವತಿ ತ್ರಿಧಾ ಭವತಿ " ಇತ್ಯಾದಿಯಾಗಿ ವೇದದಲ್ಲಿದೆ.) (ಹಾಗೆಯೇ) ಸ್ವಭಾವತಃ ಸತ್ತ್ವವೇ ಮುಂತಾದ ಗುಣಗಳಿಲ್ಲದ್ದು. (ಆದರೂ) ಸತ್ತ್ವವೇ ಮುಂತಾದ ಗುಣಗಳನ್ನು ಅನುಭವಿಸಲು ಸಮರ್ಥವಾದುದು.

(ಸಂಗತಿ : ಶರೀರದೊಡನೆ ಕೂಡಿರುವಾಗಲಲ್ಲವೇ ಪಂಚಭೂತಗಳೊಳಗೆ ಇರುವುದು; ಆದುದರಿಂದ ಮುಕ್ತಿಹೊಂದಿದವನಿಗೆ ಶರೀರವಿಲ್ಲದುದ

ರಿಂದ ಪಂಚಭೂತಗಳ ಹೊರಗೆ ಇರುವುದೇ ಉಚಿತ. ಹೀಗಿರುವಲ್ಲಿ ಅವುಗಳೊಳಗೇ ಇರುವುದೆಂಬುದು ಹೇಗೆ ಯುಕ್ತ ?—ಎಂಬ ಆಕ್ಷೇಪಕ್ಕೆ ಸಮಾಧಾನವನ್ನು ಹೇಳುತ್ತಾನೆ.)

**ಬಹಿರನ್ತಶ್ಚ ಭೂತಾನಾಂ ಅಚರ್‍ಂ ಚರಮೇವ ಚ ।**
**ಸೂಕ್ಷ್ಮತ್ವಾತ್ತದವಿಜ್ಞೇಯಂ ದೂರಸ್ಥಂ ಚಾನ್ತಿಕೇ ಚ ತತ್ ॥**

ಆ ಆತ್ಮಸ್ವರೂಪವೆಂಬುದು ಭೂತಗಳ ಹೊರಗೂ ಒಳಗೂ ಇರುವುದು (ಸ್ವಭಾವತಃ) ಚಲಿಸದಿರುವುದು. (ದೇಹದೊಡನೆ ಕೂಡಿರುವಾಗ) ಚಲಿಸುವುದು. (ಬಹು) ಸೂಕ್ಷ್ಮವಾದುದರಿಂದ ಆ ಆತ್ಮಸ್ವರೂಪವು (ದೇಹವನ್ನು ಬಿಟ್ಟು ಬೇರೆಯಾಗಿ, ಸಂಸಾರಿಗಳಿಂದ) ತಿಳಿಯತಕ್ಕುದಲ್ಲ. (ಅಮಾನಿತ್ವಾದಿ ಗುಣಗಳಿಲ್ಲದವರೂ ಮತ್ತು ಅದಕ್ಕೆ ವಿರುದ್ಧ ಗುಣಗಳುಳ್ಳವರೂ ಆದವರಿಗೆ, ಅವರ ದೇಹದಲ್ಲಿಯೇ ಇದ್ದಾಗ್ಯೂ) ಅದು ಅತಿ ದೂರದಲ್ಲಿಯೂ, (ಹಾಗೆಯೇ, ಅಮಾನಿತ್ವಾದಿ ಗುಣಗಳುಳ್ಳವರಿಗೆ) ಅತಿ ಸಮೀಪದಲ್ಲಿಯೂ ಇರುವುದು.

**ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಂ ।**
**ಭೂತಭರ್ತೃ ಚ ತಜ್ಜ್ಞೇಯಂ ಗ್ರಸಿಷ್ಣು ಪ್ರಭವಿಷ್ಣು ಚ ॥೧೬॥**

ದೇವಮನುಷ್ಯಾದಿ ಸಕಲ ಪ್ರಾಣಿಗಳಲ್ಲಿಯೂ ಇರತಕ್ಕ ಈ ಎಲ್ಲ ಆತ್ಮವಸ್ತುವೂ ಜ್ಞಾತೃತ್ವವನ್ನೇ ಮುಖ್ಯ ಆಕಾರವಾಗಿ ಉಳ್ಳದುದರಿಂದ ವ್ಯತ್ಯಾಸವಿಲ್ಲದುವು. ಅರಿಯದವರಿಗೆ ದೇವ ಮನುಷ್ಯಾದ್ಯಾಕಾರದಿಂದ ವ್ಯತ್ಯಾಸವುಳ್ಳವುಗಳಂತೆ ಇರುವುವು. ಪಂಚಭೂತಗಳನ್ನು ಧರಿಸತಕ್ಕುದೂ (ಅನ್ನ ಮುಂತಾದುದನ್ನು) ತಿನ್ನತಕ್ಕುದೂ (ಹಾಗೆ ತಿಂದ ಅನ್ನಾದಿಗಳು ಬೇರೆ ವಿಧವಾಗಿ ಮಾರ್ಪಟ್ಟು) ಹೊರಗೆ ಬರಲು ಕಾರಣವಾದುದೂ ಎಂದು (ಈ ಆತ್ಮವಸ್ತುವನ್ನು) ತಿಳಿಯಬೇಕು.

**ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ ।**
**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಹೃದಿ ಸರ್ವಸ್ಯ ವಿಷ್ಠಿತಂ ॥**

ಆ ಆತ್ಮವಸ್ತುವು ಪ್ರಕಾಶವುಳ್ಳ ವಸ್ತುಗಳಿಗೂ ಪ್ರಕಾಶವನ್ನು ಉಂಟುಮಾಡುವುದು. ಪ್ರಕೃತಿಗಿಂತ ಮೇಲಾದುದೆಂದು ಹೇಳಲ್ಪಡುವುದು.

(ಆದುದರಿಂದ) (ಇದನ್ನು) ಜ್ಞಾನೈಕಾಕಾರವೆಂದು ತಿಳಿಯತಕ್ಕದ್ದು. (ಅಮಾನಿತ್ವಾದಿ) ಜ್ಞಾನಸಾಧನಗಳಿಂದ (ಇದು) ಪ್ರಾಪ್ಯವಾದುದು ; ಎಲ್ಲ ವಸ್ತುಗಳ ಹೃದಯದಲ್ಲಿಯೂ (ಇದು) ಇರುವುದು.

**ಇತಿ ಕ್ಷೇತ್ರಂ ತಥಾ ಜ್ಞಾನಂ ಜ್ಞೇಯಂ ಚೋಕ್ತಂ ಸಮಾಸತಃ ।**
**ಮದ್ಭಕ್ತ ಏತದ್ವಿಜ್ಞಾಯ ಮದ್ಭಾವಾಯೋಪಪದ್ಯತೇ ॥ ೧೮ ॥**

ಈ ವಿಧವಾಗಿ ಶರೀರವೂ ಹಾಗೆಯೇ ಜ್ಞಾನಕ್ಕೆ ಸಾಧನಗಳಾದ ಅಮಾನಿತ್ವಾದಿ ಗುಣಗಳೂ ಅವುಗಳಿಂದ ಅರಿಯಬಹುದಾದ ಆತ್ಮವಸ್ತುವೂ ಸಂಗ್ರಹವಾಗಿ ಹೇಳಲ್ಪಟ್ಟವು. (ಮನುಷ್ಯನು) ನನ್ನಲ್ಲಿ ಭಕ್ತಿಮಾಡುವವನಾಗಿ ಇದನ್ನು ತಿಳಿದುಕೊಂಡು ನನ್ನ ಸ್ವಭಾವವನ್ನು ಪಡೆಯುವುದಕ್ಕೆ ಅರ್ಹನಾಗುತ್ತಾನೆ.

**ಪ್ರಕೃತಿಂ ಪುರುಷಂ ಚೈವ ವಿದ್ಧ್ಯನಾದೀ ಉಭಾವಪಿ ।**
**ವಿಕಾರಾಂಶ್ಚ ಗುಣಾಂಶ್ಚೈವ ವಿದ್ಧಿ ಪ್ರಕೃತಿಸಂಭವಾನ್ ॥ ೧೯ ॥**

ಪ್ರಕೃತಿ ಮತ್ತು ಪುರುಷ ಇವೆರಡೂ ಅನಾದಿಯೆಂದು ತಿಳಿ. ಆಸೆ ಮುಂತಾದ ವಿಕಾರಗಳು ಮತ್ತು ಅಮಾನಿತ್ವಾದಿಗುಣಗಳು ಪ್ರಕೃತಿಯಿಂದ ಹುಟ್ಟಿದುವೆಂದು ತಿಳಿ.

(ಸಂಗತಿ : ಈಗ ಪರಸ್ಪರ ಸೇರಿಕೊಂಡಿರುವ ಪ್ರಕೃತಿ ಮತ್ತು ಜೀವಾತ್ಮರ ಸಂಸರ್ಗದಿಂದ ಉಂಟಾಗುವ ಕಾರ್ಯಭೇದವು ಹೇಳಲ್ಪಡುತ್ತದೆ)

**ಕಾರ್ಯಕಾರಣಕರ್ತೃತ್ವೇ ಹೇತುಃ ಪ್ರಕೃತಿರುಚ್ಯತೇ ।**
**ಪುರುಷಸ್ಸುಖದುಃಖಾನಾಂ ಭೋಕ್ತೃತ್ವೇ ಹೇತುರುಚ್ಯತೇ ॥೨೦॥**

ಕಾರ್ಯ (ಶರೀರ) ಕಾರಣ (ಮನಸ್ಸಹಿತವಾದ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳು) ಇವು ಕಾರ್ಯಮಾಡುವುದರಲ್ಲಿ (ಜೀವಾತ್ಮನಿಂದ ಅಧಿಷ್ಠಿತವಾದ) ಶರೀರವೇ ಕಾರಣವೆಂದು ಹೇಳಲ್ಪಡುತ್ತದೆ. (ಭೋಗಸಾಧನಭೂತವಾದ ಕ್ರಿಯೆಗಳೆಲ್ಲವೂ ಪುರುಷಾಧಿಷ್ಠಿತವೂ ಶರೀರಾಕಾರವಾಗಿ ಪರಿಣಮಿಸಿರುವುದೂ ಆದ ಪ್ರಕೃತಿಯನ್ನೇ ಆಶ್ರಯಿಸಿವೆಯೆಂದು ಭಾವ.)

ಪ್ರಕೃತಿಯೊಡನೆ ಕೂಡಿರುವ ಜೀವಾತ್ಮನು ಸುಖದುಃಖಗಳ ಭೋಕ್ತೃತ್ವಕ್ಕೆ ಕಾರಣನೆನಿಸುವನು. (ಸುಖದುಃಖಗಳ ಅನುಭವಕ್ಕೆ ಅವನು ಆಶ್ರಯನೆಂದರ್ಥ.) (20).

(ಸಂಗತಿ : ಹೀಗೆ ಒಂದರೊಡನೊಂದು ಕೂಡಿಕೊಂಡಿರುವ ಪ್ರಕೃತಿ ಪುರುಷರ ಕಾರ್ಯಭೇದವು ಹೇಳಲ್ಪಟ್ಟಿತು. ಈಗ ಈ ಪುರುಷನು ಸ್ವಾನುಭವವೊಂದನ್ನೇ ಸುಖವಾಗಿ ಉಳ್ಳವನಾದರೂ, ವೈಷಯಿಕ ಸುಖದುಃಖಗಳನ್ನು ಅನುಭವಿಸುವುದಕ್ಕೂ ಕಾರಣನಾಗಿರುವನೆಂದು ಹೇಳುತ್ತಾನೆ.)

**ಪುರುಷಃ ಪ್ರಕೃತಿಸ್ಥೋ ಹಿ ಭುಂಕ್ತೇ ಪ್ರಕೃತಿಜಾನ್ ಗುಣಾನ್ ।**
**ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿಜನ್ಮಸು ॥ ೨೧ ॥**

ಜೀವಾತ್ಮನು ಶರೀರದಲ್ಲಿದ್ದುಕೊಂಡೇ ಶರೀರದಿಂದುಂಟಾಗುವ, ಸತ್ತ್ವಾದಿಗುಣಗಳ ಕಾರ್ಯವಾದ ಸುಖದುಃಖಾದಿಗಳನ್ನು ಅನುಭವಿಸುತ್ತಾನೆ. ಒಳ್ಳೆಯ ಮತ್ತು ಕೆಟ್ಟ ಜಾತಿಗಳಲ್ಲಿ ಅವನು ಹುಟ್ಟುವುದಕ್ಕೆ ಗುಣಸಂಗವು ಕಾರಣವಾಗುವುದು.

(ಟಿಪ್ಪಣಿ : ಅನಾದಿಯಾದ ಕರ್ಮದಿಂದ ಹಿಂದೆ ಹಿಂದೆ ದೇವ-ಮನುಷ್ಯಾದಿ ಜಾತಿಗಳಲ್ಲಿ ಹುಟ್ಟಿದ್ದ ಈ ಜೀವಾತ್ಮನು ಆಯಾ ಜಾತಿಪ್ರಯುಕ್ತ ಸತ್ತ್ವಾದಿ ಗುಣಮಯವಾದ ಸುಖ ದುಃಖಾದಿಗಳಲ್ಲಿ ಸಕ್ತನಾಗಿ ಅವಕ್ಕೆ ಸಾಧನವಾದ ಪುಣ್ಯಪಾಪ ಕರ್ಮಗಳಲ್ಲಿ ತೊಡಗುತ್ತಾನೆ. ಬಳಿಕ ಅವುಗಳ ಫಲವನ್ನು ಅನುಭವಿಸುವುದಕ್ಕಾಗಿ ಮತ್ತೆ ಒಳ್ಳೆಯ ಅಥವಾ ಕೆಟ್ಟ ಜನ್ಮಗಳನ್ನು ಎತ್ತುತ್ತಾನೆ, ಮತ್ತೆ ಕರ್ಮ ಮಾಡುತ್ತಾನೆ. ಅದರಿಂದ ಮತ್ತೆ ಮತ್ತೆ ಹುಟ್ಟುತ್ತಾನೆ. ಯಾವಾಗ ಆತ್ಮಪ್ರಾಪ್ತಿಗೆ ಸಾಧನವಾದ ಅಮಾನಿತ್ವಾದಿ ಗುಣಗಳನ್ನು ಪಡೆಯುವನೋ ಅದುವರಿಗೂ ಸಂಸಾರವನ್ನು ಹೊಂದುತ್ತಿರುತ್ತಾನೆ.)

(ಸಂಗತಿ : ಒಳ್ಳೆಯ ಮತ್ತು ಕೆಟ್ಟ ಜಾತಿಗಳಲ್ಲಿ ಹುಟ್ಟಿದ ಬಳಿಕ ಜೀವಾತ್ಮನಿಗೆ ಬರುವ ಸ್ವಭಾವಗಳನ್ನು ಹೇಳುತ್ತಾನೆ.)

**ಉಪದ್ರಷ್ಟಾಽನುಮಂತಾ ಚ ಭರ್ತಾ ಭೋಕ್ತಾ ಮಹೇಶ್ವರಃ ।**
**ಪರಮಾತ್ಮೇತಿ ಚಾಪ್ಯುಕ್ತೋ ದೇಹೇಽಸ್ಮಿನ್ ಪುರುಷಃ ಪರಃ ॥೨೨॥**

ಈ ದೇಹದಲ್ಲಿರುವ ಶ್ರೇಷ್ಠನಾದ ಜೀವಾತ್ಮನು (ದೇಹವು ಕೆಲಸ ಮಾಡುವುದಕ್ಕೆ ತಕ್ಕ ಸಂಕಲ್ಪಾದಿಗಳನ್ನು ಮಾಡುತ್ತ) ದೇಹವನ್ನು ನೋಡಿ ಕೊಂಡಿರುವನು. ಹಾಗೆಯೇ ಅನುಮತಿಯನ್ನು ಮಾಡುತ್ತಿರುವನು. (ಶರೀರವನ್ನು) ಧರಿಸುವನು. (ಸುಖದುಃಖಗಳನ್ನು) ಅನುಭವಿಸುತ್ತಿರು ವನು. (ಹಾಗೆಯೇ ದೇಹವನ್ನು ನಿಯಮಿಸುವುದರಿಂದಲೂ, ದೇಹ, ಇಂದ್ರಿಯಗಳು, ಮನಸ್ಸುಗಳ ವಿಷಯದಲ್ಲಿ) ಇವನು ಈಶ್ವರನೆನಿಸುವನು. (ಈ ದೇಹ, ಇಂದ್ರಿಯಗಳು, ಮನಸ್ಸು ಇವುಗಳ ಬಗ್ಗೆ) ಪರಮಾತ್ಮನೆಂದೂ ಹೇಳಲ್ಪಟ್ಟಿದ್ದಾನೆ.

**ಯ ಏನಂ ವೇತ್ತಿ ಪುರುಷಂ ಪ್ರಕೃತಿಂ ಚ ಗುಣೈಸ್ಸಹ ।**
**ಸರ್ವಥಾ ವರ್ತಮಾನೋಽಪಿ ನ ಸ ಭೂಯೋಽಭಿಜಾಯತೇ ॥**

ಯಾವನು ಈ ಜೀವಾತ್ಮನನ್ನೂ ಪ್ರಕೃತಿಯನ್ನೂ ಸತ್ತ್ವಾದಿಗುಣ ಗಳೊಡನೆ ಅರಿಯುವನೋ ಅವನು ಯಾವ ವಿಧವಾಗಿ ವರ್ತಿಸುತ್ತಿದ್ದರೂ ಮತ್ತೆ ಹುಟ್ಟನು.

(ಸಂಗತಿ : ಮೇಲಿನ ಅರ್ಥವನ್ನೇ ಎರಡು ಶ್ಲೋಕಗಳಿಂದ ವಿವರಿಸುವ ವನಾಗಿ ಆತ್ಮಜ್ಞಾನದ ವಿವಿಧಪರ್ವಗಳನ್ನು ಹೇಳುತ್ತಾನೆ.)

**ಧ್ಯಾನೇನಾತ್ಮನಿ ಪಶ್ಯನ್ತಿ ಕೇಚಿದಾತ್ಮಾನಮಾತ್ಮನಾ ।**
**ಅನ್ಯೇ ಸಾಂಖ್ಯೇನ ಯೋಗೇನ ಕರ್ಮಯೋಗೇನ ಚಾಪರೇ ॥**

(ಯೋಗ ಪೂರ್ತಿಯಾಗಿರುವ) ಕೆಲವರು ಶರೀರದಲ್ಲಿರುವ ಜೀವಾತ್ಮ ವನ್ನು ಮನಸ್ಸಿನಲ್ಲಿ ಯೋಗದಿಂದ ಕಾಣುವರು. (ಯೋಗ ಪೂರೈಸದಿರುವ) ಕೆಲವರು ಜ್ಞಾನಯೋಗದಿಂದ (ಮನಸ್ಸನ್ನು ಯೋಗ ಯೋಗ್ಯವನ್ನಾಗಿ ಮಾಡಿಕೊಂಡು) ಕಾಣುವರು. (ಜ್ಞಾನಯೋಗದಲ್ಲಿ ಅಧಿಕಾರವಿಲ್ಲದವರೂ, ಅದರಲ್ಲಿ ಅಧಿಕಾರವಿದ್ದೂ ಸುಲಭೋಪಾಯದಲ್ಲಿ ಆಸೆಯುಳ್ಳವರೂ, ವ್ಯಪ ದೇಶ್ಯರೂ ಆದ) ಮತ್ತೆ ಕೆಲವರು ಅಂತರ್ಗತ ಜ್ಞಾನವಾದ ಕರ್ಮಯೋಗ ದಿಂದ (ಮನಸ್ಸನ್ನು ಯೋಗಯೋಗ್ಯವನ್ನಾಗಿ ಮಾಡಿಕೊಂಡು) ಕಾಣುವರು.

(ಸಂಗತಿ : ಕರ್ಮಯೋಗವು ಸಿದ್ಧಿಸದಿರುವವರೂ ಮೋಕ್ಷದಲ್ಲಿ ಆಸೆ ಯುಳ್ಳವರೂ ಆದವರ ಕರ್ಮಯೋಗಾರಂಭದಶೆಯು ಹೇಳಲ್ಪಡುವುದು.)

**ಅನ್ಯೇ ತ್ವೇವಮಜಾನಂತಃ ಶ್ರುತ್ವಾಽನ್ಯೇಭ್ಯ ಉಪಾಸತೇ ।**
**ತೇಽಪಿ ಚಾತಿತರಂತ್ಯೇವ ಮೃತ್ಯುಂ ಶ್ರುತಿಪರಾಯಣಾಃ ॥ ೨೫ ॥**

ಈ ವಿಧವಾಗಿ ಅರಿಯದವರಾದ ಬೇರೆಯವರಾದರೋ (ತತ್ತ್ವ ದರ್ಶಿಗಳಾದ) ಬೇರೆಯವರಿಂದ ಕೇಳಿ (ಕರ್ಮಯೋಗಾದಿಗಳಿಂದ ಆತ್ಮನನ್ನು) ಉಪಾಸಿಸುತ್ತಾರೆ. ಅವರೂ (ಆತ್ಮವನ್ನು ಸಾಕ್ಷಾತ್ಕರಿಸುವುದರ ಮೂಲಕ) ಸಂಸಾರವನ್ನು ದಾಟುತ್ತಾರೆ. ಶ್ರವಣ ಮಾತ್ರದಲ್ಲಿಯೇ ನಿಷ್ಠೆಯುಳ್ಳವರೂ ಕೂಡ (ಪಾಪಗಳನ್ನು ನೀಗಿದವರಾಗಿ ಕ್ರಮವಾಗಿ ಕರ್ಮಯೋಗಾದಿಗಳನ್ನು ಆರಂಭಿಸಿ) ಸಂಸಾರವನ್ನು ದಾಟಿಯೇ ದಾಟುವರು.

(ಸಂಗತಿ : ಮುಂದೆ, ಪ್ರಕೃತಿಯೊಂದಿಗೆ ಸೇರಿರುವ ಆತ್ಮನಿಗೆ ವ್ಯತ್ಯಾಸವನ್ನು ತಿಳಿದುಕೊಳ್ಳುವ ರೀತಿಯನ್ನು ಹೇಳುವುದಕ್ಕಾಗಿ, ಸ್ಥಾವರ ಜಂಗಮಗಳಾದ ಎಲ್ಲ ಪ್ರಾಣಿಗಳೂ ಚೇತನ ಮತ್ತು ಅಚೇತನಗಳ ಸೇರುವಿಕೆಯಿಂದ ಉಂಟಾದುವೆಂದು ಹೇಳುತ್ತಾನೆ.)

**ಯಾವತ್ಸಂಜಾಯತೇ ಕಿಂಚಿತ್ಸತ್ತ್ವಂ ಸ್ಥಾವರಜಂಗಮಂ ।**
**ಕ್ಷೇತ್ರ ಕ್ಷೇತ್ರಜ್ಞಸಂಯೋಗಾತ್ತದ್ವಿದ್ಧಿ ಭರತರ್ಷಭ ॥ ೨೬ ॥**

ಸ್ಥಾವರವಾಗಲಿ ಜಂಗಮವಾಗಲಿ ಹುಟ್ಟುವ ಯಾವುದೇ ಪ್ರಾಣಿಯೂ ಶರೀರ ಮತ್ತು ಜೀವಾತ್ಮರ ಪರಸ್ಪರ ಸಂಯೋಗದಿಂದ ಆದುವೆಂದು ತಿಳಿ.

**ಸಮಂ ಸರ್ವೇಷು ಭೂತೇಷು ತಿಷ್ಠಂತಂ ಪರಮೇಶ್ವರಂ ।**
**ವಿನಶ್ಯತ್ಸ್ವವಿನಶ್ಯಂತಂ ಯಃ ಪಶ್ಯತಿ ಸ ಪಶ್ಯತಿ ॥ ೨೭ ॥**

ಎಲ್ಲಾ ಪ್ರಾಣಿಗಳಲ್ಲಿಯೂ (ದೇಹ, ಇಂದ್ರಿಯ, ಮನಸ್ಸು ಇವುಗಳಿಗೆ) ಪರಮೇಶ್ವರನಾಗಿ ಇರುವ, (ಜ್ಞಾನೈಕಾಕಾರದಿಂದ ಪರಸ್ಪರ) ಸಮವಾಗಿರುವ ಮತ್ತು ಈ ಪ್ರಾಣಿಗಳು ನಾಶಹೊಂದುವಾಗಲೂ ಅವಿನಾಶಿಯಾಗಿರುವ ಜೀವಾತ್ಮನನ್ನು ತಿಳಿದವನೇ ಆತ್ಮಸ್ವರೂಪವನ್ನು ಸರಿಯಾಗಿ ತಿಳಿದವನು.

**ಸಮಂ ಪಶ್ಯನ್ ಹಿ ಸರ್ವತ್ರ ಸಮವಸ್ಥಿತಮೀಶ್ವರಂ ।**
**ನ ಹಿನಸ್ತ್ಯಾತ್ಮನಾಽಽತ್ಮಾನಂ ತತೋ ಯಾತಿ ಪರಾಂ ಗತಿಂ ॥೨೮॥**

ಎಲ್ಲ ದೇಹಗಳಲ್ಲಿಯೂ ಇರುವ ಜೀವಾತ್ಮನನ್ನು (ಆಯಾ ದೇವಾದಿ ವಿಷಮಾಕಾರಗಳಿಲ್ಲದೆ ಜ್ಞಾನೈಕಾಕಾರನಾದುದರಿಂದ) ಸಮನನ್ನಾಗಿ ನೋಡುವವನು ಮನಸ್ಸಿನಿಂದ ತನ್ನನ್ನು ಹಿಂಸಿಸುವುದಿಲ್ಲ (ಅಂದರೆ, ಸಂಸಾರ ದಿಂದ ಬಿಡಿಸುವುದರ ಮೂಲಕ ತನ್ನನ್ನು ಕಾಪಾಡಿಕೊಳ್ಳುತ್ತಾನೆ.) ಆದರಿಂದ ಶ್ರೇಷ್ಠವಾದ ಗತಿಯನ್ನು (ಪರಮ ಪುರುಷಾರ್ಥವನ್ನು) ಹೊಂದುತ್ತಾನೆ.

**ಪ್ರಕೃತ್ಯೈವ ಚ ಕರ್ಮಾಣಿ ಕ್ರಿಯಮಾಣಾನಿ ಸರ್ವಶಃ ।**
**ಯಃ ಪಶ್ಯತಿ ತಥಾಽತ್ಮಾನ ಮಕರ್ತಾರಂ ಸ ಪಶ್ಯತಿ ॥ ೨೯ ॥**

ಎಲ್ಲ ಕರ್ಮಗಳೂ ಪ್ರಕೃತಿಯಿಂದಲೇ ಮಾಡಲ್ಪಡುವುವೆಂದೂ ಜೀವಾತ್ಮನು ಕರ್ತೃವಲ್ಲವೆಂದೂ ತಿಳಿದವನೇ (ಆತ್ಮವನ್ನು ಸರಿಯಾಗಿ) ತಿಳಿದವನು.

**ಯದಾ ಭೂತಪೃಥಗ್ಭಾವಮೇಕಸ್ಥಮನುಪಶ್ಯತಿ**
**ತತ ಏವ ಚ ವಿಸ್ತಾರಂ ಬ್ರಹ್ಮ ಸಂಪದ್ಯತೇ ತದಾ ॥ ೩೦ ॥**

ಯಾವಾಗ, ಪ್ರಾಣಿಗಳಲ್ಲಿರುವ (ದೇವತ್ವ-ಮನುಷ್ಯತ್ವ-ಹ್ರಸ್ವತ್ವ-ದೀರ್ಘತ್ವಾದಿ) ವ್ಯತ್ಯಾಸವನ್ನು ಒಂದೇ ವಸ್ತುವಿನಲ್ಲಿ (ಪ್ರಕೃತಿಯಲ್ಲಿ) ಇರುವುದಾಗಿಯೂ, ಆ ಪ್ರಕೃತಿಯಿಂದಲೇ (ಉತ್ತರೋತ್ತರ ಪುತ್ರಪೌತ್ರಾದಿ ವಿಸ್ತಾರವೆಂದೂ ತಿಳಿಯುತ್ತಾನೆಯೋ ಆಗಲೇ ಪರಿಶುದ್ಧವಾದ ಜೀವಾತ್ಮನನ್ನು ಹೊಂದುತ್ತಾನೆ.

(ಸಂಗತಿ: ಆತ್ಮನು ನಿತ್ಯನೂ, ಅಕರ್ತೃವೂ, ಪರಿಣಾಮಿಯೂ ಆದುದರಿಂದ ದೇಹಕ್ಕಿಂತ ಅವನಿಗಿರುವ, ಹಿಂದೆ ಹೇಳಿದ ವ್ಯತ್ಯಾಸವನ್ನು ಈಗ ಸ್ಪೀಕರಿಸುತ್ತಾನೆ.)

**ಅನಾದಿತ್ವಾನ್ನಿರ್ಗುಣತ್ವಾತ್ಪರಮಾತ್ಮಾಽಯಮವ್ಯಯಃ ।**
**ಶರೀರಸ್ಥೋಽಪಿ ಕೌಂತೇಯ ನ ಕರೋತಿ ನ ಲಿಪ್ಯತೇ ॥ ೩೧ ॥**

ಎಲೈ ಕುಂತೀಪುತ್ರನಾದ ಅರ್ಜುನನೆ! ಈ ಪರಿಶುದ್ಧನಾದ ಜೀವಾತ್ಮನು ಶರೀರದಲ್ಲಿರುತ್ತಿದ್ದರೂ ಆದಿಯಿಲ್ಲದುದರಿಂದ ನಾಶವಿಲ್ಲದವನು. ಸತ್ತ್ವಾದಿಗುಣಗಳಿಲ್ಲದುದರಿಂದ ಕಾರ್ಯಗಳನ್ನು ಮಾಡತಕ್ಕವನಲ್ಲ. (ದೇಹದ ಸ್ವಭಾವಗಳಿಂದ) ಲಿಪ್ತನಾಗುವುದಿಲ್ಲ.

(ಸಂಗತಿ : ಸತ್ತ್ವಾದಿಗುಣಗಳಿಲ್ಲದವನಾದುದರಿಂದ ಇವನು ಯಾವ ಕಾರ್ಯವನ್ನೂ ಮಾಡುವವನಲ್ಲವಾದರೂ, ಯಾವಾಗಲೂ ದೇಹದೊಡನೆಯೇ ಸೇರಿರುವವನಾದುದರಿಂದ ಆ ದೇಹದ ಸ್ವಭಾವಗಳು ಇವನಿಗೆ ಲೇಪಿಸಿರುವುದು ಹೇಗೆ? ಎಂದರೆ ಹೇಳುತ್ತಾನೆ.)

**ಯಥಾ ಸರ್ವಗತಂ ಸೌಕ್ಷ್ಮ್ಯಾದಾಕಾಶಂ ನೋಽಪಲಿಪ್ಯತೇ ।**
**ಸರ್ವತ್ರಾವಸ್ಥಿತೋ ದೇಹೇ ತಥಾಽಽತ್ಮಾ ನೋಽಪಲಿಪ್ಯತೇ ॥ ೩೨ ॥**

ಎಲ್ಲಾ ವಸ್ತುಗಳೊಡನೆಯೂ ಸೇರಿರುವ ಆಕಾಶವು ಸೂಕ್ಷ್ಮವಾದುದರಿಂದ (ಆಯಾ ವಸ್ತುಸ್ವಭಾವಗಳಿಂದ) ಲಿಪ್ತವಾಗದಿರುವಂತೆ ಜೀವಾತ್ಮನೂ (ಅತ್ಯಂತ ಸೂಕ್ಷ್ಮನಾದುದರಿಂದ) ದೇವಮನುಷ್ಯಾದಿ ಎಲ್ಲ ದೇಹಗಳಲ್ಲಿಯೂ ಇದ್ದರೂ (ಅವುಗಳ ಸ್ವಭಾವಗಳಿಂದ) ಲಿಪ್ತವಾಗುವುದಿಲ್ಲ.

**ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ ।**
**ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ ॥ ೩೩ ॥**

ಒಬ್ಬನೇ ಸೂರ್ಯನು ಈ ಲೋಕವನ್ನೆಲ್ಲಾ ಬೆಳಗುವಂತೆ ಜೀವಾತ್ಮನು ಎಲ್ಲ ಶರೀರವನ್ನೂ (ತನ್ನ ಜ್ಞಾನದಿಂದ) ಬೆಳಗುವನು.

(ಸಂಗತಿ : ಈ ಅಧ್ಯಾಯದ ಪ್ರಧಾನಾರ್ಥವಾದ ಹೇಯೋಪಾದೇಯ ವಿಜ್ಞಾನಕ್ಕೆ ಫಲವು ಹೇಳಲ್ಪಡುತ್ತದೆ.)

**ಕ್ಷೇತ್ರಕ್ಷೇತ್ರಜ್ಞಯೋರೇವಮಂತರಂ ಜ್ಞಾನಚಕ್ಷುಷಾ ।**
**ಭೂತಪ್ರಕೃತಿ ಮೋಕ್ಷಂ ಚ ಯೇ ವಿದುರ್ಯಾಂತಿ ತೇ ಪರಂ ॥**

ಹೀಗೆ ಶರೀರ ಮತ್ತು ಜೀವಾತ್ಮರ ನಡುವಿನ ಭೇದವನ್ನೂ ಪಂಚಭೂತಗಳಾಗಿ ಪರಿಣಮಿಸಿರುವ ಪ್ರಕೃತಿಯಿಂದ ಬಿಡಲ್ಪಡಲು ಕಾರಣವಾದ ಅಮಾನಿತ್ವಾದಿ ಗುಣಗಳನ್ನೂ ಜ್ಞಾನವೆಂಬ ಕಣ್ಣಿನಿಂದ ಅರಿಯುವವರು ಪರಿಶುದ್ಧವಾದ ಆತ್ಮವನ್ನು ಹೊಂದುವರು.

ಇಲ್ಲಿಗೆ ಕ್ಷೇತ್ರ ಕ್ಷೇತ್ರಜ್ಞ ವಿಭಾಗಯೋಗವೆಂಬ ಹದಿಮೂರನೆಯ ಅಧ್ಯಾಯವು ಮುಗಿಯಿತು.

---

# ಅಧ್ಯಾಯ ೧೪

# ತ್ರೈಗುಣ್ಯವಿಶೋಧನ

(ಸಂಗತಿ : ಹದಿಮೂರನೆಯ ಅಧ್ಯಾಯದಲ್ಲಿ—ಪರಸ್ಪರ ಸೇರಿಕೊಂಡಿರುವ ಪ್ರಕೃತಿ ಮತ್ತು ಜೀವಾತ್ಮರ ಸ್ವರೂಪ ಯಾಥಾತ್ಮ್ಯವನ್ನು ಅರಿತುಕೊಂಡು ಭಗವಂತನಲ್ಲಿ ಭಕ್ತಿಯಿಂದ ಕೂಡಿದ ಅಮಾನಿತ್ವಾದಿ ಗುಣಗಳಿಂದ ಸಂಸಾರಬಂಧವನ್ನು ನೀಗುವನೆಂದು ಹೇಳಿಯಾಯಿತು. ಅದರಲ್ಲಿ ಹಿಂದೆ ಹಿಂದೆ ಉಂಟಾದ ಸತ್ತ್ವಾದಿ ಗುಣಮಯವಾದ ಸುಖಾದಿಗಳಲ್ಲಿಯ ಸಂಗವೇ ಬಂಧಕ್ಕೆ ಹೇತುವೆಂದೂ "ಕಾರಣಂ ಗುಣಸಂಗೋಽಸ್ಯ ಸದಸದ್ಯೋನಿ ಜನ್ಮಸು"—ಎಂಬುದರಿಂದ ಹೇಳಲಾಯಿತು. ಈಗಲಾದರೋ ಆ ಸತ್ತ್ವಾದಿ ಗುಣಗಳು ಬಂಧಕ್ಕೆ ಕಾರಣವಾಗುವ ಪ್ರಕಾರವನ್ನೂ ಆ ಗುಣಗಳನ್ನು ನಿವರ್ತಿಸುವ ಪ್ರಕಾರವನ್ನೂ ಹೇಳಲಾಗುವುದು.)

**ಶ್ರೀ ಭಗವಾನುವಾಚ—**

**ಪರಂ ಭೂಯಃ ಪ್ರವಕ್ಷ್ಯಾಮಿ ಜ್ಞಾನಾನಾಂ ಜ್ಞಾನಮುತ್ತಮಂ।**
**ಯದ್‌ಜ್ಞಾತ್ವಾ ಮುನಯಸ್ಸರ್ವೇ ಪರಾಂ ಸಿದ್ಧಿಮಿತೋ ಗತಾಃ ॥**

ಯಾವ ಜ್ಞಾನವನ್ನು ಅರಿತುಕೊಂಡು ಅದನ್ನೇ ಧ್ಯಾನಿಸುವವರಾಗಿ ಋಷಿಗಳು ಈ ಸಂಸಾರಮಂಡಲಕ್ಕಿಂತ ಮೇಲಿನದಾದ ಸಿದ್ಧಿಯನ್ನು (ಪರಿಶುದ್ಧಾತ್ಮಸ್ವರೂಪವನ್ನು) ಹೊಂದಿದರೋ ಅಂಥ, ಹಿಂದೆ ಹೇಳಿದುದಕ್ಕಿಂತ ಬೇರೆಯಾದ, ಜ್ಞಾನಗಳಲ್ಲಿ ಉತ್ತಮವಾದ, (ಪ್ರಕೃತಿ ಮತ್ತು ಜೀವಾತ್ಮರೊಳಗೆಯೇ ಅಡಗಿರುವ ಸತ್ತ್ವಾದಿ ಗುಣವಿಷಯಕ) ಜ್ಞಾನವನ್ನು ಮತ್ತೆ ಹೇಳುವೆನು.

(ಸಂಗತಿ : ಮತ್ತೆಯೂ ಆ ಜ್ಞಾನವನ್ನು ಪ್ರಯೋಜನದಿಂದ ವಿಶೇಷಿಸಿ ಹೇಳುತ್ತಾನೆ.)

**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।**
**ಸರ್ಗೇಽಪಿ ನೋಪಜಾಯಂತೇ ಪ್ರಳಯೇ ನ ವ್ಯಥಂತಿ ಚ ॥ ೨ ॥**

(ಮುಂದೆ ಹೇಳಲಿರುವ) ಈ ಜ್ಞಾನವನ್ನು ಪಡೆದು ನನಗೆ ಸಮನಾಗಿ ರೋಣವನ್ನು ಹೊಂದಿದವರು ಸೃಷ್ಟಿಕಾಲದಲ್ಲಿ ಹುಟ್ಟುವುದಿಲ್ಲ; ಪ್ರಳಯ ಕಾಲದಲ್ಲಿ ಸಂಹರಿಸಲ್ಪಡುವುದೂ ಇಲ್ಲ.

(ಸಂಗತಿ: ಈಗ, ಮತ್ತೆ, ಪ್ರಕೃತಿಯಲ್ಲಿಯ ಗುಣಗಳು ಸಂಸಾರ ಬಂಧಕ್ಕೆ ಕಾರಣವಾಗುವ ಪ್ರಕಾರವನ್ನು ಹೇಳುವುದಕ್ಕಾಗಿ, ಎಲ್ಲ ಪ್ರಾಣಿಗಳ ಸಮೂಹವೂ ಪ್ರಕೃತಿ ಮತ್ತು ಜೀವಾತ್ಮರ ಸಂಸರ್ಗದಿಂದ ಆದುದೆಂದು "ಯಾವತ್ಸಂಜಾಯತೇ ಕಿಂಚಿತ್"—ಎಂಬುದರಿಂದ ಹಿಂದೆ ಹೇಳಲಾಯಿತು. ಇದೂ ಭಗವಂತನಾದ ತನ್ನಿಂದಲೇ ಮಾಡಲ್ಪಟ್ಟಿದೆಂದು ಹೇಳುತ್ತಾನೆ.)

**ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಂ ।**
**ಸಂಭವ ಸ್ಸರ್ವಭೂತಾನಾಂ ತತೋ ಭವತಿ ಭಾರತ ॥ ೩ ॥**

(ಲೋಕಗಳಿಗೆಲ್ಲ) ಕಾರಣವಾದ ನನಗೆ ಶೇಷಭೂತವಾದ ದೊಡ್ಡ ಪ್ರಕೃತಿಯೆಂಬುದರಲ್ಲಿ ನಾನು ಗರ್ಭವನ್ನಿಡುತ್ತೇನೆ. ಅದರಿಂದ ಎಲ್ಲ ಭೂತಗಳೂ ಹುಟ್ಟುವುವು.

(ಸಂಗತಿ: ಕಾರ್ಯಾವಸ್ಥೆಯಲ್ಲಿರುವ ಚೇತನಾಚೇತನರೂಪ ಪ್ರಕೃತಿಗಳನ್ನು ಸೇರಿಸುವವನೂ ನಾನೇ ಎಂದು ಹೇಳುತ್ತಾನೆ.)

**ಸರ್ವಯೋನಿಷು ಕೌನ್ತೇಯ ಮೂರ್ತಯಸ್ಸಂಭವನ್ತಿ ಯಾಃ ।**
**ತಾಸಾಂ ಬ್ರಹ್ಮ ಮಹದ್ಯೋನಿರಹಂ ಬೀಜಪ್ರದಃ ಪಿತಾ ॥ ೪ ॥**

(ದೇವ, ಗಂಧರ್ವ, ಯಕ್ಷ, ರಾಕ್ಷಸ, ಮನುಷ್ಯ, ಪಶು, ಪಕ್ಷಿಗಳೇ ಮುಂತಾದ) ಎಲ್ಲಾ ಜಾತಿಗಳಲ್ಲಿಯೂ ಯಾವ ಯಾವ ವಸ್ತುಗಳು ಹುಟ್ಟುವುವೋ ಅವಕ್ಕೆ ದೊಡ್ಡದಾಗಿರುವ ಪ್ರಕೃತಿಯೇ ಕಾರಣ. ನಾನು (ಅದರಲ್ಲಿ) ಬೀಜವನ್ನಿಡುವ ತಂದೆಯು.

(ಸಂಗತಿ: ಹೀಗೆ ಸೃಷ್ಟ್ಯಾರಂಭದಲ್ಲಿ ಅದರ ಹಿಂದಿನ ಕರ್ಮಕ್ಕೆ ವಶವಾಗಿ ಅಚೇತನ ಸಂಸರ್ಗದಿಂದ ದೇವಾದಿ ಜಾತಿಗಳಲ್ಲಿ ಹುಟ್ಟಿದವರಿಗೆ ಮತ್ತೆ ಮತ್ತೆ ದೇವಾದಿ ಭಾವವುಂಟಾಗಲು ಕಾರಣವೇನೆಂಬುದನ್ನು ಹೇಳುತ್ತಾನೆ.)

**ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿ ಸಂಭವಾಃ ।**
**ನಿಬಧ್ನನ್ತಿ ಮಹಾಬಾಹೋ ದೇಹೇ ದೇಹಿನಮವ್ಯಯಂ ॥ ೫ ॥**

(ಸಂಗತಿ : ನೈಮಿತ್ತಿಕ ಸೃಷ್ಟ್ಯಾರಂಭದಲ್ಲಿ ಪ್ರಾಚೀನ ಕರ್ಮಗಳಿಗೆ ತಕ್ಕಂತೆ ಪರಮಪುರುಷನ ಸಂಕಲ್ಪದಿಂದ ಅಚೇತನ ಸಂಸರ್ಗವಾಗುವುದ ರಿಂದ ಜನ್ಮವುಂಟಾಗುವುದು ಉಚಿತ. ಪ್ರಾಚೀನ ಕರ್ಮಕ್ಕೆ ಫಲವು ಆ ಜನ್ಮದಿಂದಲೇ ದೊರಕಿಹೋಯಿತು. ಆ ಕರ್ಮದ ಅವಸಾನದಲ್ಲಿ ಅದ ರಿಂದ ಉಂಟಾದ ಶರೀರವು ನಾಶವಾಗುವುದು. ಆತ್ಮನಾದರೋ ಸ್ವಭಾವ ದಲ್ಲಿ ಪರಿಶುದ್ಧನು. ಆದುದರಿಂದ ಇವನು ನಿತ್ಯಸೃಷ್ಟಿಗೆ ಯಾವ ಕಾರಣ ದಿಂದ ಒಳಗಾಗುವನು ?—ಎಂದು ಆಕ್ಷೇಪಿಸಿದರೆ, ಅದರ ಸಮಾಧಾನ ಕ್ಕಾಗಿ ಗುಣಗಳು ಬಂಧಿಸುವ ವಿಧವನ್ನು ಈ ಸಂದರ್ಭದಲ್ಲಿ ತಿಳಿಸುತ್ತಾನೆ.)

ಪ್ರಕೃತಿಯಿಂದ ಹುಟ್ಟುವ ಸತ್ತ್ವ, ರಜಸ್ಸು, ತಮಸ್ಸೆಂಬ ಗುಣಗಳು ಶರೀರದಲ್ಲಿರುವ ಅವಿನಾಶಿಯಾದ ಜೀವಾತ್ಮನನ್ನು ಬಂಧಿಸುತ್ತವೆ. (ಶರೀರ ದಲ್ಲಿರುವುದೇ ಬಂಧಿಸಲು ಉಪಾಧಿಸಲು ಉಪಾಧಿಯೆಂದು ಭಾವ.)

(ಸಂಗತಿ : ಸತ್ತ್ವ, ರಜಸ್ಸು, ತಮಸ್ಸುಗಳ ಆಕಾರವನ್ನೂ, ಅವು ಬಂಧಿಸುವ ಪ್ರಕಾರವನ್ನೂ ಹೇಳುತ್ತಾನೆ.)

**ತತ್ರ ಸತ್ತ್ವಂ ನಿರ್ಮಲತ್ವಾತ್ ಪ್ರಕಾಶಕಮನಾಮಯಂ ।**
**ಸುಖಸಂಗೇನ ಬಧ್ನಾತಿ ಜ್ಞಾನಸಂಗೇನ ಚಾನಘ ॥ ೬ ॥**

ನಿರ್ದೋಷಿಯಾದ ಅರ್ಜುನನೇ ! ಅವುಗಳಲ್ಲಿ ಸತ್ತ್ವಗುಣವು ನಿರ್ಮಲವಾದುದರಿಂದ ಪ್ರಕಾಶವನ್ನು ಉಂಟುಮಾಡುವುದು, ರೋಗವಿಲ್ಲ ದುದಕ್ಕೂ ಕಾರಣವು. (ಅದು) ಸುಖದಲ್ಲಿ ಆಸಕ್ತಿಯಿಂದಲೂ, ಜ್ಞಾನದಲ್ಲಿ ಆಸಕ್ತಿಯಿಂದಲೂ ಬಂಧಿಸುವುದು.

**ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗಸಮುದ್ಭವಂ ।**
**ತನ್ನಿಬಧ್ನಾತಿ ಕೌನ್ತೇಯ ಕರ್ಮಸಂಗೇನ ದೇಹಿನಂ ॥ ೭ ॥**

ರಜೋಗುಣವನ್ನು ರಾಗಕ್ಕೆ-(ಸ್ತ್ರೀಪುರುಷರ ಪರಸ್ಪರ ಪ್ರೀತಿಗೆ) ಕಾರಣವನ್ನಾಗಿಯೂ, ತೃಷ್ಣೆ-(ಶಬ್ದಾದಿ ವಿಷಯಗಳಲ್ಲಿ ಆಸೆ) ಸಂಗ-(ಪುತ್ರ

ಮಿತ್ರಾದಿಗಳೊಡನೆ ಸೇರಿರಬೇಕೆಂಬ ಇಚ್ಛೆ) ಇವುಗಳಿಗೆ ಉತ್ಪತ್ತಿಸ್ಥಾನ ವನ್ನಾಗಿಯೂ ತಿಳಿ. ಆ ರಜೋಗುಣವು ಜೀವಾತ್ಮನನ್ನು ಕರ್ಮಗಳಲ್ಲಿ ಆಸಕ್ತಿ ಹುಟ್ಟಿಸುವುದರ ಮೂಲಕ ಬಂಧಿಸುವುದು.

**ತಮಸ್ತ್ವಜ್ಞಾನಜಂ ವಿದ್ಧಿ ಮೋಹನಂ ಸರ್ವದೇಹಿನಾಂ ।**
**ಪ್ರಮಾದಾಲಸ್ಯನಿದ್ರಾಭಿಃ ತನ್ನಿಬಧ್ನಾತಿ ಭಾರತ ॥ ೮ ॥**

ತಮೋಗುಣವನ್ನಾದರೋ ಅಜ್ಞಾನ (ವಸ್ತುಯಾಥಾತ್ಮ್ಯ ವಿಪರೀತ ಜ್ಞಾನ) ದಿಂದ ಉಂಟಾದುದನ್ನಾಗಿಯೂ, ಎಲ್ಲ ಪ್ರಾಣಿಗಳಿಗೂ ಮೋಹ (ವಿರುದ್ಧಜ್ಞಾನ) ವನ್ನು ಉಂಟುಮಾಡತಕ್ಕುದನ್ನಾಗಿಯೂ ತಿಳಿ. ಅದು ಅಜಾಗರೂಕತೆ, ಸೋಮಾರಿತನ, ನಿದ್ರೆ ಇವುಗಳ ಮೂಲಕ (ಜೀವಾತ್ಮನನ್ನು) ಬಂಧಿಸುವುದು.

(ಸಂಗತಿ; ಸತ್ತ್ವಾದಿಗುಣಗಳು ಸಂಸಾರದಲ್ಲಿ ದೇಹಿಯನ್ನು ಬಂಧಿಸುವುದಕ್ಕೆ ದ್ವಾರಭೂತವಾದುವುಗಳಲ್ಲಿ ಮುಖ್ಯವಾದುವನ್ನು ಹೇಳುತ್ತಾನೆ.

**ಸತ್ತ್ವಂ ಸುಖೇ ಸಂಜಯತಿ ರಜಃ ಕರ್ಮಣಿ ಭಾರತ ।**
**ಜ್ಞಾನಮಾವೃತ್ಯ ತು ತಮಃ ಪ್ರಮಾದೇ ಸಂಜಯತ್ಯುತ ॥ ೯ ॥**

ಸತ್ತ್ವಗುಣವು ಸುಖದಲ್ಲಿ ಆಸೆಯುಂಟುಮಾಡುವುದು. ರಜೋಗುಣವು ಕರ್ಮದಲ್ಲಿ (ಆಸೆ ಹುಟ್ಟಿಸುವುದು) ತಮೋಗುಣವಾದರೋ, ಜ್ಞಾನವನ್ನು ಕವಿದು ಅಜಾಗ್ರತೆಯಲ್ಲಿ ಆಸೆಯುಂಟುಮಾಡುವುದು.

(ಸಂಗತಿ: ದೇಹವಾಗಿ ಮಾರ್ಪಟ್ಟಿರುವ ಪ್ರಕೃತಿಯ ಸ್ವರೂಪಕ್ಕೆ ಸೇರಿದವು ಸತ್ತ್ವಾದಿಗುಣಗಳು. ಆದುದರಿಂದಲೇ ಅವು ಯಾವಾಗಲೂ ಇದ್ದುಕೊಂಡಿವೆ. ಹೀಗಿರುವಲ್ಲಿ ಅವು ಪರಸ್ಪರ ವಿರುದ್ಧವಾದ ಕಾರ್ಯಗಳನ್ನು ಹೇಗೆ ಉಂಟು ಮಾಡುತ್ತವೆ?—ಎಂದರೆ, ಹೇಳುತ್ತಾನೆ.)

**ರಜಸ್ತಮಶ್ಚಾಭಿಭೂಯ ಸತ್ತ್ವಂ ಭವತಿ ಭಾರತ ।**
**ರಜಸ್ಸತ್ತ್ವಂ ತಮಶ್ಚೈವ ತಮಸ್ಸತ್ತ್ವಂ ರಜಸ್ತಥಾ ॥ ೧೦ ॥**

ರಜೋಗುಣವನ್ನೂ, ತಮೋಗುಣವನ್ನೂ ಕುಗ್ಗಿಸಿ ಸತ್ತ್ವಗುಣವೂ,

ಸತ್ತ್ವಗುಣವನ್ನೂ, ತಮೋಗುಣವನ್ನೂ ಕುಗ್ಗಿಸಿ ರಜೋಗುಣವೂ, ಹಾಗೆಯೇ ಸತ್ತ್ವಗುಣವನ್ನೂ ರಜೋಗುಣವನ್ನೂ ಕುಗ್ಗಿಸಿ ತಮೋಗುಣವೂ ಅಧಿಕವಾಗುವುದು.

(ಟಿಪ್ಪಣಿ : ಸತ್ತ್ವಾದಿ ಮೂರುಗುಣಗಳೂ ಪ್ರಕೃತಿಸಂಸರ್ಗವುಳ್ಳ ಆತ್ಮನ ಸ್ವರೂಪಾನುಬಂಧಿಗಳಾದರೂ, ಪ್ರಾಚೀನ ಕರ್ಮವಶದಿಂದಲೂ ದೇಹಕ್ಕೆ ಆಪ್ಯಾಯಕವಾದ ಆಹಾರಗಳ ವೈಷಮ್ಯದಿಂದಲೂ ಈ ಗುಣ ವೈಷಮ್ಯವಾಗುವುದೆಂದು ಭಾವ.)

(ಸಂಗತಿ : ಇದನ್ನು ಆಯಾ ಕಾರ್ಯಗಳನ್ನು ನೋಡಿಯೇ ಅರಿಯಬೇಕೆಂದು ಹೇಳುತ್ತಾನೆ.)

**ಸರ್ವದ್ವಾರೇಷು ದೇಹೇಽಸ್ಮಿನ್ ಪ್ರಕಾಶ ಉಪಜಾಯತೇ ।**
**ಜ್ಞಾನಂ ಯದಾ ತದಾ ವಿದ್ಯಾತ್ ವಿವೃದ್ಧಂ ಸತ್ತ್ವಮಿತ್ಯುತ॥೧೧॥**

ಈ ದೇಹದಲ್ಲಿ ಎಲ್ಲಾ ಇಂದ್ರಿಯಗಳಲ್ಲಿಯೂ ಯಾವಾಗ ವಸ್ತುವಿನ ಯಾಥಾತ್ಮ್ಯಪ್ರಕಾಶದಲ್ಲಿ ಜ್ಞಾನವುಂಟಾಗುವುದೋ ಆಗ ಆ ದೇಹದಲ್ಲಿ ಸತ್ತ್ವವು ವೃದ್ಧಿಯಾಗಿದೆಯೆಂದು ತಿಳಿಯಬೇಕು.

**ಲೋಭಃ ಪ್ರವೃತ್ತಿರಾರಂಭಃ ಕರ್ಮಣಾಮಶಮಃ ಸ್ಪೃಹಾ ।**
**ರಜಸ್ಯೇತಾನಿ ಜಾಯನ್ತೇ ವಿವೃದ್ಧೇ ಭರತರ್ಷಭ ॥ ೧೨ ॥**

ಲೋಭ–(ತನ್ನ ದ್ರವ್ಯವನ್ನು ಕೈಬಿಡದಿರುವುದು) ಪ್ರವೃತ್ತಿ–(ಪ್ರಯೋಜನವನ್ನು ಉದ್ದೇಶಿಸದೆಯೇ ಚಲನ ಸ್ವಭಾವವುಳ್ಳೋಣವು) ಆರಂಭ–(ಫಲಕ್ಕೆ ಸಾಧನಭೂತವಾದ ಕಾರ್ಯಗಳಲ್ಲಿ ತೊಡಗುವುದು) ಅಶಮ-(ಇಂದ್ರಿಯ ತೃಪ್ತಿಯಿಲ್ಲದಿರುವುದು) ಸ್ಪೃಹೆ–(ವಿಷಯಗಳಲ್ಲಿ ಇಚ್ಛೆ)—ಇವುಗಳು ರಜೋಗುಣವು ವೃದ್ಧಿಯಾಗಿರಲು ಉಂಟಾಗಿರುತ್ತವೆ.

**ಅಪ್ರಕಾಶೋಽಪ್ರವೃತ್ತಿಶ್ಚ ಪ್ರಮಾದೋ ಮೋಹ ಏವ ಚ ।**
**ತಮಸ್ಯೇತಾನಿ ಜಾಯನ್ತೇ ವಿವೃದ್ಧೇ ಕುರುನಂದನ ॥ ೧೩ ॥**

ಪ್ರಕಾಶ (ಜ್ಞಾನ) ವಿಲ್ಲದಿರುವುದು, ಕರ್ಮವಿಮುಖತೆ, ಅಜಾಗ್ರತೆ,

ೋಹ–(ವಿಪರೀತಜ್ಞಾನ) ಇವು ತಮೋಗುಣವು ವೃದ್ಧಿಯಾಗಿರಲು ಹುಟ್ಟುತ್ತವೆ.

**ಯದಾ ಸತ್ತ್ವೇ ಪ್ರವೃದ್ಧೇ ತು ಪ್ರಲಯಂ ಯಾತಿ ದೇಹಭೃತ್ ।**
**ತದೋತ್ತಮವಿದಾಂ ಲೋಕಾನಮಲಾನ್ ಪ್ರತಿಪದ್ಯತೇ ॥ ೧೪ ॥**

(ಸಂಗತಿ : ಮರಣಕಾಲದಲ್ಲಿ ರಜೋಗುಣ ತಮೋಗುಣಗಳ ವೃದ್ಧಿಗೆ ಕಾರಣವಾದುವುಗಳನ್ನು ಮೊದಲೇ ಪರಿಹರಿಸುವುದಕ್ಕಾಗಿ, ಮರಣಕಾಲದಲ್ಲಿ ವಿವೃದ್ಧವಾಗುವ ಸತ್ತ್ವಾದಿ ಗುಣಗಳಿಗೆ ಪ್ರತ್ಯೇಕ ಪ್ರತ್ಯೇಕವಾಗಿ ಇಲ್ಲಿ ಫಲವು ಹೇಳಲ್ಪಡುವುದು.)

ಪ್ರಾಣಿಯು ಸತ್ತ್ವಗುಣವು ವೃದ್ಧಿಯಾದಾಗ ಮರಣ ಹೊಂದಿದರೆ ಅಜ್ಞಾನ (ಮಲ) ರಹಿತಗಳಾದ ಆತ್ಮ ಯಾಥಾತ್ಮ್ಯವನ್ನು ಅರಿತವರ ಸಮೂಹಗಳನ್ನು ಹೊಂದುತ್ತಾನೆ. (ಆತ್ಮ ಯಾಥಾತ್ಮ್ಯವಿದರ ವಂಶಗಳಲ್ಲಿ ಹುಟ್ಟಿ ಆತ್ಮ ಯಾಥಾತ್ಮ್ಯ ಜ್ಞಾನಕ್ಕೆ ಸಾಧನವಾದ ಪುಣ್ಯಕರ್ಮಗಳನ್ನು ಆರಂಭಿಸುತ್ತಾನೆ—ಎಂದು ಭಾವ.)

**ರಜಸಿ ಪ್ರಳಯಂಗತ್ವಾ ಕರ್ಮಸಂಗಿಷು ಜಾಯತೇ ।**
**ತಥಾ ಪ್ರಲೀನಸ್ತಮಸಿ ಮೂಢಯೋನಿಷು ಜಾಯತೇ ॥ ೧೫ ॥**

ರಜೋಗುಣವು ವೃದ್ಧಿಯಾದಾಗ ಮರಣ ಹೊಂದಿದರೆ, ಕರ್ಮಾಸಕ್ತರೊಳಗೆ ಹುಟ್ಟುತ್ತಾನೆ. (ಅಲ್ಲಿ ಹುಟ್ಟಿ ಸ್ವರ್ಗಾದಿ ಫಲಸಾಧನಗಳಾದ ಕರ್ಮಗಳನ್ನು ಆರಂಭಿಸುತ್ತಾನೆ—ಎಂದು ಭಾವ) ಹಾಗೆಯೇ, ತಮೋಗುಣವು ವೃದ್ಧಿಯಾದಾಗ ಮರಣಹೊಂದಿದವನು ಜ್ಞಾನವಿಲ್ಲದ (ಶ್ವಸೂಕರಾದಿ) ಜಾತಿಗಳಲ್ಲಿ ಹುಟ್ಟುತ್ತಾನೆ.

**ಕರ್ಮಣಸ್ಸುಕೃತಸ್ಯಾಹುಃ ಸಾತ್ತ್ವಿಕಂ ನಿರ್ಮಲಂ ಫಲಂ ।**
**ರಜಸಸ್ತು ಫಲಂ ದುಃಖಮಜ್ಞಾನಂ ತಮಸಃ ಫಲಂ ॥ ೧೬ ॥**

ಪುಣ್ಯಕರ್ಮದ ಫಲವು ನಿರ್ಮಲವೂ ಸತ್ತ್ವೋತ್ತರವೂ ಆದುದೆಂದೂ ರಜೋಗುಣದ ಫಲವು ದುಃಖವೇ ಎಂದೂ ತಮೋಗುಣದ ಫಲವು ಅಜ್ಞಾನವೆಂದೂ (ಆಯಾ ಗುಣಗಳ ಪರಿಣಾಮ ಬಲ್ಲವರು.) ಹೇಳುತ್ತಾರೆ.

(ಸಂಗತಿ : ಅಂತಹ ಅಧಿಕ ಸತ್ತ್ವಾದಿಗುಣಗಳಿಂದ ಉಂಟಾಗುವ ನಿರ್ಮಲಾದಿಫಲವು ಯಾವುದು ? ಎಂದರೆ ಹೇಳುತ್ತಾನೆ ;)

**ಸತ್ತ್ವಾತ್ಸಂಜಾಯತೇ ಜ್ಞಾನಂ ರಜಸೋ ಲೋಭ ಏವ ಚ ।**
**ಪ್ರಮಾದ ಮೋಹೌ ತಮಸೋ ಭವತೋಽಜ್ಞಾನಮೇವ ಚ ॥೧೭॥**

(ಹೀಗೆ ಪರಂಪರೆಯಾಗಿ ಉಂಟಾಗುವ ಅಧಿಕ) ಸತ್ತ್ವಗುಣದಿಂದ (ಆತ್ಮನ ನಿಜಸ್ವರೂಪವನ್ನು ನೇರವಾಗಿ ನೋಡುವ) ಜ್ಞಾನವುಂಟಾಗುವುದು (ಹಾಗೆಯೇ ಪ್ರವೃದ್ಧವಾದ) ರಜೋಗುಣದಿಂದ (ಸ್ವರ್ಗಾದಿಫಲಗಳಲ್ಲಿ) ಆಸೆಯೂ, (ಹಾಗೆಯೇ ವೃದ್ಧಿಹೊಂದಿದ) ತಮೋಗುಣದಿಂದ ಅಜಾಗ್ರತೆ, ಮೋಹ (ವಿಪರೀತಜ್ಞಾನ) ಮತ್ತು ಅಜ್ಞಾನವೂ ಉಂಟಾಗುವುವು.

**ಊರ್ಧ್ವಂ ಗಚ್ಛನ್ತಿ ಸತ್ತ್ವಸ್ಥಾಃ ಮಧ್ಯೇ ತಿಷ್ಠನ್ತಿ ರಾಜಸಾಃ ।**
**ಜಘನ್ಯಗುಣವೃತ್ತಿಸ್ಥಾ ಅಧೋ ಗಚ್ಛನ್ತಿ ತಾಮಸಾಃ ॥ ೧೮ ॥**

ಸತ್ತ್ವಗುಣದಲ್ಲಿ ನಿಷ್ಠೆಯುಳ್ಳವರು ಮೇಲೆ ಹೋಗುವರು. (ಕ್ರಮವಾಗಿ ಸಂಸಾರಬಂಧದಿಂದ ಬಿಡಲ್ಪಡುವರು) ರಜೋಗುಣಮೇಲಾದವರು ನಡುವೆ ಉಳಿಯುವರು. (ಫಲಸಾಧನವಾದ ಕರ್ಮಗಳನ್ನು ಮಾಡಿ ಅವುಗಳ ಫಲವನ್ನೂ ಅನುಭವಿಸಿ ಮತ್ತೆ ಹುಟ್ಟಿ ಆ ಕರ್ಮಗಳನ್ನೇ ಆಚರಿಸುವರು.) ತಮೋಗುಣ ತಲೆಯೆತ್ತಿದವರು (ಮೇಲೆ ಮೇಲೆ) ನಿಕೃಷ್ಟವಾದ ತಮೋಗುಣದ ವ್ಯಾಪಾರಗಳಲ್ಲಿ ನಿಷ್ಠೆಯುಳ್ಳವರಾಗಿ ಕೆಳಕೆಳಗೇ ಇಳಿಯುವರು. (ಅಂತ್ಯಜಾತಿ, ಅಲ್ಲಿಂದ ತಿರ್ಯಕ್ಕು, ಅಲ್ಲಿಂದ ಕ್ರಿಮಿಕೀಟಾದಿಗಳು ಅಲ್ಲಿಂದ ಮುಂದೆ ಸ್ಥಾವರ, ಅಲ್ಲಿಂದ ಗುಲ್ಮ ಲತೆ ಮುಂತಾದುವು, ಅಲ್ಲಿಂದ ಶಿಲೆ, ಕಾಷ್ಠ, ಲೋಷ್ಟ, ತೃಣ ಮುಂತಾದ ಜನ್ಮಗಳನ್ನು ತಾಮಸರು ಹೊಂದುವರೆಂದು ಭಾವ.)

(ಸಂಗತಿ : ಆಹಾರ ವಿಶೇಷಗಳಿಂದಲೂ ಪ್ರಯೋಜನಾಪೇಕ್ಷೆಯಿಲ್ಲದೆ ಆಚರಿಸಿದ ಸುಕೃತ ವಿಶೇಷಗಳಿಂದಲೂ ವಿವೃದ್ಧವಾದ ಸತ್ತ್ವಗುಣವುಳ್ಳವರು ಗುಣಗಳನ್ನು ದಾಟಿ ಮೇಲೆ ಹೋಗುವ ಪ್ರಕಾರವನ್ನು ಹೇಳುತ್ತಾನೆ.)

**ನಾನ್ಯಂ ಗುಣೇಭ್ಯಃ ಕರ್ತಾರಂ ಯದಾ ದ್ರಷ್ಟಾನುಪಶ್ಯತಿ ।**
**ಗುಣೇಭ್ಯಶ್ಚ ಪರಂ ವೇತ್ತಿ ಮದ್ಭಾವಂ ಸೋಽಧಿಗಚ್ಛತಿ ॥ ೧೯ ॥**

ಜ್ಞಾನಿಯಾದ ಜೀವಾತ್ಮನು ಯಾವಾಗ ಗುಣಗಳಲ್ಲದೆ ಬೇರೆ ಕರ್ತೃವನ್ನು ಕಾಣುವುದಿಲ್ಲವೋ ಮತ್ತು ಗುಣಗಳಿಗಿಂತ ಬೇರೆಯುವನಾದ ಜೀವಾತ್ಮನನ್ನೂ (ಕರ್ತೃವಲ್ಲದವನನ್ನಾಗಿ) ತಿಳಿಯುತ್ತಾನೆಯೋ ಅವನು ನನ್ನ ಸ್ವಭಾವವನ್ನು ಪಡೆಯುವನು.

(ಸಂಗತಿ : ಕರ್ತೃವಾದ ಗುಣಗಳಿಗಿಂತ ಬೇರೆಯುವನೂ ಅಕರ್ತೃವೂ ಆದ ಜೀವಾತ್ಮನನ್ನು ಅರಿತವನು ಭಗವಂತನ ಸ್ವಭಾವವನ್ನು ಪಡೆಯುವನೆನ್ನಲಾಯಿತು. ಆ ಭಗವತ್ಸ್ವಭಾವವೆಂಥದು?—ಎಂದರೆ ಹೇಳುತ್ತಾನೆ.)

**ಗುಣಾನೇತಾನತೀತ್ಯ ತ್ರೀನ್ ದೇಹೀ ದೇಹಸಮುದ್ಭವಾನ್ ।**
**ಜನ್ಮಮೃತ್ಯುಜರಾದುಃಖೈರ್ವಿಮುಕ್ತೋಽಮೃತಮಶ್ನುತೇ ॥ ೨೦ ॥**

ದೇಹವಿಶಿಷ್ಟನಾದ ಜೀವಾತ್ಮನು ದೇಹದಲ್ಲಿ ಉಂಟಾದ ಈ ಮೂರು ಗುಣಗಳನ್ನೂ ದಾಟಿ ಜನ್ಮ, ಮರಣ, ಮುಪ್ಪು ಇವುಗಳಿಂದುಂಟಾಗುವ ದುಃಖಗಳಿಂದ ಬಿಡಲ್ಪಟ್ಟವನಾಗಿ ಮರಣವಿಲ್ಲದ ಆತ್ಮವನ್ನು ಅನುಭವಿಸುತ್ತಾನೆ. (ಇದುವೇ ನನ್ನ ಸ್ವಭಾವವೆಂದು ಅರ್ಥ.)

(ಸಂಗತಿ : ಈಗ, ಮೂರು ಗುಣಗಳನ್ನೂ ದಾಟಿರುವವನ ಸ್ವಭಾವಕ್ಕೆ ಸೂಚಕವಾದ ಅನುಷ್ಠಾನ ಪ್ರಕಾರವನ್ನೂ, ಗುಣಗಳನ್ನೂ ದಾಟುವ ಉಪಾಯವನ್ನೂ ಅರ್ಜುನನು ಪ್ರಶ್ನಿಸುತ್ತಾನೆ.)

**ಅರ್ಜುನ ಉವಾಚ—**

**ಕೈರ್ಲಿಂಗೈಸ್ತ್ರೀಗುಣಾನೇತಾನತೀತೋ ಭವತಿ ಪ್ರಭೋ ।**
**ಕಿಮಾಚಾರಃ ಕಥಂ ಚೈತಾಂಸ್ತ್ರೀನ್ ಗುಣಾನತಿವರ್ತತೇ ॥ ೨೧ ॥**

ಪ್ರಭುವೇ ! ಈ ಮೂರುಗುಣಗಳನ್ನೂ ದಾಟಿರುವವನು ಯಾವ ಲಕ್ಷಣಗಳಿಂದ ಕೂಡಿರುವನು ? ಅವನ ಅನುಷ್ಠಾನವೆಂಥದು ? ಹೇಗೆ ಈ ಮೂರುಗುಣಗಳನ್ನೂ ದಾಟುತ್ತಾನೆ ?

**ಶ್ರೀ ಭಗವಾನುವಾಚ—**

**ಪ್ರಕಾಶಂ ಚ ಪ್ರವೃತ್ತಿಂ ಚ ಮೋಹಮೇವ ಚ ಪಾಂಡವ ।**
**ನ ದ್ವೇಷ್ಟಿ ಸಂಪ್ರವೃತ್ತಾನಿ ನ ನಿವೃತ್ತಾನಿ ಕಾಂಕ್ಷತಿ ॥ ೨೨ ॥**

ಶ್ರೀ ಭಗವಂತನು ಹೇಳಿದನು —

(ಆತ್ಮವ್ಯತಿರಿಕ್ತವಾದ ಅನಿಷ್ಟವಿಷಯಗಳಲ್ಲಿ) ಉಂಟಾದ, (ಸತ್ತ್ವ, ರಜಸ್ಸು–ಇವುಗಳ ಕಾರ್ಯವಾದ) ಪ್ರಕಾಶ, ಪ್ರವೃತ್ತಿ, ಮೋಹವೆಂಬುವುಗಳಲ್ಲಿ ದ್ವೇಷಪಡುವುದಿಲ್ಲ. (ಆತ್ಮವ್ಯತಿರಿಕ್ತವಾದ ಇಷ್ಟವಿಷಯಗಳಲ್ಲಿ) ಇಲ್ಲದೆ ಇರುವ ಇವುಗಳಿಗಾಗಿ ಆಸೆಪಡುವುದೂ ಇಲ್ಲ.

**ಉದಾಸೀನವದಾಸೀನೋ ಗುಣೈರ್ಯೋ ನ ವಿಚಾಲ್ಯತೇ ।**
**ಗುಣಾ ವರ್ತಂತ ಇತ್ಯೇವ ಯೋಽವತಿಷ್ಠತಿ ನೇಙ್ಗತೇ ॥ ೨೩ ॥**

(ಗುಣಗಳಿಗಿಂತ ಬೇರೆಯಾದ) ಆತ್ಮನನ್ನು ನೋಡುವುದರಿಂದ ಉಂಟಾದ ತೃಪ್ತಿಯಿಂದ ಇತರ ವಿಷಯಗಳಲ್ಲಿ ಉದಾಸೀನನಂತೆ ಇದ್ದುಕೊಂಡು, ಸತ್ತ್ವಾದಿಗುಣಗಳಿಂದ ಯಾವನು ವಿಚಲಿತನಾಗುವುದಿಲ್ಲವೋ, ಗುಣಗಳು (ತಮ್ಮ ಪ್ರಕಾಶಾದಿ ಕಾರ್ಯಗಳಲ್ಲಿ) ವರ್ತಿಸುತ್ತಿವೆಯೆಂದು ಸುಮ್ಮನೆ ಇರುತ್ತಾನೆಯೋ, (ಗುಣಗಳ ಕಾರ್ಯಕ್ಕೆ ಅನುಗುಣವಾಗಿ) ಚಲಿಸನೋ.

**ಸಮದುಃಖಸುಖಸ್ಸ್ವಸ್ಥಸ್ಸಮಲೋಷ್ಟಾಶ್ಮಕಾಂಚನಃ ।**
**ತುಲ್ಯಪ್ರಿಯಾಪ್ರಿಯೋಧೀರಸ್ತುಲ್ಯನಿನ್ದಾತ್ಮಸಂಸ್ತುತಿಃ ॥ ೨೪ ॥**
**ಮಾನಾವಮಾನಯೋಸ್ತುಲ್ಯಸ್ತುಲ್ಯೋ ಮಿತ್ರಾರಿಪಕ್ಷಯೋಃ ।**
**ಸರ್ವಾರಂಭಪರಿತ್ಯಾಗೀ ಗುಣಾತೀತಸ್ಸ ಉಚ್ಯತೇ ॥ ೨೫ ।**

ದುಃಖ ಸುಖ, ಇವುಗಳಲ್ಲಿ ಸಮಚಿತ್ತನೂ, ತನ್ನಲ್ಲಿಯೇ (ಆತ್ಮದಲ್ಲಿಯೆ) ಇರತಕ್ಕವನು, (ಆದುದರಿಂದಲೇ) ಮಣ್ಣು, ಕಲ್ಲು, ಬಂಗಾರಗಳನ್ನು ಸಮನಾಗಿ ಚಿಂತಿಸುವವನು, ಇಷ್ಟ, ಅನಿಷ್ಟಗಳಲ್ಲಿ ಸಮನು, ದೇವಾತ್ಮವಿವೇಕವುಳ್ಳವನು, ತನ್ನ ನಿಂದೆ ಮತ್ತು ಸ್ತುತಿಗಳನ್ನು ಸಮನಾ ಎಣಿಸುವವನು.

ಬಹುಮಾನ ಅವಮಾನಗಳಲ್ಲಿ ಸಮನು, ಮಿತ್ರಪಕ್ಷ, ಶತ್ರುಪಕ್ಷಗಳಲ್ಲಿ ಸಮನಾಗಿ ಇರುವವನು, ಮತ್ತು ಸಾಂಸಾರಿಕ ಸರ್ವ ಕರ್ಮಗಳ ಆರಂಭವನ್ನೂ ಬಿಟ್ಟವನು ಯಾವನೋ ಅವನು ಗುಣಗಳನ್ನು ದಾಟಿದವನು ಎಂದೆನಿಸುವನು.

(ಸಂಗತಿ : ಅನಂತರ, ಈ ವಿಧವಾದ ಗುಣಗಳನ್ನು ದಾಟುವುದಕ್ಕೆ ಮುಖ್ಯವಾದ ಕಾರಣವನ್ನು ಹೇಳುತ್ತಾನೆ.)

**ಮಾಂ ಚ ಯೋಽವ್ಯಭಿಚಾರೇಣ ಭಕ್ತಿಯೋಗೇನ ಸೇವತೇ ।**
**ಸ ಗುಣಾನ್ ಸಮತೀತ್ಯೈತಾನ್ ಬ್ರಹ್ಮಭೂಯಾಯ ಕಲ್ಪತೇ॥೨೬॥**

(" ನಾನ್ಯಂ ಗುಣೇಭ್ಯಃ ಕರ್ತಾರಂ " ಇತ್ಯಾದಿಯಿಂದ ಹೇಳಿದ ಪ್ರಕೃತಿ ಜೀವಾತ್ಮರ ವ್ಯತ್ಯಾಸವನ್ನು ಅನುಸಂಧಾನ ಮಾಡುವುದರಿಂದ ಮಾತ್ರವೇ ಗುಣಗಳನ್ನು ದಾಟುವುದು ಸಿದ್ಧಿಸದು—ಏಕೆಂದರೆ, ಅದು ಅನಾದಿಕಾಲದಿಂದ ಉಂಟಾದ ಅದಕ್ಕೆ ವಿರೋಧವಾದ ವಾಸನೆಯಿಂದ ತಡೆಯಲ್ಪಡಬಹುದು ; ಆದುದರಿಂದ, ಸತ್ಯಸಂಕಲ್ಪನೂ, ಪರಮ ಕಾರುಣಿಕನೂ, ಆ ಶ್ರಿತವಾತ್ಸಲ್ಯಜಲಧಿಯೂ ಆದ) ನನ್ನನ್ನು ಒಂದೇ ನಿಶ್ಚಯದಿಂದ ಕೂಡಿದ ಭಕ್ತಿಯೋಗದಿಂದಲೂ ಯಾವನು ಆಶ್ರಯಿಸುತ್ತಾನೆಯೋ ಅವನು (ಒಬ್ಬನಿಂದಲೂ ದಾಟಲಾಗದ) ಈ ಸತ್ತ್ವಾದಿ ಗುಣಗಳನ್ನು ದಾಟಿ ಬ್ರಹ್ಮಕ್ಕೆ ಸಮನಾದ ಸ್ವಭಾವವನ್ನು ಹೊಂದಲು ತಕ್ಕವನಾಗುತ್ತಾನೆ

**ಬ್ರಹ್ಮಣೋ ಹಿ ಪ್ರತಿಷ್ಠಾಽಹಮಮೃತಸ್ಯಾವ್ಯಯಸ್ಯ ಚ ।**
**ಶಾಶ್ವತಸ್ಯ ಚ ಧರ್ಮಸ್ಯ ಸುಖಸ್ಯೈಕಾಂತಿಕಸ್ಯ ಚ ॥ ೨೭ ॥**

ಏಕೆಂದರೆ, ನಾನು ಮರಣವಿಲ್ಲದವನೂ ನಿರ್ವಿಕಾರನೂ, ಆದ ಬ್ರಹ್ಮ (ಜೀವಾತ್ಮ)ನಿಗೂ, ನಾಶವಿಲ್ಲದ ಧರ್ಮಕ್ಕೂ (ಧರ್ಮಾದಿಗಳಿಂದಉಂಟಾಗುವ ಐಶ್ವರ್ಯಕ್ಕೂ) ಏಕಾಂತಿಗಳಿಂದ ಹೊಂದಲ್ಪಡುವ ಮೋಕ್ಷಸುಖಕ್ಕೂ ಆಶ್ರಯವು.

(ಟಿಪ್ಪಣಿ: ಹಿಂದೆ " ದೈವೀ ಹ್ಯೇಷಾ ಗುಣಮಯೀ ಮಮ ಮಾಯಾ ದುರತ್ಯಯಾ । ಮಾಮೇವ ಯೇ ಪ್ರಪದ್ಯನ್ತೇ ಮಾಯಾ ಮೇತಾಂ

ತರತ್ತಿ ತೇ ||" ಇತ್ಯಾದಿಯಾಗಿ ಗುಣಾತ್ಯಯಕ್ಕೂ ಮತ್ತು ಆ ಗುಣಾತ್ಯಯ ಪೂರ್ವಕವಾದ ಅಕ್ಷರ–ಐಶ್ವರ್ಯ, ಭಗವತ್ಪ್ರಾಪ್ತಿಗಳಿಗೂ ಭಗವತ್ಪ್ರಪತ್ತಿಯೊಂದೇ ಉಪಾಯವೆಂದು ಪ್ರತಿಪಾದಿಸಲ್ಪಟ್ಟಿರುವುದರಿಂದ, ಗುಣಗಳನ್ನು ದಾಟುವುದಕ್ಕೂ, ಅದರಿಂದ ಹೊಂದಬಹುದಾದ ಬ್ರಹ್ಮಭಾವಕ್ಕೂ ಒಂದೇ ನಿಶ್ಚಯದಿಂದ ಕೂಡಿದ (ಏಕಾನ್ತವಾದ) ಭಗವಚ್ಛರಣಾರವಿಂದ ಶರಣಾಗತಿಯೊಂದೇ ಉಪಾಯವೆಂದು ಭಾವ.)

ಗುಣತ್ರಯ ವಿಭಾಗಯೋಗವೆಂಬ ಹದಿನಾಲ್ಕನೆಯ
ಅಧ್ಯಾಯವು ಸಮಾಪ್ತವು.

---

# ಅಧ್ಯಾಯ ೧೫

# ಪುರುಷೋತ್ತಮನ ವೈಲಕ್ಷಣ್ಯ

ಸಂಗತಿ : ಕ್ಷೇತ್ರಾಧ್ಯಾಯವೆಂಬ ಹದಿಮೂರನೆಯ ಅಧ್ಯಾಯದಲ್ಲಿ ಕ್ಷೇತ್ರರೂಪವಾದ ಪ್ರಕೃತಿ ಮತ್ತು ಕ್ಷೇತ್ರಜ್ಞರೂಪವಾದ ಜೀವಾತ್ಮರ ಸ್ವರೂಪಗಳನ್ನು ನಿರೂಪಿಸಿ, ಪರಿಶುದ್ಧನೂ ಅಳತೆಯಿಲ್ಲದ ಜ್ಞಾನವೊಂದನ್ನೇ ಆಕಾರವಾಗಿ ಉಳ್ಳವನೂ ಆದ ಜೀವಾತ್ಮನಿಗೆ ಪ್ರಕೃತಿಯ ಗುಣಗಳಲ್ಲಿ ಪರಂಪರೆಯಾದ ಸಂಗದಿಂದ ಉಂಟಾಗುವ, ದೇವಾದ್ಯಾಕಾರದಿಂದ ಮಾರ್ಪಟ್ಟಿರುವ ಪ್ರಕೃತಿ ಸಂಬಂಧವು ಅನಾದಿಯೆಂದು ಹೇಳಲ್ಪಟ್ಟಿತು. ಅನಂತರ ಹದಿನಾಲ್ಕನೆಯ ಅಧ್ಯಾಯದಲ್ಲಿ, ಜೀವಾತ್ಮನಿಗೆ ಕಾರ್ಯದಶೆ ಮತ್ತು ಕಾರಣದಶೆಗಳೆಂಬ ಎರಡು ಅವಸ್ಥೆಗಳುಳ್ಳ ಪ್ರಕೃತಿಯೊಡನೆಯೂ ಸಂಬಂಧಕ್ಕೆ ಗುಣಸಂಗವೇ ಮೂಲವೆಂದೂ, ಆ ಸಂಬಂಧವು ಭಗವಂತ ನಿಂದಲೇ ಮಾಡಲ್ಪಟ್ಟಿದೆಂದೂಹೇಳಿ, ಗುಣಗಳಲ್ಲಿ ಸಂಗವುಂಟಾಗುವ ವಿಧವನ್ನೂ ವಿಸ್ತಾರವಾಗಿ ಪ್ರತಿಪಾದಿಸಿ, ಗುಣಸಂಗ ನಿವೃತ್ತಿಪೂರ್ವಕವಾಗಿ ಆತ್ಮಯಾಥಾತ್ಮ್ಯವನ್ನು ಪಡೆಯುವುದಕ್ಕೂ ಭಗವದ್ಭಕ್ತಿಯೇ ಮೂಲ ವೆಂದೂ ಹೇಳಲಾಯಿತು.

ಈಗ, ಭಜನೀಯನಾದ ಭಗವಂತನು ಕ್ಷರ-ಅಕ್ಷರರೆಂಬ ಬದ್ಧಮುಕ್ತ ಜೀವರನ್ನು ವಿಭೂತಿಯಾಗಿ ಉಳ್ಳವನೆಂದೂ, ವಿಭೂತಿ ಭೂತರಾದ ಈ ಉಭಯವಿಧ ಜೀವಾತ್ಮರಿಗಿಂತ, ಎಲ್ಲ ಕೆಟ್ಟಗುಣಗಳಿಗೂ ವಿರೋಧಿಯೂ ಎಲ್ಲ ಕಲ್ಯಾಣ ಗುಣಗಳಿಗೂ ಮುಖ್ಯ ಆಶ್ರಯನೂ ಆದುದರಿಂದ ಅತ್ಯಂತ ಉತ್ಕೃಷ್ಟನೂ ವಿಲಕ್ಷಣನೂ ಆದ ಭಗವಂತನು ಪುರುಷೋತ್ತಮನೆಂಬು ದನ್ನು ಹೇಳಲು ಆರಂಭಿಸುತ್ತಾನೆ.

ಅದರಲ್ಲಿ ಮೊದಲು, ಅಸಂಗವೆಂಬ ಕತ್ತಿಯಿಂದ ಕತ್ತರಿಸಲ್ಪಟ್ಟ ಸಂಸಾರಬಂದವುಳ್ಳ ಅಕ್ಷರವೆಂಬ ವಿಭೂತಿಯನ್ನು ಹೇಳುವುದಕ್ಕಾಗಿ, ಕತ್ತರಿಸಲು ಯೋಗ್ಯವಾದ ಸಂಸಾರ ಬಂಧದ ರೂಪವಾಗಿ ಹರಡಿರುವ

ಅಚೇತನದ ಪರಿಣಾಮ ವಿಶೇಷವನ್ನು ಅಶ್ವತ್ಥವೃಕ್ಷವಾಗಿ ಕಲ್ಪಿಸಿ ಶ್ರೀ ಭಗವಂತನು ಹೇಳುತ್ತಾನೆ ;)

**ಶ್ರೀ ಭಗವಾನುವಾಚ—**

**ಊರ್ಧ್ವಮೂಲಮಧಶ್ಶಾಖಮಶ್ವತ್ಥಂ ಪ್ರಾಹುರವ್ಯಯಂ ।**
**ಛಂದಾಂಸಿ ಯಸ್ಯ ಪರ್ಣಾನಿ ಯಸ್ತಂ ವೇದ ಸ ವೇದವಿತ್ ॥ ೧ ॥**

(ಯಾವ ಸಂಸಾರವೆಂಬ) ಅಶ್ವತ್ಥವೃಕ್ಷವನ್ನು ಮೇಲೆ ಬೇರುಳ್ಳದನ್ನಾಗಿಯೂ, ಕೆಳಭಾಗದಲ್ಲಿ ಕೊಂಬೆಗಳುಳ್ಳದನ್ನಾಗಿಯೂ ನಾಶವಿಲ್ಲದನ್ನಾಗಿಯೂ ವೇದಗಳು ಹೇಳುತ್ತಿವೆಯೋ ಯಾವ ಅಶ್ವತ್ಥಮರಕ್ಕೆ ವೇದಗಳು ಎಲೆಗಳೋ ಅಂಥ ಅಶ್ವತ್ಥವೃಕ್ಷವನ್ನು ಬಲ್ಲವನು ವೇದವನ್ನು ಬಲ್ಲವನು.

(ಟಿಪ್ಪಣಿ : ಏಳು ಲೋಕಗಳಿಗೂ ಮೇಲೆ ಇರುವ ಬ್ರಹ್ಮನನ್ನು ಕಾರಣವಾಗಿ ಉಳ್ಳುದುದರಿಂದ ಈ ಅಶ್ವತ್ಥವೃಕ್ಷವು "ಊರ್ಧ್ವಮೂಲಂ"— ಎನಿಸಿದೆ. ಭೂಮಿಯಲ್ಲಿ ಇರುವ ಎಲ್ಲಾ ಮನುಷ್ಯ, ಪಶು, ಮೃಗ, ಕ್ರಿಮಿ, ಕೀಟ, ಪಕ್ಷಿ, ಸ್ಥಾವರಾದಿಗಳನ್ನು ಅಂತವಾಗಿ ಉಳ್ಳುದುದರಿಂದ "ಅಧಶ್ಶಾಖಂ"—ಎನಿಸಿದೆ. ಅಸಂಗ ಹೇತುವಾದ ಒಳ್ಳೆಯ ಜ್ಞಾನೋದಯವಾಗುವವರಿಗೂ ಪ್ರವಾಹರೂಪದಿಂದ ಅಚ್ಛೇದ್ಯವಾದುದರಿಂದ "ಅವ್ಯಯಂ"—ಎನಿಸಿದೆ. ವೇದಗಳಿಂದ ಪ್ರತಿಪಾದಿತವಾದ ಕಾಮ್ಯ ಕರ್ಮಗಳಿಂದ ವೃದ್ಧಿಹೊಂದುವುದರಿಂದ ಈ ಸಂಸಾರವೃಕ್ಷಕ್ಕೆ ವೇದಗಳೇ ಎಲೆಗಳೆನಿಸಿವೆ. ಎಲೆಗಳಿಂದ ವೃಕ್ಷವು ವೃದ್ಧಿಹೊಂದುತ್ತದೆಯಷ್ಟೆ! ವೇದವು ಸಂಸಾರವೃಕ್ಷದ ಛೇದೋಪಾಯವನ್ನು ಹೇಳುತ್ತದೆ. ಛೇದ್ಯವಾದ ವೃಕ್ಷದ ಸ್ವರೂಪವನ್ನು ತಿಳಿಯುವುದು ಛೇದನೋಪಾಯವನ್ನು ತಿಳಿಯಲು ಉಪಯುಕ್ತವಾದುದರಿಂದ ಈ ವಿಧವಾದ ಅಶ್ವತ್ಥವನ್ನು ಬಲ್ಲವನೇ ವೇದವನ್ನು ಬಲ್ಲವನೆಂದು ಹೇಳಿದೆ.)

**ಅಧಶ್ಚೋರ್ಧ್ವಂ ಚ ಪ್ರಸೃತಾಸ್ತಸ್ಯ ಶಾಖಾ**
**ಗುಣಪ್ರವೃದ್ಧಾ ವಿಷಯ ಪ್ರವಾಲಾಃ ।**
**ಅಧಶ್ಚ ಮೂಲಾನ್ಯನುಸಂತತಾನಿ**
**ಕರ್ಮಾನುಬಂಧೀನಿ ಮನುಷ್ಯಲೋಕೇ ॥ ೨ ॥**

(ಸತ್ತ್ವಾದಿ) ಗುಣಗಳಿಂದ ವೃದ್ಧಿಯನ್ನು ಪಡೆದ, (ಶಬ್ದಾದಿ) ವಿಷಯಗಳು ಚಿಗುರೆಲೆಗಳಾಗಿರುವ ಆ ಅಶ್ವತ್ಥ ವೃಕ್ಷದ ಶಾಖೆಗಳು ಕೆಳಗೂ ಮೇಲೆಯೂ ಪ್ರಸರಿಸಿರುತ್ತದೆ. ಕೆಳಗೂ ಮನುಷ್ಯಲೋಕದಲ್ಲಿ, ಪುಣ್ಯ ಪಾಪಕರ್ಮಗಳೆಂಬ, ಜೀವಾತ್ಮರನ್ನು ಕಟ್ಟಿಹಾಕುವ ಬೇರುಗಳು ಹಬ್ಬಿರುತ್ತವೆ. (ಮನುಷ್ಯದಶೆಯಲ್ಲಿ ಮಾಡಿದ ಕರ್ಮಗಳಿಂದ ಕೆಳಗೆ ಮನುಷ್ಯ ಪಶುಮೊದಲಾದುವೂ, ಮೇಲೆಯೂ ದೇವಾದಿಗಳೂ ಆಗಿರುತ್ತವೆಯೆಂದು ಭಾವ.)

**ನ ರೂಪಮಸ್ಯೇಹ ತಥೋಪಲಭ್ಯತೇ**
**ನಾಂತೋ ನ ಚಾದಿರ್ನ ಚ ಸಂಪ್ರತಿಷ್ಠಾ ।**

ಈ ವೃಕ್ಷದ ರೂಪವೂ ಹಾಗೆಯೇ ನಾಶವೂ ಕಾರಣವೂ ಮತ್ತು ಆಧಾರವೂ ಈ ಮನುಷ್ಯಲೋಕದಲ್ಲಿ ಅರಿಯಲ್ಪಡುವುದಿಲ್ಲ.

**ಅಶ್ವತ್ಥಮೇನಂ ಸುವಿರೂಢಮೂಲಂ**
**ಅಸಂಗಶಸ್ತ್ರೇಣ ದೃಢೇನ ಛಿತ್ತ್ವಾ ॥ ೩ ॥**
**ತತಃ ಪದಂ ತತ್ಪರಿಮಾರ್ಗಿತವ್ಯಂ**
**ಯಸ್ಮಿನ್ ಗತಾ ನ ನಿವರ್ತಂತಿ ಭೂಯಃ ।**

ಚೆನ್ನಾಗಿಯೂ ವಿವಿಧವಾಗಿಯೂ ಬೇರು ಬಿಟ್ಟುಕೊಂಡಿರುವ, ಈ ಅಶ್ವತ್ಥವೃಕ್ಷವನ್ನು ಒಳ್ಳೆಯ ಜ್ಞಾನದಿಂದ ದೃಢವಾದ, (ಗುಣಮಯ ಭೋಗಗಳಲ್ಲಿ) ಆಸೆಯಿಲ್ಲದಿರುವಿಕೆಯೆಂಬ ಕತ್ತಿಯಿಂದ ಕಡಿದು, ಅದರಿಂದಲೇ, ಎಲ್ಲಿಗೆ ಹೋದವರು ಮತ್ತೆ ಹಿಂತಿರುಗುವುದಿಲ್ಲವೋ ಅಂಥ ಸ್ಥಾನವನ್ನು ಹುಡುಕತಕ್ಕದ್ದು.

(ಸಂಗತಿ : ಅನಾದಿಕಾಲದಿಂದ ಬಂದ ಸತ್ತ್ವಾದಿಗುಣಗಳಿಂದ ಉಂಟಾದ ಭೋಗಗಳಲ್ಲಿ ಆಸೆಯೂ, ಅದರಿಂದ ಉಂಟಾಗುವ ವಿಪರೀತ ಜ್ಞಾನವೂ ಹೇಗೆ ಬಿಡುವುವು ?—ಎಂದರೆ, ಹೇಳುತ್ತಾನೆ.)

**ತಮೇವ ಚಾದ್ಯಂ ಪುರುಷಂ ಪ್ರಪದ್ಯೇ-**
**ದ್ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ॥ ೪ ॥**

ಯಾವನಿಂದ (ಈ ಗುಣಮಯ ಭೋಗಗಳಲ್ಲಿ ಆಸೆಯೆಂಬ) ಪ್ರವೃತ್ತಿಯು ಅನಾದಿಯಾಗಿ ಉಂಟಾಗಿರುವುದೋ ಆ, ಎಲ್ಲಕ್ಕೂ ಮೂಲ ಕಾರಣನಾದ ಪುರುಷನನ್ನೇ (ಅಜ್ಞಾನಾದಿ ನಿವೃತ್ತಿಗಾಗಿ) ಶರಣ ಹೊಂದಬೇಕು.

**ನಿರ್ಮಾನಮೋಹಾ ಜಿತಸಂಗದೋಷಾ**
**ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।**
**ದ್ವನ್ದ್ವೈರ್ವಿಮುಕ್ತಾಸ್ಸುಖದುಃಖಸಂಜ್ಞೈಃ**
**ಗಚ್ಛನ್ತ್ಯಮೂಢಾಃ ಪದಮವ್ಯಯಂ ತತ್ ॥ ೫ ॥**

(ಹೀಗೆ ನನ್ನನ್ನು ಶರಣುಹೊಂದಿ) ದೇಹವೇ ಆತ್ಮವೆಂಬ ಅಜ್ಞಾನವಿಲ್ಲದವರೂ ಸುಖದುಃಖಗಳಲ್ಲಿ ಆಸೆಯೆಂಬ ದೋಷವನ್ನು ಗೆದ್ದವರೂ ಆತ್ಮಜ್ಞಾನದಲ್ಲಿಯೇ ನಿರತರೂ (ಅದನ್ನು ಉಳಿದು) ಬೇರೆ ವಸ್ತುಗಳಲ್ಲಿ ಆಸೆಬಿಟ್ಟವರೂ ಸುಖ ದುಃಖಗಳೆಂಬ ದ್ವಂದ್ವಗಳಿಂದ ಬಿಡಲ್ಪಟ್ಟವರೂ (ಆತ್ಮದ ಮತ್ತು ಅನಾತ್ಮದ ಸ್ವಭಾವವನ್ನು) ಅರಿತವರೂ ಆಗಿರುವವರು ಚ್ಯುತಿಯಿಲ್ಲದ ಆ ಸ್ಥಾನವನ್ನು ಹೊಂದುವರು.

(ಟಿಪ್ಪಣಿ: ಅಂದರೆ, ಅಂತವಿಲ್ಲದ ಜ್ಞಾನವನ್ನೇ ಸ್ವಭಾವವಾಗಿ ಉಳ್ಳ ಜೀವಾತ್ಮನನ್ನು ಹೊಂದುವರು. ನನ್ನನ್ನು ಶರಣ ಹೊಂದಿದವರಿಗೆ ನನ್ನ ಅನುಗ್ರಹದಿಂದಲೇ ಈ ಎಲ್ಲಾ ವ್ಯಾಪಾರಗಳೂ ಸುಲಭವಾಗಿ ಅನುಷ್ಠಿಸಲ್ಪಡತಕ್ಕವೂ ಸಿದ್ಧಿ ಪರ್ಯನ್ತವೂ ಆಗುವುವೆಂದು ಭಾವ.)

**ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।**
**ಯದ್ಗತ್ವಾ ನ ನಿವರ್ತನ್ತೇ ತದ್ಧಾಮ ಪರಮಂ ಮಮ ॥ ೬ ॥**

ಅದನ್ನು (ಆಜೀವರೂಪವಾದ ಜ್ಯೋತಿಸ್ಸನ್ನು) ಸೂರ್ಯನಾಗಲಿ, ಚಂದ್ರನಾಗಲಿ, ಅಗ್ನಿಯಾಗಲಿ ಬೆಳಗುವುದಿಲ್ಲ. (ಎಲ್ಲವನ್ನೂ ಜ್ಞಾನವೊಂದೇ ಬೆಳಗತಕ್ಕುದು. ಸೂರ್ಯಾದಿ ಬಾಹ್ಯ ಜ್ಯೋತಿಸ್ಸುಗಳಾದರೋ ವಿಷಯಗಳಿಗೆ ಇಂದ್ರಿಯಗಳೊಡನೆ ಸಂಬಂಧಿಸಲು ಅಡ್ಡಿಯಾಗಿರುವ ಕತ್ತಲನ್ನು ಹೋಗಲಾಡಿಸುವುದರ ಮೂಲಕ ಉಪಕರಿಸುವುದರಿಂದ ಅವಕ್ಕೂ ಪ್ರಕಾಶವೆಂಬ ವ್ಯವಹಾರವಿದೆಯೇ ಹೊರತು ಜ್ಞಾನವೆಂಬ ಜ್ಯೋತಿಸ್ಸನ್ನು

ಅವು ಬೆಳಗಲಾರವು. ಆದುದರಿಂದ ಜ್ಞಾನವೊಂದೇ ಎಲ್ಲವನ್ನೂ ಬೆಳಗುವುದೆಂದು ಭಾವ.) ಯಾವುದನ್ನು ಸೇರಿ (ಮನುಷ್ಯನು) ಹಿಂದಕ್ಕೆ ಬರುವುದಿಲ್ಲವೋ (ಮತ್ತೆ ಜನ್ಮ ಪಡೆಯುವುದಿಲ್ಲವೋ) ಅಂಥ ಶ್ರೇಷ್ಠ ಜ್ಯೋತಿಸ್ಸೆಂಬುದು ನನ್ನದು. (ನನಗೆ ವಿಭೂತಿಯಾದುದರಿಂದ ನನ್ನ ಅಂಶವೆಂದು ಅರ್ಥ.)

(ಸಂಗತಿ : ಹೀಗೆ ಜೀವಾತ್ಮನು ನಿನ್ನ ಅಂಶವಾಗಿರುವುದಾದರೆ, ನಿತ್ಯಸೂರಿಗಳಂತೆ ಎಲ್ಲ ಜೀವಾತ್ಮರೂ ಪರಿಶುದ್ಧಾಕಾರರೇ ಏಕೆ ಆಗಿರಕೂಡದು?— ಎಂದರೆ, ಬದ್ಧರೂ ತನ್ನ ವಿಭೂತಿಭೂತರೇ ಎಂದು ಹೇಳಿ ಬದ್ಧಮುಕ್ತಾದಿ ವ್ಯವಸ್ಥಾಪನೆಯನ್ನೂ ಹೇಳುತ್ತಾನೆ.)

**ಮಮೈವಾಂಶೋ ಜೀವಲೋಕೇ ಜೀವಭೂತಸ್ಸನಾತನಃ ।**
**ಮನಃಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ॥ ೭ ॥**

ಅನಾದಿಯಾಗಿ ನನ್ನ ಅಂಶವಾಗಿಯೇ ಇದ್ದುಕೊಂಡಿರುವ ಜೀವಾತ್ಮರ ಗುಂಪಿನಲ್ಲಿ ಒಂದು ಅಂಶ (ಭಾಗ) ವು (ಅನಾದಿ ಕರ್ಮರೂಪವಾದ ಅವಿದ್ಯೆಯಿಂದ ಸುತ್ತಲ್ಪಟ್ಟು ಬದ್ಧಜೀವನಾಗಿ, (ದೇವ ಮನುಷ್ಯಾದಿ) ಶರೀರದಲ್ಲಿರುವ ಮನಸ್ಸಮೇತವಾದ ಆರು ಇಂದ್ರಿಯಗಳನ್ನು (ಕರ್ಮಾನುಗುಣವಾಗಿ ಇತ್ತ ಅತ್ತ) ಸೆಳೆಯುವುದು.

**ಶರೀರಂ ಯದವಾಪ್ನೋತಿ ಯಚ್ಚಾಪ್ಯುತ್ಕ್ರಾಮತೀಶ್ವರಃ ।**
**ಗೃಹೀತ್ವೈತಾನಿ ಸಂಯಾತಿ ವಾಯುರ್ಗಂಧಾನಿವಾಶಯಾತ್ ॥೮॥**

ಯಾವ ಶರೀರವನ್ನು ಪಡೆಯುವನೋ ಮತ್ತು ಯಾವ ಶರೀರದಿಂದ ಹೊರಕ್ಕೆ ಹೊರಡುವನೋ ಅವುಗಳಲ್ಲಿಯ ಇಂದ್ರಿಯಗಳಿಗೆ ಯಜಮಾನನಾದ ಜೀವಾತ್ಮನು, ವಾಯುವು ಪುಷ್ಪಾದಿವಾಸನೆಗಳ ಎಡೆಯಿಂದ ಆಯಾ ಸೂಕ್ಷ್ಮವಾಗ ಭಾಗಗಳೊಂದಿಗೆ ವಾಸನೆಗಳನ್ನು ಒಯ್ಯುವಂತೆ, ಪಂಚಭೂತಗಳ ಸೂಕ್ಷ್ಮವಾದ ಭಾಗಗಳೊಂದಿಗೆ ಇಂದ್ರಿಯಗಳನ್ನೂ ಒಯ್ಯುವನು.

(ಸಂಗತಿ : ಆ ಇಂದ್ರಿಯಗಳು ಯಾವುವು ? ಎಂದರೆ ಹೇಳುತ್ತಾನೆ.)

**ಶ್ರೋತ್ರಂ ಚಕ್ಷುಸ್ಸ್ಪರ್ಶನಂ ಚ ರಸನಂ ಘ್ರಾಣಮೇವ ಚ ।**
**ಅಧಿಷ್ಠಾಯ ಮನಶ್ಚಾಯಂ ವಿಷಯಾನುಪಸೇವತೇ ॥ ೯ ॥**

ಈ ಜೀವಾತ್ಮನು ಕಿವಿ, ಕಣ್ಣು, ಚರ್ಮ, ನಾಲಿಗೆ, ಮೂಗು ಮತ್ತು ಮನಸ್ಸುಗಳನ್ನು ಆಶ್ರಯಿಸಿ (ಅವುಗಳ) ವಿಷಯ (ಶಬ್ದಾದಿ) ಗಳನ್ನು ಅನುಭವಿಸುತ್ತಾನೆ.

**ಉತ್ಕ್ರಾಮನ್ತಂ ಸ್ಥಿತಂ ವಾಽಪಿ ಭುಂಜಾನಂ ವಾ ಗುಣಾನ್ವಿತಂ ।**
**ವಿಮೂಢಾ ನಾನುಪಶ್ಯನ್ತಿ ಪಶ್ಯನ್ತಿ ಜ್ಞಾನಚಕ್ಷುಷಃ ॥ ೧೦ ॥**

ಸತ್ತ್ವಾದಿಗುಣಮಯವಾದ ಶರೀರದೊಡನೆ ಸೇರಿರುವ, ಶರೀರದಿಂದ ಹೊರಹೊರಡುವ, (ಅಥವಾ)ಆ ಶರೀರನೊಳಗಿರುವ, (ಅಥವಾ) (ಶಬ್ದಾದಿ ವಿಷಯಗಳನ್ನು) ಅನುಭವಿಸುತ್ತಿರುವ (ಈ ಜೀವಾತ್ಮನನ್ನು) (ಮನುಷ್ಯತ್ವಾದಿ ದೇಹಗಳಲ್ಲಿ ಆತ್ಮಾಭಿಮಾನವುಳ್ಳ) ಅಜ್ಞರು ಅರಿಯುವುದಿಲ್ಲ. ದೇಹಾತ್ಮವಿವೇಕವಿಷಯವಾದ ಜ್ಞಾನವುಳ್ಳವರು ಕಾಣುವರು.

(ಸಂಗತಿ: ಮೇಲೆ ಹೇಳಿದುದನ್ನೇ ಸಕಾರಣವಾಗಿ ನಿರೂಪಿಸುತ್ತಾನೆ.)

**ಯತನ್ತೋ ಯೋಗಿನಶ್ಚೈನಂ ಪಶ್ಯನ್ತ್ಯಾತ್ಮನ್ಯವಸ್ಥಿತಂ ।**
**ಯತನ್ತೋಽಪ್ಯಕೃತಾತ್ಮಾನೋ ನೈನಂ ಪಶ್ಯನ್ತ್ಯಚೇತಸಃ ॥ ೧೧ ॥**

(ನನ್ನಲ್ಲಿ ಪ್ರಪತ್ತಿಮಾಡಿ ಕರ್ಮಯೋಗಾದಿಗಳಲ್ಲಿ) ಪ್ರಯತ್ನಿಸುವ (ಆದರಿಂದ ನಿರ್ಮಲವಾದ ಅಂತಃಕರಣವುಳ್ಳ) ಯೋಗಿಗಳು (ಯೋಗದೃಷ್ಟಿಯಿಂದ) ಶರೀರದಲ್ಲಿದ್ದಾಗ್ಗೂ ಶರೀರಕ್ಕಿಂತ ಭಿನ್ನನಾಗಿ ಸ್ವಸ್ವರೂಪದಿಂದಿರುವ ಈ ಜೀವಾತ್ಮನನ್ನು ಕಾಣುವರು. (ಹೀಗೆ ನನ್ನನ್ನು ಶರಣುಹೊಂದದೆ, ಆದುದರಿಂದಲೇ) ಪರಿಶುದ್ಧಿಹೊಂದದ ಮನಸ್ಸುಳ್ಳವರೂ (ಆದುದರಿಂದಲೇ) ಆತ್ಮಾವಲೋಕನಕ್ಕೆ ಸಮರ್ಥವಾದ ಮನಸ್ಸಿಲ್ಲದವರೂ ಆದವರು ಯತ್ನಿಸುವವರಾದರೂ ಈ ಆತ್ಮವನ್ನು ಕಾಣರು.

(ಸಂಗತಿ: ಹೀಗೆ ವಿಷಯೇಂದ್ರಿಯ ಸಂಬಂಧಕ್ಕೆ ತಡೆಯಾದ ಕತ್ತಲನ್ನು ಹೋಗಲಾಡಿಸಿ ಒತ್ತಾಸೆ ಮಾಡುವುದರ ಮೂಲಕ ಪ್ರಕಾಶಗಳೆನಿಸಿರುವ ಸೂರ್ಯ, ಚಂದ್ರ, ಅಗ್ನಿಗಳೆಂಬ ಜ್ಯೋತಿಸ್ಸುಗಳನ್ನೂ ಬೆಳಗಿಸುವ ಜ್ಞಾನ ಜ್ಯೋತಿಸ್ಸಾದ ಮುಕ್ತಾವಸ್ಥೆಯವನೂ, ಬದ್ಧಾವಸ್ಥೆಯವನೂ ಆದ ಆತ್ಮನು ಭಗವಂತನಿಗೆ (ವಿಭೂತಿ) ನಿಯಾಮ್ಯನೆನ್ನಲಾಯಿತು. ಈಗ,

ಅಚೇತನದ ಪರಿಣಾಮವಿಶೇಷವಾದ ಆದಿತ್ಯಾದಿ ಜ್ಯೋತಿಸ್ಸುಗಳ ಜ್ಯೋತಿಸ್ಸೂ ಭಗವಂತನ ವಿಭೂತಿಯೆಂದು ಹೇಳುತ್ತಾನೆ.)

**ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಂ ।**
**ಯಚ್ಚಂದ್ರಮಸಿ ಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಂ॥೧೨॥**

ಅಖಿಲ ಜಗತ್ತನ್ನೂ ಬೆಳಗುವ ಸೂರ್ಯ, ಚಂದ್ರ, ಅಗ್ನಿ–ಇವರುಗಳ ಪ್ರಕಾಶವು ನನ್ನದು. (ಅವರು ನನ್ನನ್ನು ಆರಾಧಿಸಿದುದಕ್ಕಾಗಿ ನಾನು ಅವರಿಗೆ ಕೊಟ್ಟದ್ದು) ಎಂದು ತಿಳಿ.

(ಸಂಗತಿ: ಎಲ್ಲ ಪ್ರಾಣಿಗಳನ್ನೂ ಹೊತ್ತಿರುವ ಭೂಮಿಯಲ್ಲಿಯ ಆ ಹೊರುವ ಶಕ್ತಿಯೂ ನನ್ನದು—ಎಂದು ಹೇಳುತ್ತಾನೆ.)

**ಗಾಮಾವಿಶ್ಯ ಚ ಭೂತಾನಿ ಧಾರಯಾಮ್ಯಹಮೋಜಸಾ ।**
**ಪುಷ್ಣಾಮಿ ಚೌಷಧೀಸ್ಸರ್ವಾಸ್ಸೋಮೋ ಭೂತ್ವಾ ರಸಾತ್ಮಕಃ ॥**

ನಾನು ಭೂಮಿಯ ಒಳಹೊಕ್ಕು (ಒಬ್ಬರಿಂದಲೂ ತಡೆಯಿಲ್ಲದಂತಹ) ಸಾಮರ್ಥ್ಯದಿಂದ ಪ್ರಾಣಿಗಳನ್ನು ಧರಿಸುತ್ತೇನೆ. (ಅಮೃತಮಯ) ರಸದಿಂದ ತುಂಬಿದ ಚಂದ್ರನಾಗಿ ಎಲ್ಲ ವನಸ್ಪತಿಗಳನ್ನೂ ಪೋಷಿಸುತ್ತೇನೆ.

**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।**
**ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಂ ॥೧೪॥**

ನಾನು ಜಾಠರಾಗ್ನಿಯಾಗಿ ಪ್ರಾಣಿಗಳ ದೇಹವನ್ನು ಆಶ್ರಯಿಸಿ ಪ್ರಾಣವಾಯು ಮತ್ತು ಅಪಾನವಾಯುಗಳೊಡನೆ ಕೂಡಿದವನಾಗಿ (ಅವರು ತಿಂದ ಖಾದ್ಯ, ಚೋಷ್ಯ, ಲೇಹ್ಯ, ಪೇಯಗಳೆಂಬ) ನಾಲ್ಕುಬಗೆಯ ಅನ್ನವನ್ನೂ ಪಕ್ವಮಾಡುತ್ತೇನೆ.

(ಸಂಗತಿ: ಇಲ್ಲಿ ಪರಮಾತ್ಮನ ವಿಭೂತಿಗಳಾದುದರಿಂದ, "ಅಹಂ ಸೋಮೋ ಭೂತ್ವಾ" – "ಅಹಂ ವೈಶ್ವಾನರೋ ಭೂತ್ವಾ" – ಎಂದು ಚಂದ್ರ ಜಾಠರಾಗ್ನಿಗಳನ್ನು ಪರಮಾತ್ಮನೊಡನೆ ಒಂದಾಗಿ ಸೇರಿಸಿ (ಸಾಮಾನಾಧಿಕರಣ್ಯದಿಂದ) ಹೇಳಲಾಯಿತು. ಈಗ, ಅವನ್ನೂ ಮತ್ತು ಇತರ ಎಲ್ಲ ಪ್ರಾಣಿಗಳನ್ನೂ ಪರಮಾತ್ಮನೊಡನೆ ಒಂದಾಗಿ ಸೇರಿಸಿ (ಸಾಮಾನಾಧಿಕರಣ್ಯದಿಂದ) ನಿರ್ದೇಶಿಸಲು ಕಾರಣವನ್ನು ಹೇಳುತ್ತಾನೆ.)

**ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟಃ**
**ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।**
**ವೇದೈಶ್ಚ ಸರ್ವೈರಹಮೇವ ವೇದ್ಯಃ**
**ವೇದಾನ್ತಕೃದ್ವೇದವಿದೇವ ಚಾಹಂ ॥ ೧೫ ॥**

ನಾನು ಎಲ್ಲಪ್ರಾಣಿಗಳ ಹೃದಯ (ಎಲ್ಲ ವ್ಯಾಪಾರಗಳನ್ನೂ ಮಾಡುವುದು ಅಥವಾ ಬಿಡುವುದು–ಇದಕ್ಕೆ ಮೂಲವಾದ ಜ್ಞಾನವು ಉದಯಿಸುವ ಸ್ಥಳ) ದಲ್ಲಿಯೂ ಇರುತ್ತೇನೆ. (ಆದುದರಿಂದ) ನನ್ನಿಂದಲೇ (ಎಲ್ಲರಿಗೂ) ನೆನಪು, ಅರಿವು, ಮರೆವು ಅಥವಾ ಊಹಿಸುವುದು (ಸಂಭವಿಸುವುವು.) (ಆದುದರಿಂದ) ಎಲ್ಲ ವೇದಗಳಿಂದ ತಿಳಿಯಲು ಯೋಗ್ಯನಾದವನು ನಾನೇ (ದೇವಮನುಷ್ಯಾದಿ ಶಬ್ದಗಳಿಂದ ಜೀವಾತ್ಮನು ಹೇಗೆ ವೇದ್ಯನೋ ಹಾಗೆ.) (ವೇದಗಳಲ್ಲಿ ಹೇಳಿರುವ ಇಂದ್ರಾದಿಗಳನ್ನು ಕುರಿತು ಮಾಡುವ ಕರ್ಮಗಳಿಗೆ ಆಯಾ) ವೇದೋದಿತ ಫಲವನ್ನು ಕೊಡುವವನೂ, (ಹೀಗೆ ನನ್ನನ್ನು ಪ್ರತಿಪಾದಿಸುವ) ವೇದವನ್ನು ತಿಳಿದವನೂ ನಾನೇ. (ಹೀಗಲ್ಲದೆ ಬೇರೆ ವಿಧವಾಗಿ ವೇದಗಳಿಗೆ ಅರ್ಥ ಹೇಳುವವನು ವೇದಗಳನ್ನು ತಿಳಿದವನಲ್ಲವೆಂದು ಭಾವ.)

(ಸಂಗತಿ : ಆದುದರಿಂದ, ಸರ್ವವೇದಗಳಿಗೂ ಸಾರಭೂತವಾದ ಅರ್ಥವನ್ನು ನನ್ನಿಂದಲೇ ಕೇಳು.)

**ದ್ವಾವಿಮೌ ಪುರುಷೌ ಲೋಕೇ ಕ್ಷರಶ್ಚಾಕ್ಷರ ಏವ ಚ ।**
**ಕ್ಷರಸ್ಸರ್ವಾಣಿ ಭೂತಾನಿ ಕೂಟಸ್ಥೋಽಕ್ಷರ ಉಚ್ಯತೇ ॥ ೧೬ ॥**

ಲೋಕದಲ್ಲಿ ಕ್ಷರ ಮತ್ತು ಅಕ್ಷರ ಎಂಬ ಈ ಎರಡು ವಿಧವಾದ ಪುರುಷರು ಇರುವರು. ಎಲ್ಲ ಪ್ರಾಣಿಗಳೂ ಕ್ಷರವೆನಿಸುವುವು. ಪರಿಶುದ್ಧ ಜೀವಾತ್ಮನಾದವನು ಅಕ್ಷರನೆನಿಸುವನು.

**ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ ।**
**ಯೋ ಲೋಕತ್ರಯಮಾವಿಶ್ಯ ಬಿಭರ್ತ್ಯವ್ಯಯ ಈಶ್ವರಃ ॥ ೧೭ ॥**

ಪರಮಾತ್ಮನೆನಿಸುವ ಉತ್ತಮನಾದ ಪುರುಷನಾದರೋ ಇವರಿಬ್ಬರಿಗಿಂತ ಬೇರೆಯಾದವನು. (ಏಕೆಂದರೆ) ಅವನು ವಿಕಾರ ಹೊಂದದವನು,

ಎಲ್ಲಕ್ಕೂ ನಿಯಾಮಕನು, ಲೋಕತ್ರಯ (ಅಚೇತನ, ಬದ್ಧಾತ್ಮ-ಮುಕ್ತಾತ್ಮರು)ಗಳೊಳಗೂ ಪ್ರವೇಶಿಸಿ (ಆತ್ಮನಾಗಿದ್ದುಕೊಂಡು) ಅವನ್ನು ಧರಿಸಿರುವನು.

**ಯಸ್ಮಾತ್ ಕ್ಷರಮತೀತೋಽಹಮಕ್ಷರಾದಪಿ ಚೋತ್ತಮಃ ।**
**ಅತೋಽಸ್ಮಿ ಲೋಕೇ ವೇದೇ ಚ ಪ್ರಥಿತಃ ಪುರುಷೋತ್ತಮಃ ॥**

ನಾನು ಬದ್ಧಜೀವರಿಗಿಂತ ಮೇಲಾದವನು, ಮುಕ್ತ ಜೀವರಿಗಿಂತಲೂ ಉತ್ತಮನು. ಆದುದರಿಂದ ಲೋಕ (ಸ್ಮೃತಿಗಳು) ದಲ್ಲಿಯೂ ವೇದದಲ್ಲಿಯೂ ಪುರುಷೋತ್ತಮನೆಂದು ಪ್ರಖ್ಯಾತನಾಗಿರುವೆನು.

(ಸಂಗತಿ: ಹೀಗೆ ಪುರುಷೋತ್ತಮ ಶಬ್ದದ ಅರ್ಥವನ್ನು ಹೇಳಿದುದು ಹಾಗೆ ಧ್ಯಾನಿಸುವುದಕ್ಕಾಗಿ ಎಂದು ತಿಳಿಸುವವನಾಗಿ ಹೀಗೆ ಪುರುಷೋತ್ತಮನೆಂದು ತಿಳಿದುಕೊಳ್ಳುವುದನ್ನು ಸ್ತುತಿಸುತ್ತಾನೆ.)

**ಯೋ ಮಾಮೇವಮಸಂಮೂಢೋ ಜಾನಾತಿ ಪುರುಷೋತ್ತಮಂ।**
**ಸ ಸರ್ವವಿದ್ಭಜತಿ ಮಾಂ ಸರ್ವಭಾವೇನ ಭಾರತ ॥ ೧೯ ॥**

ಯಾವನು ಮೇಲೆ ಹೇಳಿದ ರೀತಿಯಾಗಿ ಪುರುಷೋತ್ತಮನಾದ ನನ್ನನ್ನು ಅಜ್ಞಾನವಿಲ್ಲದವನಾಗಿ ಅರಿಯುತ್ತಾನೆಯೋ ಅವನು ಎಲ್ಲವನ್ನೂ ತಿಳಿದವನು; ಎಲ್ಲಾ ಭಜನಪ್ರಕಾರಗಳಿಂದಲೂ ನನ್ನನ್ನು ಭಜಿಸುವನು. (ನನ್ನ ವಿಷಯವಾದ ಎಲ್ಲ ಜ್ಞಾನಗಳಿಂದಲೂ ನನಗೆ ಎಂತಹ ಪ್ರೀತಿಯುಂಟಾಗುವುದೋ, ಎಲ್ಲ ವಿಧಗಳಿಂದಲೂ ನನ್ನನ್ನು ಆಶ್ರಯಿಸುವುದರಿಂದ ಯಾವ ಪ್ರೀತಿಯುಂಟಾಗುವುದೋ ಈ ಎರಡು ಬಗೆಯಾದ ಪ್ರೀತಿಯೂ ಈ ಪುರುಷೋತ್ತಮತ್ವ ಜ್ಞಾನದಿಂದ ನನಗೆ ಉಂಟಾಗುವುದು—ಎಂದು ಭಾವ.)

(ಸಂಗತಿ: ಪುರುಷೋತ್ತಮನೆಂಬ ಜ್ಞಾನಮಾತ್ರದಿಂದಲೇ ಭಗವಂತನಿಗೆ ಸರ್ವವಿಧ ಪ್ರೀತಿಯುಂಟಾಗುವುದಾದರೆ, ಭಜನಾದ್ಯನುಷ್ಠಾನ ವಿಧಿಗಳು ವ್ಯರ್ಥವಲ್ಲವೇ?—ಎಂದರೆ ಹೇಳುತ್ತಾನೆ.

**ಇತಿ ಗುಹ್ಯತಮಂ ಶಾಸ್ತ್ರಮಿದಮುಕ್ತಂ ಮಯಾಽನಘ ।**

ಎಲೈ ದೋಷವಿಲ್ಲದವನಾದ ಅರ್ಜುನನೆ! ಹೀಗೆ (ನಾನು ಪುರುಷೋತ್ತಮನೆಂದು ನಿರೂಪಿಸುವ,) ಅತ್ಯಂತ ರಹಸ್ಯವಾದ ಈ ಶಾಸ್ತ್ರವು (ನೀನು ನಿರ್ದೋಷಿಯೂ ಯೋಗ್ಯತಮನೂ ಆದುದರಿಂದ) (ನಿನಗೆ) ನನ್ನಿಂದ ಹೇಳಲ್ಪಟ್ಟಿತು. ಇದನ್ನು ತಿಳಿದವನು ನನ್ನನ್ನು ಹೊಂದಲು ಆಸೆಯುಳ್ಳವನು ಸಂಪಾದಿಸಬೇಕಾದ ಬುದ್ಧಿ ಯಾವುದೋ ಅದೆಲ್ಲವನ್ನೂ ಪಡೆದವನಾದಾನು. ಅವನು ಮಾಡಬೇಕಾದುದನ್ನೆಲ್ಲ ಮಾಡಿದವನಾದಾನು. (ಮೇಲೆಹೇಳಿದ ಶಾಸ್ತ್ರಜನ್ಯವಾದ ಪುರುಷೋತ್ತಮ ವಿಷಯಕ ಜ್ಞಾನವೇ ಇವೆಲ್ಲವನ್ನೂ ಮಾಡುವುದೆಂದು ಭಾವ.)

ಇಲ್ಲಿಗೆ ಪುರಾಣಪುರುಷೋತ್ತಮಯೋಗವೆಂಬ ಹದಿನೈದನೇ ಅಧ್ಯಾಯ ಮುಗಿಯಿತು.

---

## ಅಧ್ಯಾಯ ೧೬

# ಶಾಸ್ತ್ರವಶ್ಯತೆ

(ಸಂಗತಿ : ಹಿಂದಿನ ಮೂರು ಅಧ್ಯಾಯಗಳಿಂದ ಪರಸ್ಪರ ಕೂಡಿಯೂ ಮತ್ತು ಅಗಲಿಯೂ ಇರುವ ಪ್ರಕೃತಿ ಮತ್ತು ಜೀವರ ಯಾಥಾತ್ಮ್ಯವೂ, ಇವುಗಳ ಪರಸ್ಪರ ಸೇರುವಿಕೆ ಮತ್ತು ಅಗಲುವಿಕೆಗೆ ಸತ್ತ್ವಾದಿ ಗುಣಗಳಲ್ಲಿ ಆಸೆಯಿರುವುದು ಅಥವಾ ಇಲ್ಲದಿರುವುದೇ ಕಾರಣವೆಂಬುದೂ, ಹೀಗೆ ಸರ್ವ ಪ್ರಕಾರವಾಗಿರುವ ಪ್ರಕೃತಿ ಮತ್ತು ಪುರುಷರು ಭಗವಂತನ ವಿಭೂತಿಯೆಂಬುದೂ, ಇವನ್ನು ವಿಭೂತಿಗಳಾಗಿ ಹೊಂದಿರುವ ಭಗವಂತನು ವಿಭೂತಿಗಳಾದ ಅಚೇತನವಸ್ತುವಿಗಿಂತಲೂ ಮತ್ತು ಬದ್ಧ, ಮುಕ್ತರೆಂಬ ಎರಡು ಅವಸ್ಥೆಗಳುಳ್ಳ ಚೇತನ ವಸ್ತುವಿಗಿಂತಲೂ ವಿಕಾರವಿಲ್ಲದವನೂ, ಇವುಗಳಲ್ಲಿ ವ್ಯಾಪಿಸಿರುವನೂ, ಇವನ್ನು ಧರಿಸಿರುವವನೂ, ಇವುಗಳಿಗೆ ಯಜಮಾನನೂ ಆದಕಾರಣ ಬೇರೆ ವಸ್ತುವಾದುದರಿಂದ ಪುರುಷೋತ್ತಮನೆಂದು ಹೇಳಿ ಅವನ ಯಥಾರ್ಥಸ್ವರೂಪವೂ ಹೇಳಲ್ಪಟ್ಟವು. ಅನಂತರ, ಮೇಲೆ ಹೇಳಿದ ಎಲ್ಲ ಅರ್ಥಗಳೂ ದೃಢವಾಗಿ ನಿಲ್ಲುವುದಕ್ಕಾಗಿ ಶಾಸ್ತ್ರವಶ್ಯತೆಯನ್ನು ಹೇಳಲು ಶಾಸ್ತ್ರವಶ್ಯರೂ ಮತ್ತು ಶಾಸ್ತ್ರವಿರೋಧಿಗಳೂ ಎನಿಸಿದ ದೇವತೆಗಳ ಮತ್ತು ಅಸುರರ, ಸೃಷ್ಟಿವಿಭಾಗವನ್ನು ಭಗವಂತನು ಹೇಳುತ್ತಾನೆ.)

**ಶ್ರೀ ಭಗವಾನುವಾಚ—**

**ಅಭಯಂ ಸತ್ತ್ವಸಂಶುದ್ಧಿ ಜ್ಞಾನಯೋಗವ್ಯವಸ್ಥಿತಿಃ ।**
**ದಾನಂ ದಮಶ್ಚ ಯಜ್ಞಶ್ಚ ಸ್ವಾಧ್ಯಾಯಸ್ತಪ ಆರ್ಜವಂ ॥ ೧ ॥**

**ಅಹಿಂಸಾ ಸತ್ಯಮಕ್ರೋಧಸ್ತ್ಯಾಗಶ್ಶಾನ್ತಿರಪೈಶುನಂ ।**
**ದಯಾ ಭೂತೇಷ್ವಲೋಲುಪ್ತ್ವಂ ಮಾರ್ದವಂ ಹ್ರೀರಚಾಪಲಂ ॥**

**ತೇಜಃ ಕ್ಷಮಾ ಧೃತಿಶ್ಶೌಚಮದ್ರೋಹೋ ನಾತಿಮಾನಿತಾ ।**
**ಭವನ್ತಿ ಸಂಪದಂ ದೈವೀಮಭಿಜಾತಸ್ಯ ಭಾರತ ॥ ೩ ॥**

ಭಗವಂತನು ಹೇಳಿದನು—

ಎಲೈ ಅರ್ಜುನ! ಭಯವಿಲ್ಲದಿರುವುದು, ಮನಸ್ಸಿಗೆ ರಜಸ್ತಮೋ ಗುಣಗಳೊಡನೆ ಸಂಬಂಧವಿಲ್ಲದೆ (ಶುದ್ಧ ಸಾತ್ತ್ವಿಕವಾಗಿ) ಇರುವುದು. ಪ್ರಕೃತಿಯಿಂದ ಅಗಲಿದ ಜೀವಾತ್ಮಸ್ವರೂಪವಿವೇಕದಲ್ಲಿ ನಿಷ್ಠೆಯಿಂದಿರುವುದು ನ್ಯಾಯಾರ್ಜಿತ ಧನವನ್ನು ತಕ್ಕಪಾತ್ರದಲ್ಲಿ ಕೊಡುವುದು, ಮನಸ್ಸನ್ನು ಅಡಗಿಸುವುದು, ಫಲದಲ್ಲಿ ಆಸೆಯಿಡದೆ ಭಗವಂತನ ಆರಾಧನರೂಪವಾದ ಪಂಚಮಹಾಯಜ್ಞಗಳನ್ನು ಆಚರಿಸುವುದು, ವೇದವನ್ನು ಓದುವುದರಲ್ಲಿ ನಿಷ್ಠೆಯುಳ್ಳವನಾಗುವುದು, ಕೃಚ್ಛ್ರ-ಚಾಂದ್ರಾಯಣ-ದ್ವಾದಶ್ಯುಪವಾಸ ಮುಂತಾದ, ಭಗವತ್ಪ್ರೀತಿಕರವಾದ ಕರ್ಮಗಳಿಗೆ ಯೋಗ್ಯತೆಯನ್ನು ಉಂಟುಮಾಡುವ ಕಾರ್ಯಗಳನ್ನು ಮಾಡುವುದು, ಕಪಟವಿಲ್ಲದಿರುವುದು; ಪರರನ್ನು ಪೀಡಿಸದಿರುವುದು, ಕಂಡದ್ದನ್ನು ಕಂಡಹಾಗೆ ಹೇಳುವ ಹಿತನುಡಿ, ಪರಪೀಡೆಯುಂಟುಮಾಡುವಂತಹ ಚಿತ್ತವಿಕಾರವಿಲ್ಲದಿರುವುದು, ತನ್ನ ಹಿತಕ್ಕೆ ವಿರುದ್ಧವಾದ ವಸ್ತುಗಳನ್ನು ಬಿಟ್ಟುಬಿಡುವುದು, ಬಾಹ್ಯೇಂದ್ರಿಯಗಳನ್ನು ಅಡಗಿಸುವುದು, ಇತರರಿಗೆ ಅನರ್ಥಕರವಾದಂತಹ ಮಾತನ್ನು ಆಡದಿರುವುದು, ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ಅವು ಪಡುವ ದುಃಖವನ್ನು ಸಹಿಸದಿರುವುದು, ವಿಷಯಗಳಲ್ಲಿ ಆಸೆಯಿಲ್ಲದಿರುವುದು, ಮೃದು ಸ್ವಭಾವವು, ಕೆಟ್ಟಕೆಲಸವನ್ನು ಮಾಡುವುದಕ್ಕೆ ನಾಚುವುದು, ಆಸೆಪಡಲು ಯೋಗ್ಯವಾದ ವಸ್ತುಗಳು ಸಮೀಪದಲ್ಲಿದ್ದರೂ ಇಂದ್ರಿಯಗಳು ಚಲಿಸದಿರುವುದು, ದುರ್ಜನರಿಂದ ಅವಮಾನಗೊಳಿಸಲ್ಪಡಲು ಅಸಾಧ್ಯವಾಗಿರುವುದು, ಪರರಿಂದ ಪೀಡೆಯುಂಟಾದರೂ ಅವರ ವಿಷಯದಲ್ಲಿ ಚಿತ್ತವಿಕಾರವಿಲ್ಲದಿರುವುದು, ದೊಡ್ಡ ವಿಪತ್ತು ಬಂದಾಗಲು ಮಾಡಬೇಕಾದ ಕಾರ್ಯವನ್ನು ಮಾಡಬೇಕೆಂಬ ನಿಶ್ಚಯದಿಂದಿರುವುದು, ಬಾಹ್ಯೇಂದ್ರಿಯಗಳು ಮತ್ತು ಮನಸ್ಸು ಇವುಗಳಿಗೆ ಒಳ್ಳೆಯಕರ್ಮಗಳನ್ನು ಮಾಡಲು ಯೋಗ್ಯತೆಯುಂಟುಮಾಡುವ ಶಾಸ್ತ್ರೀಯವಾದ ಶುದ್ಧಿ, ಪರರಿಗೆ ದ್ರೋಹಮಾಡದಿರುವುದು, ಅಸ್ಥಾನದಲ್ಲಿ ಗರ್ವಪಡದಿರುವುದು, (ಈ ಗುಣಗಳು) ದೇವತೆಗಳ ಸಂಪತ್ತನ್ನು (ಭಗವದಾಜ್ಞಾನುವೃತ್ತಿಯನ್ನು) ಉದ್ದೇಶಿಸಿ ಹುಟ್ಟಿರುವವನಿಗೆ ಉಂಟಾಗುತ್ತವೆ.

**ದಂಭೋ ದರ್ಪೋಽತಿಮಾನಶ್ಚ ಕ್ರೋಧಃ ಪಾರುಷ್ಯಮೇವ ಚ ।**
**ಅಜ್ಞಾನಂ ಚಾಭಿಜಾತಸ್ಯ ಪಾರ್ಥ ಸಂಪದಮಾಸುರೀಂ ॥ ೪ ॥**

ಧಾರ್ಮಿಕನೆಂದು ಪ್ರಸಿದ್ಧಿಪಡೆಯುವುದಕ್ಕಾಗಿ ಧರ್ಮವನ್ನು ಆಚರಿಸುವುದು, ವಿಷಯಾನುಭವಹರ್ಷದಿಂದ ಕೃತ್ಯಾಕೃತ್ಯಗಳಲ್ಲಿ ವಿವೇಕವಿಲ್ಲದಂತೆ ಕೊಬ್ಬಿರುವುದು, ತನ್ನ ವಿದ್ಯೆ, ಕುಲ ಇವುಗಳಿಗೆ ತಕ್ಕುದಲ್ಲದ ಗರ್ವ, ಪರರಿಗೆ ಪೀಡೆಯುಂಟುಮಾಡುವ ಚಿತ್ತವಿಕಾರ, ಸಾಧುಗಳಿಗೆ ಭಯವನ್ನು ಕೊಡತಕ್ಕ ಸ್ವಭಾವ, ಪರಾಪರ ತತ್ತ್ವ ಮತ್ತು ಕೃತ್ಯಾಕೃತ್ಯಗಳಲ್ಲಿ ವಿವೇಕವಿಲ್ಲದಿರುವುದು,—ಈ ಸ್ವಭಾವಗಳು ಅಸುರರ (ಭಗವದಾಜ್ಞಾತಿವೃತ್ತಿಶೀಲರ) ಸಂಪತ್ತನ್ನು ಉದ್ದೇಶಿಸಿ ಹುಟ್ಟಿದವನಿಗೆ ಉಂಟಾಗುವುವು.

(ಸಂಗತಿ : ದೇವ ಸ್ವಭಾವದಲ್ಲಿ ಶ್ರದ್ಧೆಯನ್ನೂ ಅಸುರಸ್ವಭಾವದಲ್ಲಿ ಉದ್ವೇಗವನ್ನೂ ಉಂಟುಮಾಡುವುದಕ್ಕಾಗಿ, "ಊರ್ಧ್ವಂ ಗಚ್ಛಂತಿ ಸತ್ತ್ವಸ್ಥಾಃ" (14–18) ಮುಂತಾದುದರಿಂದ ಹೇಳಿದುದನ್ನು ಇಲ್ಲಿ ಸಂಕ್ಷೇಪವಾಗಿ ನೆನಪಿಗೆ ತರುತ್ತಾನೆ.)

**ದೈವೀ ಸಂಪದ್ವಿಮೋಕ್ಷಾಯ ನಿಬನ್ಧಾಯಾಸುರೀ ಮತಾ ।**
**ಮಾಶುಚಸ್ಸಂಪದಂ ದೈವೀಮಭಿಜಾತೋಽಸಿ ಪಾಂಡವ ॥ ೫ ॥**

ದೇವತೆಗಳಿಗೆ ಸಂಬಂಧವಾದ (ನನ್ನ ಆಜ್ಞಾನುವರ್ತನರೂಪವಾದ) ಸಂಪತ್ತು ಮೋಕ್ಷಕ್ಕೆ (ಕಾರಣವಾಗುವುದು.) ಅಸುರರ (ನನ್ನ ಆಜ್ಞಾತಿವೃತ್ತಿರೂಪವಾದ) ಸಂಪತ್ತು ಸಂಸಾರಕ್ಕೆ ಕಾರಣವೆನ್ನಲ್ಪಟ್ಟಿದೆ.

(ಇದನ್ನು ಕೇಳಿ, ತನ್ನ ಸ್ವಭಾವವು ಎಂತಹುದೆಂದು ನಿಶ್ಚಯವಾಗಿ ತಿಳಿಯದುದರಿಂದ ಬಹು ಹೆದರಿದ ಅರ್ಜುನನನ್ನು ಕುರಿತು ಹೇಳುತ್ತಾನೆ.)

ಎಲೈ ಅರ್ಜುನ! (ನೀನು ಧಾರ್ಮಿಕಾಗ್ರೇಸರನಾದ ಪಾಂಡುವಿನ ಮಗನಾದುದರಿಂದ) ದುಃಖಿಸಬೇಡ; ದೈವೀ ಸಂಪತ್ತನ್ನು ಉದ್ದೇಶಿಸಿ ಹುಟ್ಟಿರುವೆ.

**ದ್ವೌ ಭೂತಸರ್ಗೌ ಲೋಕೇಽಸ್ಮಿನ್ ದೈವ ಆಸುರ ಏವ ಚ ।**
**ದೈವೋ ವಿಸ್ತರಶಃ ಪ್ರೋಕ್ತ ಆಸುರಂ ಪಾರ್ಥ ಮೇ ಶೃಣು ॥ ೬ ॥**

ಈ (ಕರ್ಮ) ಲೋಕದಲ್ಲಿ ದೈವ ಮತ್ತು ಆಸುರಗಳೆಂದು, ಪ್ರಾಣಿಗಳ ಸೃಷ್ಟಿಯು ಎರಡು ಪ್ರಕಾರಗಳಾಗಿವೆ. ದೈವ ಸೃಷ್ಟಿಯು ವಿಸ್ತಾರವಾಗಿ ಹೇಳಲ್ಪಟ್ಟಿತು. ಆಸುರ ಸೃಷ್ಟಿಯನ್ನು ನನ್ನ ದೆಸೆಯಿಂದ ಕೇಳು.

**ಪ್ರವೃತ್ತಿಂ ಚ ನಿವೃತ್ತಿಂ ಚ ಜನಾ ನ ವಿದುರಾಸುರಾಃ ।**
**ನ ಶೌಚಂ ನಾಪಿ ಚಾಚಾರೋ ನ ಸತ್ಯಂ ತೇಷು ವಿದ್ಯತೇ ॥ ೭ ॥**

ಆಸುರ ಸ್ವಭಾವದ ಜನರು ಐಶ್ವರ್ಯಕ್ಕೆ ಸಾಧನವೂ, ಮೋಕ್ಷಕ್ಕೆ ಸಾಧನವೂ ಆದ ವೈದಿಕ ಧರ್ಮಗಳನ್ನು ಅರಿಯರು. ಅವರಲ್ಲಿ (ಶಾಸ್ತ್ರ ಸಿದ್ಧವಾದ) ಶುದ್ಧಿಯಿರುವುದಿಲ್ಲ. ಅನುಷ್ಠಾನ (ಸಂಧ್ಯಾವಂದನಾದಿ) ಇರುವುದಿಲ್ಲ. ಯಥಾರ್ಥವೂ, ಭೂತಹಿತರೂಪವೂ ಆದ ಭಾಷಣವೂ ಇರುವುದಿಲ್ಲ.

(ಸಂಗತಿ : ಮತ್ತೂ ಕೂಡ).

**ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಂ ।**
**ಅಪರಸ್ಪರಸಂಭೂತಂ ಕಿಮನ್ಯತ್ಕಾಮಹೇತುಕಂ ॥ ೮ ॥**

ಅವರು ಈ ಲೋಕವನ್ನು ಪರಮಾತ್ಮಾತ್ಮಕವಲ್ಲವೆಂದೂ, ಇದಕ್ಕೆ ಪರಮಾತ್ಮನು ಆಧಾರವಲ್ಲವೆಂದೂ, ಪರಮಾತ್ಮನು ಇದಕ್ಕೆ ನಿಯಾಮಕನಲ್ಲವೆಂದೂ ಹೇಳುವರು. ಸ್ತ್ರೀ ಪುರುಷರು ಪರಸ್ಪರ ಸೇರದೆ ಉಂಟಾಗುವ ಬೇರೆ ವಿಧವಾದ ವಸ್ತುವು ಯಾವುದು? (ಆದುದರಿಂದ) (ಈ ಜಗತ್ತೆಲ್ಲವೂ) ಕಾಮವನ್ನೇ ಕಾರಣವಾಗಿ ಹೊಂದಿರುವುದು (ಎನ್ನುವರು.)

**ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪಬುದ್ಧಯಃ ।**
**ಪ್ರಭವನ್ತ್ಯುಗ್ರಕರ್ಮಾಣಃ ಕ್ಷಯಾಯ ಜಗತೋಽಶುಭಾಃ ॥ ೯ ॥**

ಈ ಜ್ಞಾನವನ್ನು ಹೊಂದಿ, ಆತ್ಮದರ್ಶನವಿಲ್ಲದವರೂ ದೇಹಾತ್ಮ ವಿವೇಕವಿಲ್ಲದವರೂ ಕ್ರೂರ ಕಾರ್ಯಗಳನ್ನು ಮಾಡತಕ್ಕವರೂ ಪಾಪಿಗಳೂ ಆಗಿ ಲೋಕದ ನಾಶಕ್ಕೆ ಕಾರಣರಾಗುವರು.

**ಕಾಮಮಾಶ್ರಿತ್ಯ ದುಷ್ಪೂರಂ ದಂಭಮಾನ ಮದಾನ್ವಿತಾಃ ।**
**ಮೋಹಾದ್ಗೃಹೀತ್ವಾಽಸದ್ಗ್ರಾಹಾನ್ ಪ್ರವರ್ತನ್ತೇಽಶುಚಿವ್ರತಾಃ ॥**

ಪೂರ್ತಿ ಮಾಡಲಾಗದ ಕಾಮವನ್ನು ಹೊಂದಿ (ಅದನ್ನು ಸಾಧಿಸುವುದಕ್ಕಾಗಿ) ಅಜ್ಞಾನದಿಂದ, ಕೆಟ್ಟರೀತಿಯಲ್ಲಿ ಸಂಪಾದಿಸಿದ ದ್ರವ್ಯಗಳನ್ನು ಸ್ವೀಕರಿಸಿ ಶಾಸ್ತ್ರವಿಹಿತವಲ್ಲದ ವ್ರತವುಳ್ಳವರಾಗಿಯೂ ದಂಭ, ಅಹಂಕಾರ, ಗರ್ವಗಳಿಂದ ಕೂಡಿದವರಾಗಿಯೂ, ಪ್ರವರ್ತಿಸುತ್ತಾರೆ.

(ಸಂಗತಿ : ಹೀಗೆ ಪ್ರವರ್ತಿಸುವವರಿಗೆ ಮೇಲೆ ಮೇಲೆ ಉಂಟಾಗುವ ಮನೋವಿಕಾರವೇ ಮುಂತಾದುವನ್ನು ಹೇಳುತ್ತಾನೆ.)

**ಚಿಂತಾಮಪರಿಮೇಯಾಂ ಚ ಪ್ರಲಯಾನ್ತಾಮುಪಾಶ್ರಿತಾಃ ।**
**ಕಾಮೋಪಭೋಗಪರಮಾ ಏತಾವದಿತಿ ನಿಶ್ಚಿತಾಃ ॥ ೧೧ ॥**

(ಇಂದೋ ನಾಳೆಯೋ ಮೃತಿಹೊಂದತಕ್ಕವರಾಗಿದ್ದರೂ) ಪ್ರಳಯಕಾಲ ಪರ್ಯಂತ ಸಾಧಿಸಬೇಕಾದ, ಅಳತೆಗೆಟ್ಟ, ಚಿಂತೆಯನ್ನು ಹೊಂದಿದವರಾಗಿ ಕಾಮವನ್ನು ಅನುಭವಿಸುವುದೇ ಪರಮಪುರುಷಾರ್ಥವೆಂದೂ ಇದಕ್ಕಿಂತ ಅಧಿಕವಾದುದು ಇಲ್ಲವೆಂದೂ ನಿಶ್ಚಯಿಸಿದವರಾಗಿ,

**ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧಪರಾಯಣಾಃ ।**
**ಈಹನ್ತೇ ಕಾಮಭೋಗಾರ್ಥಮನ್ಯಾಯೇನಾರ್ಥಸಂಚಯಾನ್ ॥**

ಆಸೆಯೆಂಬ ನೂರಾರು ಪಾಶಗಳಿಂದ ಬಿಗಿಯಲ್ಪಟ್ಟವರಾಗಿ, ಕಾಮಕ್ರೋಧಗಳನ್ನೇ ಮುಖ್ಯವಾಗಿ ಹೊಂದಿ ಕಾಮವನ್ನು ಅನುಭವಿಸುವುದಕ್ಕಾಗಿ ಅನ್ಯಾಯದಿಂದ ದ್ರವ್ಯಸಂಚಯದಲ್ಲಿ ಪ್ರವರ್ತಿಸುತ್ತಾರೆ.

**ಇದಮದ್ಯ ಮಯಾ ಲಬ್ಧಮಿಮಂ ಪ್ರಾಪ್ಸ್ಯೇ ಮನೋರಥಂ ।**
**ಇದಮಸ್ತೀದಮಪಿ ಮೇ ಭವಿಷ್ಯತಿ ಪುನರ್ಧನಂ ॥ ೧೩ ॥**

ಇದು (ಈ ಕ್ಷೇತ್ರಪುತ್ರಾದಿಯೆಲ್ಲವೂ) ನನ್ನ ಸಾಮರ್ಥ್ಯದಿಂದ ದೊರಕಿದೆ. (ಅದೃಷ್ಟಾದಿಯಿಂದಲ್ಲ) ಈ ಮನೋರಥವನ್ನೂ (ನಾನೇ) ಪಡೆವೆನು. (ನನ್ನ ಸಾಮರ್ಥ್ಯದಿಂದಲೇ ಪಡೆದ) ಈ ಹಣವು ನನಗಿದೆ; ಈ ಹಣವು ನನಗೆ ಮತ್ತೆ (ನನ್ನ ಸಾಮರ್ಥ್ಯದಿಂದಲೇ) ಉಂಟಾಗುವುದು.

(ಸಂಗತಿ : ಹೀಗೆ ಇಷ್ಟಪ್ರಾಪ್ತಿಯ ವಿಷಯದಲ್ಲಿ ತಮ್ಮ ಅಭಿಪ್ರಾಯವನ್ನು ಹೇಳಿ, ಈಗ ಅನಿಷ್ಟನಿವೃತ್ತಿಯಲ್ಲಿಯೂ ಹಾಗೆಯೇ ಹೇಳುವರು.)

**ಅಸೌ ಮಯಾ ಹತಶ್ಶತ್ರುಃ ಹನಿಷ್ಯೇ ಚಾಪರಾನಪಿ ।**
**ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ ಬಲವಾನ್ ಸುಖೀ ।**

ಈ ಶತ್ರುವು (ಬಲಶಾಲಿಯಾದ) ನನ್ನಿಂದ ಕೊಲ್ಲಲ್ಪಟ್ಟನು. (ಶೂರನೂ ವೀರನೂ ಆದ ನಾನು) ಇತರ ಶತ್ರುಗಳನ್ನೂ ಕೊಲ್ಲುವೆನು.

(ಹಾಗೆಯೇ) ನಾನು ಸ್ವತಂತ್ರನು ಮತ್ತು ಎಲ್ಲವನ್ನೂ ನಿಯಮಿಸುವವನು; ನಾನು (ಸ್ವತಃ) ಭೋಗಗಳನ್ನು ಅನುಭವಿಸುವವನು. (ಅದೃಷ್ಟಾದಿಗಳಿಂದಲ್ಲ.) (ಹಾಗೆಯೇ ಸ್ವತಃ) ನಾನು ಸಿದ್ಧಿಹೊಂದಿದವನು, ಬಲಶಾಲಿಯು ಮತ್ತು ಸುಖವುಳ್ಳವನು.

**ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ ಸದೃಶೋ ಮಯಾ ।**
**ಯಕ್ಷ್ಯೇ ದಾಸ್ಯಾಮಿ ಮೋದಿಷ್ಯೇ ಇತ್ಯಜ್ಞಾನವಿಮೋಹಿತಾಃ ॥**

ನಾನು (ಸ್ವಭಾವದಿಂದಲೇ) ಹಣಗಾರನೂ ಕುಲೀನನೂ ಆಗಿದ್ದೇನೆ. ನನಗೆ ಸಮನು ಯಾವನಿದ್ದಾನೆ? ನಾನಾಗಿಯೇ ಯಜ್ಞಮಾಡುವೆನು; ದಾನ ಮಾಡುವೆನು; ಆನಂದ ಪಡೆವೆನು-ಎಂದು ಅಜ್ಞಾನದಿಂದ ಮೋಹಿತರಾಗಿ,

(ಸಂಗತಿ : ದೇವರಲ್ಲಿ ಭಾರವನ್ನು ಸಮರ್ಪಿಸಿರುವವರಲ್ಲವೆ, ಬಹುಶಃ ನಿಶ್ಚಯವನ್ನು ಹೊಂದಿದ್ದಾರೆ! ಅವರಿಗಿಂತ ಇವರಿಗಿರುವ ವ್ಯತ್ಯಾಸವನ್ನು ಹೇಳುತ್ತಾನೆ )

**ಅನೇಕಚಿತ್ತವಿಭ್ರಾನ್ತಾ ಮೋಹಜಾಲಸಮಾವೃತಾಃ ।**
**ಪ್ರಸಕ್ತಾಃ ಕಾಮಭೋಗೇಷು ಪತನ್ತಿ ನರಕೇಽಶುಚೌ ॥ ೧೬ ॥**

(ಅದೃಷ್ಟ-ಈಶ್ವರ ಮುಂತಾದವರ ಸಹಕಾರಗಳಿಲ್ಲದೆ ತಮ್ಮಿಂದಲೇ ಎಲ್ಲವನ್ನೂ ಮಾಡಲು ಸಾಧ್ಯವೆಂದು ತಿಳಿದು) ವಿಧವಿಧದ ಚಿತ್ತಭ್ರಾಂತಿಯುಳ್ಳವರೂ, ಅಜ್ಞಾನದ ಜಾಲದಿಂದ ಮುಚ್ಚಲ್ಪಟ್ಟವರೂ, ಕಾಮಗಳನ್ನು ಅನುಭವಿಸುವುದರಲ್ಲಿ ಅಧಿಕ ಆಸೆಯುಳ್ಳವರೂ ಆಗಿ (ಮಧ್ಯೇ ಮೃತರಾಗಿ) ಅಶುದ್ಧವಾದ ನರಕದಲ್ಲಿ ಬೀಳುತ್ತಾರೆ.

**ಆತ್ಮಸಂಭಾವಿತಾಃ ಸ್ತಬ್ಧಾಃ ಧನಮಾನಮದಾನ್ವಿತಾಃ ।**
**ಯಜನ್ತೇ ನಾಮಯಜ್ಞೈಸ್ತೇ ದಂಭೇನಾವಿಧಿಪೂರ್ವಕಂ ॥೧೭॥**

ಆತ್ಮಪ್ರಶಂಸೆ ಮಾಡಿಕೊಳ್ಳುವವರೂ (ತಮ್ಮನ್ನು) ಪರಿಪೂರ್ಣರೆಂದು ಭಾವಿಸಿ ಏನನ್ನೂ ಮಾಡದವರೂ, ಧನ, ಅಭಿಮಾನಗಳಿಂದ ಉಂಟಾದ ಮದದಿಂದ ಕೂಡಿದವರೂ ಆದ ಅವರು ದಂಭದಿಂದ (ಕೇವಲ ಖ್ಯಾಪನಕ್ಕಾಗಿ) ಶಾಸ್ತ್ರ ವಿಧಿಯನ್ನು ಬಿಟ್ಟು ನಾಮಮಾತ್ರ ಪ್ರಯೋಜನವಾದ ಯಾಗಗಳನ್ನು ಮಾಡುತ್ತಾರೆ.

(ಸಂಗತಿ : ಅವರು ಇಂಥವರಾಗಿ ಯಾಗಮಾಡುವರೆಂದು ಹೇಳುತ್ತಾನೆ.)

**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಚ ಸಂಶ್ರಿತಾಃ ।**
**ಮಾಮಾತ್ಮಪರದೇಹೇಷು ಪ್ರದ್ವಿಷನ್ತೋಽಭ್ಯಸೂಯಕಾಃ ॥ ೧೮ ॥**

(ಬೇರೊಂದನ್ನೂ ಎದಿರು ನೋಡದೆ ನಾನೇ ಎಲ್ಲವನ್ನು ಮಾಡುತ್ತೇನೆ ಎಂಬ) ಅಹಂಕಾರವನ್ನೂ, (ಹಾಗೆಯೇ ಎಲ್ಲಕ್ಕೂ ನನ್ನ ಬಲವೇ ಸಾಕೆಂಬ) ಬಲವನ್ನೂ,

(ಆದುದರಿಂದ ನನಗೆ ಸಮನು ಯಾವನೂ ಇಲ್ಲವೆಂಬ) ಗರ್ವವನ್ನೂ, (ಹಾಗೆಯೇ ನನ್ನ ಆಸೆಮಾತ್ರದಿಂದಲೇ ಎಲ್ಲವೂ ಉಂಟಾಗುವುದೆಂಬ) ಕಾಮವನ್ನೂ, (ನನ್ನ ಅನಿಷ್ಟಕಾರಿಗಳೆಲ್ಲರನ್ನೂ ಕೊಲ್ಲುವೆನು ಎಂಬ) ಕೋಪವನ್ನೂ ಹೊಂದಿದವರಾಗಿ, ಅವರ ಮತ್ತು ಇತರರ ದೇಹಗಳಲ್ಲಿ ಇದ್ದುಕೊಂಡು ಎಲ್ಲವನ್ನೂ ನಡೆಯಿಸುವವನಾದ) ನನ್ನನ್ನು ದ್ವೇಷಿಸುತ್ತ, ಸಹಿಸದವರಾಗಿ (ಕುಯುಕ್ತಿಗಳಿಂದ ನನ್ನಲ್ಲಿ ದೋಷಾವಿಷ್ಕರಣ ಮಾಡುವವರಾಗಿ) (ಯಾಗಾದಿ ಕಾರ್ಯಗಳನ್ನೆಲ್ಲ ಮಾಡುತ್ತಾರೆ.)

(ಸಂಗತಿ : ಈ ವಿಧವಾದ ಪ್ರದ್ವೇಷಾದಿಪೂರ್ವಕ ಯಾಗಾದಿಗಳಿಗೆ ಯಥೋಚಿತ ಫಲವನ್ನು ಕೊಡುವವನೂ ನಾನೇ ಎಂದು ಭಗವಂತನು ಹೇಳುತ್ತಾನೆ.)

**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।**
**ಕ್ಷಿಪಾಮ್ಯಜಸ್ರಮಶುಭಾನ್ ಆಸುರೀಷ್ವೇವ ಯೋನಿಷು ॥ ೧೯ ॥**

ನನ್ನನ್ನು ದ್ವೇಷಿಸುವ, ಕ್ರೂರಸ್ವಭಾವದ, ನರಾಧಮರೂ ಪಾಪಿಗಳೂ

ಆದ ಅವರನ್ನು ನಾನು ಅಸುರಸ್ವಭಾವವುಳ್ಳ ಜಾತಿಗಳಲ್ಲಿಯೇ ಯಾವಾಗಲೂ ತಳ್ಳುತ್ತೇನೆ.

(ಸಂಗತಿ : ಮೇಲೆ ಮೇಲೆ ಅವರಿಗಾಗುವ ಅಪಕರ್ಷ ಪರಂಪರೆಯನ್ನು ಹೇಳುತ್ತಾನೆ.)

**ಅಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।**
**ಮಾಮಪ್ರಾಪ್ಯೈವ ಕೌನ್ತೇಯ ತತೋ ಯಾನ್ತ್ಯಧಮಾಂ ಗತಿಂ ॥**

ಅಸುರರ ಯೋನಿಯಲ್ಲಿ ಹುಟ್ಟಿ (ಮುಕ್ತಿಯೂ) ಜನ್ಮ ಜನ್ಮದಲ್ಲಿಯೂ ಮೂಢ (ವಿಪರೀತಜ್ಞಾನವುಳ್ಳವರು) ರಾಗಿ, ನನ್ನನ್ನು ಪಡೆಯದೆಯೇ ಆ ಜನ್ಮಕ್ಕಿಂತ ಅಧಮವಾದ ಗತಿಯನ್ನೇ ಹೊಂದುವರು.

(ಸಂಗತಿ : ಆತ್ಮನಾಶಕರವಾದ ಈ ಆಸುರಸ್ವಭಾವಕ್ಕೆ ಮೂಲ ಕಾರಣವಾದುದನ್ನು ಹೇಳುತ್ತಾನೆ.)

**ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ ।**
**ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ತ್ರಯಂ ತ್ಯಜೇತ್ ॥**

ಈ ಕಾಮ ಕ್ರೋಧ, ಲೋಭ ಎಂಬವು ಆತ್ಮನನ್ನು ನಾಶಕ್ಕೆ ಗುರಿ ಮಾಡುವ ನರಕದ ಮೂರು ಬಗೆಯ ದ್ವಾರಗಳು. ಆದುದರಿಂದ, ಈ ಮೂರನ್ನೂ ಬಿಡಬೇಕು.

(ಸಂಗತಿ : ತ್ಯಾಜ್ಯವಾದ ವಸ್ತುವಿನ ದೋಷವನ್ನು ಹೇಳಿದುದರಿಂದಲೇ, ಅದನ್ನು ಬಿಡಬೇಕೆಂದು ವಿಧಿಸಿದ ಹಾಗಾಯಿತು. ಹಾಗೆ ಬಿಡುವುದರ ಫಲಪ್ರವಾಹವನ್ನು ಈಗ ಹೇಳುತ್ತಾನೆ )

**ಏತೈರ್ವಿಮುಕ್ತಃ ಕೌಂತೇಯ ತಮೋದ್ವಾರೈಸ್ತ್ರಿಭಿರ್ನರಃ ।**
**ಆಚರತ್ಯಾತ್ಮನಃ ಶ್ರೇಯಸ್ತತೋ ಯಾತಿ ಪರಾಂ ಗತಿಂ ॥ ೨೨ ॥**

ವಿಪರೀತ ಜ್ಞಾನಕ್ಕೆ ಕಾರಣಗಳಾದ ಈ ಮೂರರಿಂದ ಬಿಡಲ್ಪಟ್ಟ ಮನುಷ್ಯನು ತನಗೆ ಒಳ್ಳೆಯದನ್ನು ಆಚರಿಸುತ್ತಾನೆ. (ನನ್ನನ್ನು ಅರಿತು ನನಗೆ ಅನುಕೂಲನಾಗಿ ವರ್ತಿಸುತ್ತಾನೆ.) ಆದರಿಂದ ಪರಮಗತಿಯನ್ನು (ನನ್ನನ್ನು) ಪಡೆವನು.

(ಸಂಗತಿ : ಶಾಸ್ತ್ರವನ್ನು ಅನಾದರಿಸುವುದು ಇಂತಹ ನರಕಕ್ಕೆ ಮುಖ್ಯಕಾರಣವೆನ್ನುತ್ತಾರೆ.)

**ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ ।**
**ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಂ ॥ ೨೩ ॥**

ವೇದವೆಂಬ (ನನ್ನ) ಆಜ್ಞೆಯನ್ನು ಬಿಟ್ಟುಬಿಟ್ಟು ತನ್ನ ಇಷ್ಟದಂತೆ ಇರುವವನು (ಪಾರಲೌಕಿಕ) ಸಿದ್ಧಿಯನ್ನೂ ಪಡೆಯನು, ಸುಖವನ್ನೂ ಪಡೆಯನು, ಉತ್ತಮ ಗತಿಯನ್ನೂ ಪಡೆಯನು.

**ತಸ್ಮಾಚ್ಛಾಸ್ತ್ರಂ ಪ್ರಮಾಣಂ ತೇ ಕಾರ್ಯಾಕಾರ್ಯವ್ಯವಸ್ಥಿತೌ ।**
**ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ ಕರ್ತುಮಿಹಾರ್ಹಸಿ ॥**

ಆದುದರಿಂದ ಕರ್ತವ್ಯ ಮತ್ತು ಅಕರ್ತವ್ಯಗಳನ್ನು ವ್ಯವಸ್ಥೆ ಮಾಡುವುದರಲ್ಲಿ ನಿನಗೆ ಶಾಸ್ತ್ರವೇ ಪ್ರಮಾಣ. ಶಾಸ್ತ್ರವಿಧಿಗಳಲ್ಲಿ ಹೇಳಲ್ಪಟ್ಟ ಕರ್ಮಗಳನ್ನು ಅರಿತು ಈ ಲೋಕದಲ್ಲಿ (ಅದನ್ನು) ಆಚರಿಸಲು ಯೋಗ್ಯನಾಗಿದ್ದೀಯೆ.

ಇಲ್ಲಿಗೆ ದೈವಾಸುರಸಂಪದ್ವಿಭಾಗಯೋಗವೆಂಬ ಹದಿನಾರನೆಯ
ಅಧ್ಯಾಯ ಮುಗಿಯಿತು.

---

# ಅಧ್ಯಾಯ ೧೭
# (ಶಾಸ್ತ್ರೀಯ ವಿವೇಚನ)

(ಸಂಗತಿ : ದೇವತೆಗಳು ಮತ್ತು ಅಸುರರು ಇವರ ವಿಭಾಗವನ್ನು ಹೇಳುವುದರ ಮೂಲಕ ಪ್ರಾಪ್ಯವಾದ ತತ್ತ್ವದ ಜ್ಞಾನ ಮತ್ತು ಅದರ ಪ್ರಾಪ್ತಿಗೆ ಉಪಾಯವಾದ ಜ್ಞಾನ, ಇವೆರಡಕ್ಕೂ ವೇದವೊಂದೇ ಕಾರಣ ವೆಂದು ಹೇಳಲಾಯಿತು. ಈಗ, ಶಾಸ್ತ್ರವಿಹಿತವಲ್ಲದ ಕರ್ಮವು ಆಸುರ ವಾದುದರಿಂದ ನಿಷ್ಫಲವೆಂದೂ ಶಾಸ್ತ್ರವಿಹಿತವಾದುದೂ ಸಾತ್ತ್ವಿಕ-ರಾಜಸ-ತಾಮಸಗಳೆಂಬ ಮೂರು ವಿಧವಾದುವೆಂದೂ ಮತ್ತು ಶಾಸ್ತ್ರವಿಹಿತವಾದ ಕರ್ಮದ ಲಕ್ಷಣವೂ ಹೇಳಲ್ಪಡುತ್ತವೆ. ಅದರಲ್ಲಿ ಶಾಸ್ತ್ರವಿಹಿತವಲ್ಲದ ಕರ್ಮವು ನಿಷ್ಪ್ರಯೋಜನವೆಂದು ಅರಿಯದ ಅರ್ಜುನನು ಶಾಸ್ತ್ರದಲ್ಲಿ ವಿಧಿಸಲ್ಪಡದಿರುವುದೂ ಶ್ರದ್ಧೆಯಿಂದ ಆಚರಿಸಲ್ಪಡುವುದೂ ಆದ ಯಾಗಾದಿ ಗಳಲ್ಲಿ ಸತ್ತ್ವಾದಿಕಾರಣಗಳಿಂದಾಗುವ ಫಲಭೇದವನ್ನು ತಿಳಿಯಲಿಚ್ಛೆ ಯಿಂದ ಪ್ರಶ್ನೆ ಮಾಡುತ್ತಾನೆ ;)

**ಅರ್ಜುನ ಉವಾಚ—**

**ಯೇ ಶಾಸ್ತ್ರವಿಧಿಮುತ್ಸೃಜ್ಯ ಯಜನ್ತೇ ಶ್ರದ್ಧಯಾನ್ವಿತಾಃ ।**
**ತೇಷಾಂ ನಿಷ್ಠಾ ತು ಕಾ ಕೃಷ್ಣ ಸತ್ತ್ವಮಾಹೋ ರಜಸ್ತಮಃ ॥**

ಅರ್ಜುನನು ಹೇಳಿದನು—

ಶ್ರೀಕೃಷ್ಣನೇ! ಯಾರು ಶಾಸ್ತ್ರಗಳಲ್ಲಿ ಹೇಳಲ್ಪಟ್ಟ ವಿಧಿಯನ್ನು ಬಿಟ್ಟು, ಶ್ರದ್ಧೆಯಿಂದ ಕೂಡಿದವರಾಗಿ ಯಾಗ ಮಾಡುತ್ತಾರೆಯೋ ಅವರ ನಿಷ್ಠೆಯು ಯಾವುದು ? ಸಾತ್ತ್ವಿಕವೋ, ರಾಜಸವೋ, ತಾಮಸವೋ ?

(ಸಂಗತಿ : ಹೀಗೆ ಪ್ರಶ್ನಿಸಲಾಗಿ, ಭಗವಂತನು ಶಾಸ್ತ್ರವಿಹಿತವಲ್ಲದ ಶ್ರದ್ಧೆ ಮತ್ತು ಅಶ್ರದ್ಧೆಯೊಡನೆ ಮಾಡುವ ಯಾಗಾದಿಗಳು ನಿಷ್ಫಲವೆಂಬು ದನ್ನು ಮನಸ್ಸಿನಲ್ಲಿ ಇಟ್ಟುಕೊಂಡು, ಶಾಸ್ತ್ರೀಯವಾದ ಯಾಗಾದಿಗಳನ್ನು

ಸತ್ತ್ವಾದಿಗುಣಗಳ ಪ್ರಕಾರ ಮೂರು ವಿಧಗಳೆಂದು ನಿರೂಪಿಸುವುದಕ್ಕಾಗಿ, ಶಾಸ್ತ್ರವಿಹಿತವಾದ ಶ್ರದ್ಧೆಯು ಮೂರುವಿಧವೆಂದು ಮೊದಲು ಹೇಳುತ್ತಾನೆ.)

**ಶ್ರೀ ಭಗವಾನುವಾಚ—**

**ತ್ರಿವಿಧಾ ಭವತಿ ಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ ।**
**ಸಾತ್ತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ ಶೃಣು ॥ ೨ ॥**

ಭಗವಂತನು ಹೇಳಿದನು—

ಪ್ರಾಣಿಗಳ ಶ್ರದ್ಧೆಯು ಸಾತ್ತ್ವಿಕ, ರಾಜಸ, ತಾಮಸವೆಂದು ಮೂರು ವಿಧವಾಗಿ ಇರುವುದು. ಅದು ಸ್ವಭಾವದಲ್ಲಿ ಉಂಟಾದುದು. ಆ ಶ್ರದ್ಧೆಯ ಸ್ವಭಾವವನ್ನು ಕೇಳು.

(ಟಿಪ್ಪಣಿ : ಇಲ್ಲಿ ಸ್ವಭಾವವೆಂದರೆ—ತನಗೇ ಅಸಾಧಾರಣವಾದ ಭಾವ–ಅಂದರೆ, ಪ್ರಾಚೀನವಾಸನಾನಿಮಿತ್ತವಾದ ಆಯಾ ರುಚಿವಿಶೇಷವು. ಏತರಲ್ಲಿ ರುಚಿಯಿದೆಯೋ ಅದರಲ್ಲಿ ಶ್ರದ್ಧೆಯುಂಟಾಗುವುದು. ಶ್ರದ್ಧೆಯೆಂದರೆ, ತನ್ನ ಅಭಿಮತಕ್ಕೆ ಸಾಧನವಾದುದರಲ್ಲಿ ವಿಶ್ವಾಸಪೂರ್ವಕವಾದ ತ್ವರೆ.)

**ಸತ್ತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ ।**
**ಶ್ರದ್ಧಾಮಯೋಽಯಂ ಪುರುಷೋ ಯೋ ಯಚ್ಛ್ರದ್ಧಃ ಸ ಏವ ಸಃ**

ಎಲ್ಲ ಪ್ರಾಣಿಗಳಿಗೂ ಮನಸ್ಸಿಗೆ ತಕ್ಕಂತೆ ಶ್ರದ್ಧೆಯುಂಟಾಗುವುದು. ಈ ಪುರುಷನು (ಜೀವಾತ್ಮನು) ಶ್ರದ್ಧೆಯ ಪರಿಣಾಮರೂಪನಾಗಿರುವನು. ಯಾವನು ಯಾವ ವಿಧವಾದ ಶ್ರದ್ಧೆಯುಳ್ಳವನೋ ಅವನು ಅಂತಹ ಸ್ವಭಾವವುಳ್ಳವನೇ ಆಗುವನು. (ಪುಣ್ಯಕರ್ಮಗಳ ವಿಷಯದಲ್ಲಿ ಶ್ರದ್ಧೆಯುಂಟಾದಲ್ಲಿ ಅವನಿಗೆ ಪುಣ್ಯಕರ್ಮಗಳ ಫಲವುಂಟಾಗುವುದು. ಆದುದರಿಂದ ಫಲಸಂಯೋಗವು ಶ್ರದ್ಧೆಯನ್ನೇ ಪ್ರಧಾನವಾಗಿ ಹೊಂದಿರುವುದು.

(ಸಂಗತಿ : ಇದನ್ನೇ ವಿವರಿಸುತ್ತಾನೆ.

**ಯಜನ್ತೇ ಸಾತ್ತ್ವಿಕಾ ದೇವಾನ್ ಯಕ್ಷರಕ್ಷಾಂಸಿ ರಾಜಸಾಃ ।**
**ಪ್ರೇತಾನ್ ಭೂತಗಣಾಂಶ್ಚಾನ್ಯೇ ಯಜನ್ತೇ ತಾಮಸಾ ಜನಾಃ ॥**

ಸತ್ತ್ವಗುಣ ಪ್ರಚುರರಾದವರು (ಸಾತ್ತ್ವಿಕ ಶ್ರದ್ಧೆಯಿಂದ ಕೂಡಿದವರಾಗಿ) ದೇವತೆಗಳನ್ನು ಆರಾಧಿಸುತ್ತಾರೆ. ರಜೋಗುಣ ಪ್ರಚುರರಾದವರು ಯಕ್ಷರನ್ನೂ, ರಾಕ್ಷಸರನ್ನೂ ತಮೋಗುಣ ಪ್ರಚುರರಾದ ಇತರರು ಶವಗಳನ್ನೂ, ಭೂತಗಣಗಳನ್ನೂ ಆರಾಧಿಸುತ್ತಾರೆ.

(ಸಂಗತಿ: ಹೀಗೆ ಶಾಸ್ತ್ರೀಯಗಳೂ, ಶ್ರದ್ಧಾಯುಕ್ತಗಳೂ ಆದ ಯಾಗಾದಿಗಳಲ್ಲಿ ಸತ್ತ್ವಾದಿ ಗುಣಗಳಿಗೆ ತಕ್ಕ ಫಲವಿಶೇಷಗಳುಂಟು. ಅಶಾಸ್ತ್ರೀಯಗಳಾದ ತಪೋಯಾಗ ಪ್ರಭೃತಿಗಳು ನನ್ನ ಆಜ್ಞೆಗೆ ವಿರುದ್ಧವಾದುದರಿಂದ ಅವುಗಳಿಂದ ಸುಖಲೇಶವೂ ಇಲ್ಲ. ಅಷ್ಟೇ ಅಲ್ಲದೆ ಅನರ್ಥವೂ ಉಂಟೆಂದು ತನ್ನ ಹೃದಯದಲ್ಲಿರುವುದನ್ನು ಪ್ರಕಾಶಪಡಿಸುತ್ತಾನೆ.)

**ಅಶಾಸ್ತ್ರವಿಹಿತಂ ಘೋರಂ ತಪ್ಯನ್ತೇ ಯೇ ತಪೋ ಜನಾಃ ।**
**ದಂಭಾಹಂಕಾರಸಂಯುಕ್ತಾಃ ಕಾಮರಾಗಬಲಾನ್ವಿತಾಃ ॥ ೫ ॥**

**ಕರ್ಶಯನ್ತಶ್ಶರೀರಸ್ಥಂ ಭೂತಗ್ರಾಮಮಚೇತಸಃ ।**
**ಮಾಂ ಚೈವಾನ್ತಶ್ಶರೀರಸ್ಥಂ ತಾನ್ವಿದ್ಧ್ಯಾಸುರನಿಶ್ಚಯಾನ್ ॥ ೬ ॥**

ಯಾರು ಅಶಾಸ್ತ್ರೀಯವೂ, ಬಹು ಆಯಾಸಕರವೂ ಆದ ತಪಸ್ಸ (ಯಾಗಾದಿ) ನ್ನು ದಂಭ, ಅಹಂಕಾರಗಳಿಂದಲೂ, ಕಾಮ, ರಾಗಗಳ ವೇಗಗಳಿಂದಲೂ ಕೂಡಿ, ಬುದ್ಧಿಯಿಲ್ಲದವರಾಗಿಯೂ,

ದೇಹದಲ್ಲಿರುವ ಪಂಚಭೂತಗಳ ಸಮೂಹವನ್ನೂ ದೇಹದೊಳಗಿರುವ ನನ್ನ ಅಂಶವಾದ ಜೀವಾತ್ಮನನ್ನೂ ಕಷ್ಟಪಡಿಸಿಕೊಂಡೂ ಮಾಡುತ್ತಾರೆಯೋ ಅವರನ್ನು ಅಸುರರ (ನನ್ನ ಆಜ್ಞೆಗೆ ವಿಪರೀತವಾಗಿ ವರ್ತಿಸುವವರ) ನಿಶ್ಚಯವುಳ್ಳವರೆಂದು ತಿಳಿ.

(ಸಂಗತಿ: ಅನಂತರ, ಹಿಂದೆ ಪ್ರಸ್ತಾಪಿಸಿದ ಶಾಸ್ತ್ರವಿಹಿತವಾದ ಯಜ್ಞಾದಿಗಳಲ್ಲಿಯೇ ಸತ್ತ್ವಾದಿ ಗುಣಗಳಿಂದ ಆಗುವ ವ್ಯತ್ಯಾಸವನ್ನು ವಿಸ್ತಾರವಾಗಿ ನಿರೂಪಿಸುತ್ತಾನೆ. ಆದರೊಳಗೆ ಸತ್ತ್ವಾದಿ ವಿವೃದ್ಧಿಗೆ

ಆಹಾರವೇ ಮೂಲವಾದುದರಿಂದ, ಆಹಾರವು ಮೂರು ವಿಧವೆಂಬುದನ್ನು ಮೊದಲು ಹೇಳುತ್ತಾನೆ. " ಅನ್ನಮಯಂ ಹಿ ಸೋಮ್ಯಮನಃ "ಆಹಾರ ಶುದ್ಧೌ ಸತ್ತ್ವಶುದ್ಧಿಃ" ಎಂದಲ್ಲವೇ ಶ್ರುತಿಯಿರುವುದು !)

**ಆಹಾರಸ್ತ್ವಪಿ ಸರ್ವಸ್ಯ ತ್ರಿವಿಧೋ ಭವತಿ ಪ್ರಿಯಃ ।**
**ಯಜ್ಞಸ್ತಪಸ್ತಥಾ ದಾನಂ ತೇಷಾಂ ಭೇದಮಿಮಂ ಶೃಣು ॥ ೭ ॥**

ಎಲ್ಲ ಪ್ರಾಣಿಗಳಿಗೂ ಮೂರು ವಿಧವಾದ ಆಹಾರವು ಇಷ್ಟವಾಗುವುದು. ಹಾಗೆಯೇ ಯಜ್ಞವೂ, ತಪಸ್ಸೂ, ದಾನವೂ. ಅವುಗಳ ಈ ವ್ಯತ್ಯಾಸವನ್ನು ಕೇಳು.

**ಆಯುಸ್ಸತ್ತ್ವಬಲಾರೋಗ್ಯಸುಖಪ್ರೀತಿವಿವರ್ಧನಾಃ ।**
**ರಸ್ಯಾಃ ಸ್ನಿಗ್ಧಾಃ ಸ್ಥಿರಾ ಹೃದ್ಯಾ ಆಹಾರಾಸ್ಸಾತ್ತ್ವಿಕಪ್ರಿಯಾಃ ॥**

ಆಯುಸ್ಸು, ಜ್ಞಾನ, ಬಲ, ಆರೋಗ್ಯ, ಸುಖ, ಸಂತೋಷ— ಇವನ್ನು ಹೆಚ್ಚಿಸತಕ್ಕವೂ ರುಚಿಯುಳ್ಳವೂ ಸ್ನೇಹಯುಕ್ತವೂ ಸ್ಥಿರ ಪರಿಣಾಮವುಂಟುಮಾಡುವುವೂ ರಮಣೀಯವೇಷವುಳ್ಳವೂ ಆದ ಆಹಾರಗಳು ಸಾತ್ತ್ವಿಕರಿಗೆ ಇಷ್ಟವಾದುವು.

**ಕಟ್ವಮ್ಲ ಲವಣಾತ್ಯುಷ್ಣ ತೀಕ್ಷ್ಣ ರೂಕ್ಷವಿದಾಹಿನಃ ।**
**ಆಹಾರಾ ರಾಜಸಸ್ಯೇಷ್ಟಾ ದುಃಖಶೋಕಾಮಯಪ್ರದಾಃ ॥ ೯ ॥**

ಕಾರ, ಹುಳಿ, ಉಪ್ಪು, ಬಲುಬಿಸಿ, ಬಲುತೀಕ್ಷ್ಣ, (ಅತಿ ಶೈತ್ಯ-ತೈಕ್ಷ್ಣ್ಯಾದಿಗಳಿಂದ ಉಪಯೋಗಿಸಲಸಾಧ್ಯ) ಶೋಷಕರ, ತಾಪಕರಗಳಾದುವೂ ದುಃಖ, ಶೋಕ, ರೋಗಗಳನ್ನು ಕೊಡತಕ್ಕುವೂ ಆದ ಆಹಾರಗಳು ರಾಜಸ ಪ್ರಕೃತಿಗಳಿಗೆ ಇಷ್ಟವಾದುವು.

**ಯಾತಯಾಮಂ ಗತರಸಂ ಪೂತಿ ಪರ್ಯುಷಿತಂ ಚ ಯತ್ ।**
**ಉಚ್ಛಿಷ್ಟಮಪಿ ಚಾಮೇಧ್ಯಂ ಭೋಜನಂ ತಾಮಸಪ್ರಿಯಂ ॥೧೦॥**

ಬಹಳ ಹೊತ್ತಾದುದೂ (ತಂಗುಳೂ), ಸ್ವಾಭಾವಿಕ ರಸವನ್ನು ಕಳೆದುಕೊಂಡುದೂ, ನಾರುವುದೂ ಕಾಲಾತಿ ಕ್ರಮ ಮಾತ್ರದಿಂದ ರಸಾಂತರವನ್ನು ಹೊಂದಿರುವುದೂ, ಎಂಜಲೂ (ಗುರುಜನರನ್ನು ಬಿಟ್ಟು ಇತರರು

ತಿಂದು ಮಿಕ್ಕದ್ದು) ಯಜ್ಞಶಿಷ್ಟವಲ್ಲದ್ದೂ ಆದ ಆಹಾರವು ತಾಮಸರಿಗೆ ಪ್ರಿಯವಾದುದು.

(ಟಿಪ್ಪಣಿ: ಇಂತಹ ಆಹಾರವು ತಮೋಗುಣವನ್ನು ಮತ್ತು ತಮಸ್ಸನ್ನು ಹೆಚ್ಚಿಸುವುದು. ಆದುದರಿಂದ ಒಳ್ಳೆಯಗುಣ-ಸತ್ತ್ವವೃದ್ಧಿಗಾಗಿ ಸಾತ್ತ್ವಿಕಾಹಾರವನ್ನೇ ಸೇವಿಸಬೇಕೆಂದು ಭಾವ.)

**ಅಫಲಾಕಾಂಕ್ಷಿಭಿರ್ಯಜ್ಞೋ ವಿಧಿದೃಷ್ಟೋ ಯ ಇಜ್ಯತೇ ।**
**ಯಷ್ಟವ್ಯಮೇವೇತಿ ಮನಸ್ಸಮಾಧಾಯ ಸ ಸಾತ್ತ್ವಿಕಃ ॥ ೧೧ ॥**

ಯಾವ, ಶಾಸ್ತ್ರಗಳಿಂದ ಅರಿಯಲ್ಪಟ್ಟ ಯಾಗವು ಫಲದಲ್ಲಿ ಆಸೆಯನ್ನು ತಳೆಯದವರಿಂದ ಯಾಗ ಮಾಡುವುದು ಕರ್ತವ್ಯವೆಂದು ಮನಸ್ಸನ್ನು ಸಾವಧಾನವಾಗಿಟ್ಟುಕೊಂಡು, ಮಾಡಲ್ಪಡುವುದೋ ಅಂತಹ ಯಾಗವು ಸಾತ್ತ್ವಿಕವು.

**ಅಭಿಸನ್ಧಾಯ ತು ಫಲಂ ದಂಭಾರ್ಥಮಪಿ ಚೈವ ಯಃ ।**
**ಇಜ್ಯತೇ ಭರತಶ್ರೇಷ್ಠ ತಂ ಯಜ್ಞಂ ವಿದ್ಧಿ ರಾಜಸಂ ॥ ೧೨ ॥**

ಎಲೈ ಭರತ ಶ್ರೇಷ್ಠನಾದ ಅರ್ಜುನನೆ ! ಫಲಾಸಕ್ತಿಯಿಂದ ಮತ್ತು ದಂಭಕ್ಕೋಸ್ಕರ ಮಾಡಿದ ಯಜ್ಞವು ರಾಜಸವೆಂದು ತಿಳಿ.

**ವಿಧಿಹೀನಮಸೃಷ್ಟಾನ್ನಂ ಮನ್ತ್ರಹೀನಮದಕ್ಷಿಣಂ ।**
**ಶ್ರದ್ಧಾವಿರಹಿತಂ ಯಜ್ಞಂ ತಾಮಸಂ ಪರಿಚಕ್ಷತೇ ॥ ೧೩ ॥**

ಬ್ರಾಹ್ಮಣರ ಅನುಜ್ಞೆಯಿಲ್ಲದ್ದೂ, ಶಾಸ್ತ್ರಚೋದಿತಗಳಾದ ದ್ರವ್ಯಗಳಿಲ್ಲದ್ದೂ ಮಂತ್ರ, ದಕ್ಷಿಣೆ, ಶ್ರದ್ಧೆ—ಇವುಗಳಿಲ್ಲದ್ದೂ ಆದ ಯಜ್ಞವನ್ನು ತಾಮಸವೆನ್ನುವರು.

(ಸಂಗತಿ : ಅನಂತರ, ಸತ್ತ್ವಾದಿಗುಣಗಳಿಂದ ತಪಸ್ಸೂ ಮೂರುವಿಧವೆನ್ನುವುದಕ್ಕಾಗಿ, ಅದು ಶರೀರ, ವಾಕ್ಕು, ಮನಸ್ಸುಗಳಿಂದ ನಿಷ್ಪಾದ್ಯವಾದುದರಿಂದ ಅದರ ಸ್ವರೂಪ ಭೇದವನ್ನು ಮೊದಲು ಹೇಳುತ್ತಾನೆ.)

**ದೇವದ್ವಿಜಗುರುಪ್ರಾಜ್ಞಪೂಜನಂ ಶೌಚಮಾರ್ಜವಂ ।**
**ಬ್ರಹ್ಮಚರ್ಯಮಹಿಂಸಾ ಚ ಶಾರೀರಂ ತಪ ಉಚ್ಯತೇ ॥ ೧೪ ॥**

ದೇವತೆಗಳು, ಬ್ರಾಹ್ಮಣರು, ಆಚಾರ್ಯರು, ವಿದ್ವಾಂಸರು—ಇವರನ್ನು ಪೂಜಿಸುವುದೂ, ಪರಿಶುದ್ಧಿಯೂ (ತೀರ್ಥಸ್ನಾನಾದಿ), ಕಪಟವಿಲ್ಲದಿರುವುದೂ, ಬ್ರಹ್ಮಚರ್ಯವ್ರತವೂ, ಪ್ರಾಣಿಪೀಡೆಯಿಲ್ಲದಿರುವುದೂ—ಇವು ಶರೀರದಿಂದ ಮಾಡುವ ತಪಸ್ಸೆನಿಸುವುವು.

**ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ ಚ ಯತ್ ।**
**ಸ್ವಾಧ್ಯಾಯಾಭ್ಯಸನಂ ಚೈವ ವಾಙ್ಮಯಂ ತಪ ಉಚ್ಯತೇ ॥ ೧೫ ॥**

ಪರರಿಗೆ ಭಯವನ್ನುಂಟುಮಾಡದ ಸತ್ಯವೂ, ಪ್ರಿಯವೂ, ಹಿತವೂ ಆದ ಮಾತೂ, ವೇದಾಭ್ಯಾಸವೂ ಬಾಯಿಂದಮಾಡತಕ್ಕ ತಪಸ್ಸೆನಿಸುವುವು.

**ಮನಃಪ್ರಸಾದಸ್ಸೌಮ್ಯತ್ವಂ ಮೌನಮಾತ್ಮವಿನಿಗ್ರಹಃ ।**
**ಭಾವಸಂಶುದ್ಧಿರಿತ್ಯೇತತ್ತಪೋ ಮಾನಸಮುಚ್ಯತೇ ॥ ೧೬ ॥**

ಮನಸ್ಸಿನ ಪ್ರಸನ್ನತೆ (ಕ್ರೋಧಾದಿಗಳಿಲ್ಲದಿರುವುದು), ಸೌಮ್ಯತೆ (ಇತರರ ಅಭ್ಯುದಯದಲ್ಲಿಯೇ ಆಸೆ ಪಡುವುದು), ಮೌನವ್ರತ (ವಾಙ್ನಿಯಮ), ಆತ್ಮನೊಂದರಲ್ಲಿಯೇ ಮನಸ್ಸನ್ನು ನೆಲಸುವಹಾಗೆ ಮಾಡುವುದು, ಭಾವಶುದ್ಧಿ (ಆತ್ಮವ್ಯತಿರಿಕ್ತವಿಷಯವನ್ನು ಚಿಂತಿಸದಿರುವುದು), ಇವು ಮನಸ್ಸಿನಿಂದ ಮಾಡುವ ತಪಸ್ಸೆನಿಸುವುದು.

**ಶ್ರದ್ಧಯಾ ಪರಯಾ ತಪ್ತಂ ತಪಸ್ತತ್ತ್ರಿವಿಧಂ ನರೈಃ ।**
**ಅಫಲಾಕಾಂಕ್ಷಿಭಿರ್ಯುಕ್ತೈಸ್ಸಾತ್ತ್ವಿಕಂ ಪರಿಚಕ್ಷತೇ ॥ ೧೭ ॥**

ಫಲಾಕಾಂಕ್ಷೆಯಿಲ್ಲದ ಮತ್ತು ಪರಮ ಪುರುಷನ ಆರಾಧನವಿದೆಂಬ ಚಿಂತಾಯುಕ್ತರಾದ, ಮನುಷ್ಯರು ಪರಮ ಶ್ರದ್ಧೆಯಿಂದ ಮಾಡಿದ ಮೂರು ಬಗೆಯ ತಪಸ್ಸು ಸಾತ್ತ್ವಿಕವೆನಿಸುತ್ತದೆ.

**ಸತ್ಕಾರಮಾನಪೂಜಾರ್ಥಂ ತಪೋದಂಭೇನ ಚೈವ ಯತ್ ।**
**ಕ್ರಿಯತೇ ತದಿಹ ಪ್ರೋಕ್ತಂ ರಾಜಸಂ ಚಲಮಧ್ರುವಂ ॥ ೧೮ ॥**

ಸತ್ಕಾರ (ಮನಸ್ಸಿನಿಂದ ಆದರಿಸುವುದು), ಮಾನ (ಮಾತಿನಿಂದ ಕೊಂಡಾಡುವುದು), ಪೂಜೆ (ನಮಸ್ಕಾರಾದಿ),—ಇವುಗಳಿಗಾಗಿ ದಂಭದಿಂದ ಮಾಡುವ ತಪಸ್ಸು ಈ ಲೋಕದಲ್ಲಿ ರಾಜಸ ಚಂಚಲ ಮತ್ತು ಅಸ್ಥಿರವೆನಿಸುತ್ತದೆ.

**ಮೂಢಗ್ರಾಹೇಣಾತ್ಮನೋ ಯತ್ಪೀಡಯಾ ಕ್ರಿಯತೇ ತಪಃ ।**
**ಪರಸ್ಯೋತ್ಸಾದನಾರ್ಥಂ ವಾ ತತ್ತಾಮಸಮುದಾಹೃತಂ ॥ ೧೯ ॥**

ಮೂಢರ ಅಭಿನಿವೇಶದಿಂದ (ತನ್ನ ಶಕ್ತಿ ಮುಂತಾದುದನ್ನು ಪರೀಕ್ಷಿಸದೆ) ತನ್ನನ್ನು ತಾನು ಪೀಡಿಸಿಕೊಂಡೋ ಅಥವಾ ಪರರನ್ನು ಹಿಂಸಿಸುವುದಕ್ಕಾಗಿಯೋ ಮಾಡುವ ತಪಸ್ಸು ತಾಮಸವೆನಿಸುತ್ತದೆ.

**ದಾತವ್ಯಮಿತಿ ಯದ್ದಾನಂ ದೀಯತೇಽನುಪಕಾರಿಣೇ ।**
**ದೇಶೇ ಕಾಲೇ ಚ ಪಾತ್ರೇ ಚ ತದ್ದಾನಂ ಸಾತ್ತ್ವಿಕಂ ಸ್ಮೃತಂ ॥**

(ಫಲಾಪೇಕ್ಷೆಯಿಲ್ಲದೆ) ಕೊಡುವುದೇ ಕರ್ತವ್ಯವೆಂದು ಉಪಕಾರಿಯಾಗದವನಿಗೆ, ಒಳ್ಳೆಯ ಸ್ಥಳದಲ್ಲಿಯೂ, ಒಳ್ಳೆಯ ಕಾಲದಲ್ಲಿಯೂ, ಒಳ್ಳೆಯ ಪಾತ್ರದಲ್ಲಿಯೂ ಕೊಡಲ್ಪಡುವ ದಾನವು ಸಾತ್ತ್ವಿಕವೆನಿಸುತ್ತದೆ.

**ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ ವಾ ಪುನಃ ।**
**ದೀಯತೇ ಚ ಪರಿಕ್ಲಿಷ್ಟಂ ತದ್ರಾಜಸಮುದಾಹೃತಂ ॥ ೨೧ ॥**

ಪ್ರತ್ಯುಪಕಾರದ ಅಪೇಕ್ಷೆಯಿಂದಲೋ ಫಲವನ್ನು ಉದ್ದೇಶಿಸಿಯೋ ದ್ರವ್ಯರಾಗ ಪ್ರಯುಕ್ತ ಕ್ಲೇಶದಿಂದ (ಒಳ್ಳೆಯ ದ್ರವ್ಯವನ್ನುಳಿದು) ಮಾಡುವ ದಾನವು ರಾಜಸವೆನಿಸುತ್ತದೆ.

**ಅದೇಶಕಾಲೇ ಯದ್ದಾನಮಪಾತ್ರೇಭ್ಯಶ್ಚ ದೀಯತೇ ।**
**ಅಸತ್ಕೃತಮವಜ್ಞಾತಂ ತತ್ತಾಮಸಮುದಾಹೃತಂ ॥ ೨೨ ॥**

ಯೋಗ್ಯವಲ್ಲದ ದೇಶ, ಕಾಲ ಪಾತ್ರಗಳಲ್ಲಿ ಅಗೌರವದಿಂದಲೂ, ತಿರಸ್ಕಾರದಿಂದಲೂ ಮಾಡುವ ದಾನವು ತಾಮಸವೆನಿಸುವುದು.

(ಸಂಗತಿ : ಹೀಗೆ, ವೈದಿಕವಾದ ಯಜ್ಞತಪೋದಾನಗಳಿಗೆ ಸತ್ತ್ವಾದಿ ಗುಣಭೇದದಿಂದ ಭೇದವು ಹೇಳಲ್ಪಟ್ಟಿತು. ಈಗ, ಅದೇ ವೈದಿಕವಾದ ಯಜ್ಞಾದಿಗಳಿಗೆ ಪ್ರಣವ ಸಂಯೋಗದಿಂದಲೂ "ತತ್", "ಸತ್"— ಎಂಬ ಪದಗಳಿಂದ ಹೇಳಲ್ಪಡುವುದರಿಂದಲೂ ಲಕ್ಷಣವು ಹೇಳಲ್ಪಡುತ್ತದೆ.)

**ಓಂ ತತ್ಸದಿತಿ ನಿರ್ದೇಶೋ ಬ್ರಹ್ಮಣಸ್ತ್ರಿವಿಧಃ ಸ್ಮೃತಃ ।**
**ಬ್ರಾಹ್ಮಣಾಸ್ತೇನ ವೇದಾಶ್ಚ ಯಜ್ಞಾಶ್ಚ ವಿಹಿತಾಃ ಪುರಾ ॥ ೨೩ ॥**

"ಓಂ", "ತತ್". "ಸತ್"—ಎಂಬ ಮೂರು ತೆರನಾದ ಶಬ್ದವು ಬ್ರಹ್ಮ (ವೇದ—ಅಂದರೆ ಯಜ್ಞಾದಿ ವೈದಿಕ ಕರ್ಮ) ಕ್ಕೆ ಅನ್ವಯಿಸುತ್ತದೆ. ಆ ಶಬ್ದದಿಂದ ಪೂರ್ವದಲ್ಲಿ ಬ್ರಾಹ್ಮಣರೂ, (ತ್ರೈವರ್ಣಿಕರು) ವೇದಗಳೂ, ಯಜ್ಞಗಳೂ ನಿರ್ಮಿತವಾದುವು.

(ಸಂಗತಿ : ಈ ಮೂರಕ್ಕೂ "ಓಂ", "ತತ್", "ಸತ್"—ಎಂಬ ಪದಗಳು ಅನ್ವಯಿಸುವ ಪ್ರಕಾರವನ್ನು ವರ್ಣಿಸುತ್ತಾನೆ. ಅದರಲ್ಲಿ ಮೊದಲು "ಓಂ" ಎಂಬ ಪದವು ಅನ್ವಯಿಸುವ ಪ್ರಕಾರವನ್ನು ಹೇಳುತ್ತಾನೆ)

**ತಸ್ಮಾದೋಮಿತ್ಯುದಾಹೃತ್ಯ ಯಜ್ಞದಾನತಪಃ ಕ್ರಿಯಾಃ ।**
**ಪ್ರವರ್ತನ್ತೇ ವಿಧಾನೋಕ್ತಾಸ್ಸತತಂ ಬ್ರಹ್ಮವಾದಿನಾಂ ॥ ೨೪ ॥**

ಆದುದರಿಂದ ಬ್ರಹ್ಮವಾದಿಗಳ ವೇದೋಕ್ತವಾದ ಯಜ್ಞ, ದಾನ, ತಪಸ್ಸು ಮುಂತಾದ ಕ್ರಿಯೆಗಳು "ಓಂ"—ಎಂದು ಹೇಳಿ ಯಾವಾಗಲೂ ಮಾಡಲ್ಪಡುತ್ತವೆ. ("ಓಂ"—ಎಂಬ ಶಬ್ದದಿಂದ ಕೂಡಿದ ವೇದವನ್ನು ಧರಿಸುವುದರಿಂದಲೂ, ಅದರೊಡನೆ ಕೂಡಿದ ಯಜ್ಞಾದಿಗಳನ್ನು ಮಾಡುವುದರಿಂದಲೂ ಬ್ರಾಹ್ಮಣರಿಗೂ "ಓಂ" ಎಂಬ ಶಬ್ದವು ಅನ್ವಯಿಸುತ್ತದೆಯೆಂದು ಭಾವ.)

(ಸಂಗತಿ : ಇನ್ನು ಇವಕ್ಕೆ "ತತ್"—ಎಂಬ ಪದದೊಡನೆ ಸಂಬಂಧವಿರುವ ಪ್ರಕಾರವನ್ನು ಹೇಳುತ್ತಾನೆ.)

**ತದಿತ್ಯನಭಿಸನ್ಧಾಯ ಫಲಂ ಯಜ್ಞತಪಃಕ್ರಿಯಾಃ ।**
**ದಾನಕ್ರಿಯಾಶ್ಚ ವಿವಿಧಾಃ ಕ್ರಿಯನ್ತೇ ಮೋಕ್ಷಕಾಂಕ್ಷಿಭಿಃ ॥ ೨೫ ॥**

ಫಲವನ್ನು ಇಚ್ಛಿಸದೆ ಯಜ್ಞತಪಃ ಕ್ರಿಯೆಗಳನ್ನೂ ವಿವಿಧದಾನ ಕ್ರಿಯೆಗಳನ್ನೂ "ತತ್"—ಎಂದು ಮುಮುಕ್ಷುಗಳು ಮಾಡುತ್ತಾರೆ. ("ತತ್"—ಎಂಬ ಪದಕ್ಕೆ ಬ್ರಹ್ಮವೆಂದರ್ಥ. ಆ ಪದದಿಂದ ವೇದಾಧ್ಯಯನ ಯಜ್ಞಾದಿಗಳನ್ನು ಮುಮುಕ್ಷುಗಳಾದ ಬ್ರಾಹ್ಮಣರು ಆಚರಿಸುವುದರಿಂದ, ಅವರಿಗೂ ಆ ಪದವು ಅನ್ವಯಿಸುತ್ತದೆಯೆಂದು ಭಾವ.)

(ಸಂಗತಿ : ಅನಂತರ, ಇವಕ್ಕೆ "ಸತ್"—ಎಂಬ ಪದದೊಡನೆ ಸಂಬಂಧವಿರುವ ಪ್ರಕಾರವನ್ನು ಹೇಳುವುದಕ್ಕಾಗಿ, ಲೋಕದಲ್ಲಿ "ಸತ್"—ಎಂಬ ಪದಕ್ಕೆ ಅರ್ಥವು ಏರ್ಪಟ್ಟಿರುವ ಪ್ರಕಾರವನ್ನು ಹೇಳುತ್ತಾನೆ.)

**ಸದ್ಭಾವೇ ಸಾಧುಭಾವೇ ಚ ಸದಿತ್ಯೇತತ್ಪ್ರಯುಜ್ಯತೇ ।**
**ಪ್ರಶಸ್ತೇ ಕರ್ಮಣಿ ತಥಾ ಸಚ್ಛಬ್ದಃ ಪಾರ್ಥ ಯುಜ್ಯತೇ ॥ ೨೬ ॥**

ಎಲೈ ಪಾರ್ಥನೆ! ಇರತಕ್ಕವಸ್ತುವಿನಲ್ಲಿಯೂ ಚೆನ್ನಾಗಿ ಇರತಕ್ಕ ವಸ್ತುವಿನಲ್ಲಿಯೂ ಈ "ಸತ್"—ಎಂಬ ಪದವು ಉಪಯೋಗಿಸಲ್ಪಡುತ್ತದೆ. ಹಾಗೆಯೇ ಮಂಗಳ ಕಾರ್ಯದಲ್ಲಿಯೂ "ಸತ್"—ಎಂಬ ಶಬ್ದವು ಉಪಯೋಗಿಸಲ್ಪಡುತ್ತದೆ.

**ಯಜ್ಞೇ ತಪಸಿ ದಾನೇ ಚ ಸ್ಥಿತಿಸ್ಸದಿತಿ ಚೋಚ್ಯತೇ ।**
**ಕರ್ಮಚೈವ ತದರ್ಥೀಯಂ ಸದಿತ್ಯೇವಾಭಿಧೀಯತೇ ॥ ೨೭ ॥**

ಯಜ್ಞ, ತಪಸ್ಸು, ದಾನ—ಇವುಗಳಲ್ಲಿ ನಿಷ್ಠೆಯು (ಮಂಗಳಕರವಾದುದರಿಂದ) "ಸತ್"—ಎಂದು ಹೇಳಲ್ಪಡುವುದು. ಆ ತ್ರೈವರ್ಣಿಕರ ಪ್ರಯೋಜನಾರ್ಥವಾದ ಯಜ್ಞ, ತಪಸ್ಸು, ದಾನ ಮೊದಲಾದ ಕರ್ಮವೂ "ಸತ್"—ಎಂದೇ ಹೇಳಲ್ಪಡುವುದು.

(ಟಿಪ್ಪಣಿ: ಈ "ಓಂ", "ತತ್", "ಸತ್"—ಎಂಬ ಪದಗಳೊಡನೆ ಸಂಬಂಧಿಸಿರುವುದೆಂಬ ಲಕ್ಷಣದಿಂದ ವೇದಗಳಿಗೂ, ವೈದಿಕ ಕರ್ಮಗಳಿಗೂ, ವೈದಿಕರಿಗೂ ಬೇರೆಯವಕ್ಕಿಂತ ಇರುವ ವಿಶೇಷಗಳು ವ್ಯಕ್ತವಾಗುತ್ತವೆ.)

**ಅಶ್ರದ್ಧಯಾ ಹುತಂ ದತ್ತಂ ತಪಸ್ತಪ್ತಂ ಕೃತಂ ಚ ಯತ್ ।**
**ಅಸದಿತ್ಯುಚ್ಯತೇ ಪಾರ್ಥ ನ ಚ ತತ್ಪ್ರೇತ್ಯ ನೋ ಇಹ ॥ ೨೮ ॥**

ಎಲೈ ಪಾರ್ಥನೆ! ಶ್ರದ್ಧೆಯಿಲ್ಲದೆ ಮಾಡಿದ ಹೋಮವೂ, ದಾನವೂ, ತಪಸ್ಸೂ (ಶಾಸ್ತ್ರೀಯವಾದಾಗ್ಯೂ) "ಅಸತ್"—ಎಂದೆನಿಸುವುದು. (ಏತಕ್ಕೆಂದರೆ), ಅದರಿಂದ ಮೋಕ್ಷವೂ ಇಲ್ಲ, ಸಾಂಸಾರಿಕಫಲವೂ ಇಲ್ಲ.

ಇಲ್ಲಿಗೆ "ಶ್ರದ್ಧಾತ್ರಯವಿಭಾಗಯೋಗ"—ವೆಂಬ ಹದಿನೇಳನೆಯ ಅಧ್ಯಾಯವು ಮುಗಿಯಿತು.

---

# ಅಧ್ಯಾಯ ೧೮

# ಸಾರೋದ್ಧಾರ

(ಸಂಗತಿ : ಹಿಂದಿನ ಎರಡು ಅಧ್ಯಾಯಗಳಿಂದ—ಮೋಕ್ಷ ಮತ್ತು ಇತರ ಪುರುಷಾರ್ಥಗಳಿಗೆ ಕಾರಣವಾದುದು ವೇದೋಕ್ತವಾದ ಯಜ್ಞ, ತಪಸ್ಸು, ದಾನ ಮುಂತಾದ ಕರ್ಮಗಳೇ ಹೊರತು ಮತ್ತಾವುದೂ ಅಲ್ಲ. ವೇದೋಕ್ತ ಕರ್ಮಗಳಿಗೆ ಸಾಮಾನ್ಯಲಕ್ಷಣವು ಪ್ರಣವಾನ್ವಯ. ಅದರಲ್ಲಿ ಮೋಕ್ಷ ಮತ್ತು ಇತರ ಪುರುಷಾರ್ಥಗಳಿಗೆ ಕಾರಣವಾದ ಕರ್ಮಗಳ ಪರಸ್ಪರ ವ್ಯತ್ಯಾಸವು " ತತ್ " " ಸತ್ "–ಎಂಬ ಪದಗಳಿಂದ ಹೇಳಲ್ಪಟ್ಟಿದೆ. ಮೋಕ್ಷಸಾಧನವಾದ ಕರ್ಮವೂಕೂಡ ಫಲಾಭಿಸಂಧಿರಹಿತವಾದ ಯಜ್ಞವೇ ಮುಂತಾದುದು. ಅದನ್ನು ಆರಂಭಿಸುವುದು ಸತ್ತ್ವೋದ್ರೇಕದಿಂದಲೇ ಆ ಸತ್ತ್ವವೃದ್ಧಿಯು ಸಾತ್ತ್ವಿಕಾಹಾರವನ್ನುಸೇವಿಸುವುದರಿಂದ ಎನ್ನಲಾಯಿತು.

ಅನಂತರ, ಮೋಕ್ಷಕ್ಕೆ ಸಾಧನವೆನಿಸಿದ ತ್ಯಾಗ ಮತ್ತು ಸಂನ್ಯಾಸ ಇವೆರಡೂ ಒಂದೇ ಎಂದೂ, ತ್ಯಾಗದ ಸ್ವರೂಪವೂ, ಸರ್ವಕರ್ಮಗಳಿಗೂ ಭಗವಂತನೇ ಕರ್ತೃವೆಂಬ ಅನುಸಂಧಾನವೂ, ಸತ್ತ್ವರಜಸ್ತಮೋಗುಣಗಳ ಕಾರ್ಯವನ್ನು ವರ್ಣಿಸುವುದರಿಂದ ಸತ್ತ್ವಗುಣವೇ ಅವಶ್ಯ ಅಂಗೀಕಾರಾರ್ಹವೆಂದೂ ತನ್ನ ವರ್ಣಾಶ್ರಮೋಚಿತ ಕರ್ಮಗಳು ಭಗವಂತನ ಆರಾಧನವಾಗಿದ್ದುಕೊಂಡು ಭಗವತ್ಪ್ರಾಪ್ತಿಯನ್ನುಂಟುಮಾಡುವ ಪ್ರಕಾರವೂ, ಶ್ರೀಗೀತಾಶಾಸ್ತ್ರದ ಸಾರಾರ್ಥವು ಭಕ್ತಿಯೋಗವೆಂಬುದೂ ಹೇಳಲ್ಪಡುತ್ತವೆ.

ಅದರಲ್ಲಿ ಮೊದಲು, ತ್ಯಾಗ ಮತ್ತು ಸನ್ಯಾಸ ಎಂಬ ಈ ಎರಡೂ **ಬೇರೆಬೇರೆಯೋ ?** ಅಥವಾ ಒಂದೇಯೋ ? ಎಂಬುದನ್ನೂ ಮತ್ತು ಅದರ ಸ್ವರೂಪವನ್ನೂ ನಿರ್ಣಯಮಾಡಿಕೊಳ್ಳುವುದಕ್ಕಾಗಿ ಅರ್ಜುನನು ಪ್ರಶ್ನೆಮಾಡುತ್ತಾನೆ.)

**ಅರ್ಜುನ ಉವಾಚ—**
**ಸಂನ್ಯಾಸಸ್ಯ ಮಹಾಬಾಹೋ ತತ್ತ್ವಮಿಚ್ಛಾಮಿ ವೇದಿತುಂ ।**
**ತ್ಯಾಗಸ್ಯ ಚ ಹೃಷೀಕೇಶ ಪೃಥಕ್ಕೇಶಿನಿಷೂದನ ॥ ೧ ॥**

ಅರ್ಜುನನು ಹೇಳಿದನು—

ಮಹಾಬಾಹುವೇ, ಹೃಷೀಕೇಶಾ, ಕೇಶಿಯೆಂಬ ಅಸುರನನ್ನು ಕೊಂದವನೆ! ಸಂನ್ಯಾಸದ ಮತ್ತು ತ್ಯಾಗದ ತತ್ತ್ವವನ್ನು ಬೇರೆ ಬೇರೆಯಾಗಿ ತಿಳಿಯಲು ಇಚ್ಛಿಸುತ್ತೇನೆ.

(ಸಂಗತಿ: ಅನಂತರ, ಇವುಗಳೆರಡರ ಸ್ವರೂಪವು ಒಂದೇ, ಅದು ಇಂತಹದು ಎಂದು ನಿರ್ಣಯಿಸುವುದಕ್ಕಾಗಿ, ವಾದಿಗಳು ಬೇರೆ ಬೇರೆಯಾಗಿ ಹೇಳಿರುವುದನ್ನು ನಿರೂಪಿಸುತ್ತ ಶ್ರೀ ಭಗವಂತನು ಹೇಳುತ್ತಾನೆ.)

**ಶ್ರೀ ಭಗವಾನುವಾಚ—**
**ಕಾಮ್ಯಾನಾಂ ಕರ್ಮಣಾಂ ನ್ಯಾಸಂ ಸಂನ್ಯಾಸಂ ಕವಯೋ ವಿದುಃ**
**ಸರ್ವಕರ್ಮಫಲತ್ಯಾಗಂ ಪ್ರಾಹುಸ್ತ್ಯಾಗಂ ವಿಚಕ್ಷಣಾಃ ॥ ೨ ॥**

ಭಗವಂತನೆಂದನು—

(ಕೆಲವು) ಬುದ್ಧಿವಂತರು ಕಾಮ್ಯ ಕರ್ಮಗಳನ್ನು (ಸ್ವರೂಪತಃ) ಬಿಟ್ಟುಬಿಡುವುದೇ ಸಂನ್ಯಾಸವೆಂದು ತಿಳಿಯುತ್ತಾರೆ. (ಕೆಲವು) ಪಂಡಿತರಾದರೋ ಎಲ್ಲ ಕರ್ಮಗಳ ಫಲತ್ಯಾಗವನ್ನು ತ್ಯಾಗವೆನ್ನುತ್ತಾರೆ.

(ಟಿಪ್ಪಣಿ: ಶಾಸ್ತ್ರೀಯ ತ್ಯಾಗವೆಂಬುದು ಕಾಮ್ಯಕರ್ಮ ಸ್ವರೂಪಕ್ಕೆ ಸೇರಿದ್ದು ಎಂದೂ ಸರ್ವ ಕರ್ಮಫಲಕ್ಕೆ ಸೇರಿದ್ದು ಎಂದೂ ವಿವಾದವನ್ನು ತೋರಿಸುವುದರ ಮೂಲಕ "ತ್ಯಾಗ, ಸಂನ್ಯಾಸ" ಶಬ್ದಗಳೆರಡಕ್ಕೂ ಅರ್ಥವೊಂದೇ ಎಂದು ತಿಳಿಸಿದ ಹಾಗಾಯಿತು.)

(ಸಂಗತಿ: ಮೇಲಿನ ಶ್ಲೋಕದಿಂದ, ಫಲಗಳು ವಿರೋಧವಾದುವು ಎಂದೂ ಹಾಗಲ್ಲ ಎಂದೂ ಹೇಳುವುದರಿಂದ ವಾದಿಗಳ ಅಭಿಪ್ರಾಯದಲ್ಲಿ ವಿರೋಧವನ್ನು ತೋರಿಸಲಾಯಿತು. ಅನಂತರ ಶ್ಲೋಕದಿಂದ ಸ್ವರೂಪದಲ್ಲಿಯೇ ದೋಷಯುಕ್ತವಾದುದರಿಂದಲೂ, ಹಾಗಲ್ಲದುದರಿಂದಲೂ ಪಾಪವೆಂದೂ ಅದಲ್ಲವೆಂದೂ ವಾದಿಗಳ ವಿವಾದವನ್ನು ತೋರಿಸುತ್ತಾನೆ.)

**ತ್ಯಾಜ್ಯಂ ದೋಷವದಿತ್ಯೇಕೇ ಕರ್ಮ ಪ್ರಾಹುರ್ಮನೀಷಿಣಃ ।**
**ಯಜ್ಞದಾನತಪಃಕರ್ಮ ನ ತ್ಯಾಜ್ಯಮಿತಿ ಚಾಪರೇ ॥ ೩ ॥**

ಕೆಲವು ಬುದ್ಧಿವಂತರು (ಕಾಪಿಲರೂ ಮತ್ತು ಅವರ ಮತವನ್ನು ಅನುಸರಿಸುವ ವೈದಿಕರೂ) (ಯಜ್ಞಾದಿ) ಕರ್ಮವು (ರಾಗಾದಿ) ದೋಷವುಳ್ಳುದೂ ಅಥವಾ (ರಾಗಾದಿ) ದೋಷದಂತೆ ಬಂಧಕವೂ ಆದುದರಿಂದ, (ಮುಮುಕ್ಷುವಿಗೆ) ತ್ಯಾಜ್ಯವೆನ್ನುತ್ತಾರೆ. ಬೇರೆ ಕೆಲವರು ಯಜ್ಞ, ದಾನ, ತಪಸ್ಸುಮುಂತಾದ ಕರ್ಮವನ್ನು ಬಿಡಲಾಗದೆಂದು ಹೇಳುತ್ತಾರೆ.

(ಟಿಪ್ಪಣಿ : ಇಲ್ಲಿ ಎರಡನೆಯ ಪಕ್ಷವೇ ಭಗವಂತನ ಮತಕ್ಕೆ ಅನುಸಾರವಾದುದೆಂದು ತಿಳಿಯಬೇಕು. ಏಕೆಂದರೆ, " ಯಜ್ಞ ದಾನ ತಪಃ ಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ । " (18-5) ಎಂದು ಮುಂದೆ ಹೇಳುತ್ತಾನೆ.)

**ನಿಶ್ಚಯಂ ಶೃಣು ಮೇ ತತ್ರ ತ್ಯಾಗೇ ಭರತಸತ್ತಮ ।**
**ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಸ್ಸಂಪ್ರಕೀರ್ತಿತಃ ॥ ೪ ॥**

ಎಲೈ ಭರತ ಶ್ರೇಷ್ಠನೆ! ಪುರುಷ ಶ್ರೇಷ್ಠನೆ! (ಹೀಗೆ ವಿವಾದ ಗ್ರಸ್ತವಾದ) ತ್ಯಾಗದ ವಿಷಯದಲ್ಲಿ ನಿಶ್ಚಯವಾದುದನ್ನು (ಭ್ರಮಾದಿ ದೋಷವಿಲ್ಲದ) ನನ್ನಿಂದ ಕೇಳು. (ವೈದಿಕ ಕರ್ಮವನ್ನು ಬಿಡದೆ ಮಾಡುತ್ತಿರುವಾಗಲೇ, ಕರ್ತೃತ್ವತ್ಯಾಗ, ಕರ್ಮತ್ಯಾಗ,ಫಲತ್ಯಾಗಗಳೆಂದು) ತ್ಯಾಗವು ಮೂರು ವಿಧವಾಗಿರುವುದೆಂದು ಹೇಳಲ್ಪಟ್ಟಿತಲ್ಲವೆ ! (3-30)

**ಯಜ್ಞದಾನ ತಪಃಕರ್ಮ ನ ತ್ಯಾಜ್ಯಂ ಕಾರ್ಯಮೇವ ತತ್ ।**
**ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಂ ॥ ೫ ॥**

ಯಜ್ಞ, ದಾನ, ತಪಸ್ಸು ಮುಂತಾದ (ವೈದಿಕ) ಕರ್ಮವನ್ನು (ಮುಮುಕ್ಷುವು ಎಂದೂ) ಬಿಡಲಾಗದು. (ಮತ್ತೇನೆಂದರೇ, ಮರಣಪರ್ಯಂತ ದಿನದಿನವೂ) ಅದನ್ನು ಮಾಡಲೇಬೇಕು. ಯಜ್ಞ, ದಾನ, ತಪಸ್ಸು ಮುಂತಾದುವು ಮುಮುಕ್ಷುಗಳನ್ನು ಪರಿಶುದ್ಧಗೊಳಿಸುವಂತಹವು. (ಅವರ ಉಪಾಸನಪೂರ್ತಿಗೆ ವಿರೋಧಿಯಾದ ಪ್ರಾಚೀನ ಕರ್ಮಗಳನ್ನು ನಾಶಗೊಳಿಸುವಂತಹವು.)

(ಸಂಗತಿ : ಹೀಗೆ "ಪಾವನ" ವೆಂದು ಹೇಳಿದುದರಿಂದ, "ತ್ಯಾಜ್ಯಂ ದೋಷವತ್"—ಎಂಬ ಪಕ್ಷವನ್ನು ನಿರಾಕರಿಸಿಯಾಯಿತು. ಮುಂದಿನ ಶ್ಲೋಕದಿಂದ, " ನಿಶ್ಚಯಂ ಶೃಣು ಮೇ ತತ್ರ "—ಎಂದು ಆರಂಭಿಸಿ ಹೇಳಿದ ಅರ್ಥವನ್ನೇ ನಿರ್ದೋಷತ್ವನಿಶ್ಚಯಕ್ಕಾಗಿ ನಿಗಮನ ಮಾಡುವುದರ ಮೂಲಕ ದೃಢೀಕರಿಸುತ್ತಾನೆ. ಆದುದರಿಂದ ಇದು ಪುನರುಕ್ತಿಯಲ್ಲ.)

**ಏತಾನ್ಯಪಿ ತು ಕರ್ಮಾಣಿ ಸಙ್ಗಂ ತ್ಯಕ್ತ್ವಾ ಫಲಾನಿ ಚ |**
**ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ ಮತಮುತ್ತಮಂ || ೬ ||**

(ಯಜ್ಞದಾನತಪಃಪ್ರಭೃತಿಗಳು ಮುಮುಕ್ಷುಗಳಿಗೆ ಪಾವನವಾದುದರಿಂದ, ಉಪಾಸನಗಳಂತೆ ಭಗವಂತನ ಆರಾಧನ ರೂಪಗಳಾದ) ಇವನ್ನೂ ತನ್ನದು ಎಂಬ ಸಂಬಂಧವನ್ನೂ ಫಲಗಳನ್ನೂ ಬಿಟ್ಟು ಬಿಟ್ಟು ಮುಮುಕ್ಷುವು (ಉಪಾಸನೆ ನೆರವೇರುವುದಕ್ಕಾಗಿ ನಿತ್ಯವೂ) ಮಾಡಬೇಕು—ಎಂಬುದು ನನ್ನ ನಿಶ್ಚಿತವೂ ಉತ್ತಮವೂ ಆದ ಮತ.

(ಸಂಗತಿ : ಮುಂದೆ ಇತರ ಮತಗಳು ಅಧಮವೆಂದೂ ತನ್ನಮತವೇ ಉತ್ತಮವೆಂದೂ ವಿಸ್ತಾರವಾಗಿ ನಿರೂಪಿಸಲ್ಪಡುತ್ತದೆ.)

**ನಿಯತಸ್ಯ ತು ಸಂನ್ಯಾಸಃ ಕರ್ಮಣೋ ನೋಪಪದ್ಯತೇ |**
**ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ ಪರಿಕೀರ್ತಿತಃ || ೭ ||**

ನಿಯತ ಕರ್ಮದ (ಬಿಡಲಾಗದ, ನಿತ್ಯನೈಮಿತ್ತಿಕರೂಪ ಮಹಾ ಯಜ್ಞಾದಿ ಕರ್ಮದ) ತ್ಯಾಗವು ಯುಕ್ತವಲ್ಲ. ಅಜ್ಞಾನದಿಂದ ಅದನ್ನು ಬಿಟ್ಟುಬಿಡುವುದು ತಮೋಮೂಲವೆಂದು ಹೇಳಲ್ಪಟ್ಟಿತು.

**ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶಭಯಾತ್ತ್ಯಜೇತ್ |**
**ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗಫಲಂ ಲಭೇತ್ || ೮ ||**

(ಮಹಾಯಜ್ಞಾದ್ಯಾಶ್ರಮ) ಕರ್ಮವನ್ನು ಕಷ್ಟವೆಂದೇ, ಶರೀರಕ್ಕೆ ಶ್ರಮವುಂಟಾಗುವುದೆಂಬ ಭಯದಿಂದ ಬಿಟ್ಟುಬಿಟ್ಟರೆ ಅದು ರಜೋಮೂಲವಾದ ತ್ಯಾಗವಾಗುವುದು. ಅದರಿಂದ ತ್ಯಾಗದ ಫಲವು ದೊರೆಯದು.

(ಟಿಪ್ಪಣಿ : ಕರ್ಮವು ಪರಂಪರೆಯಾಗಿ ಮೋಕ್ಷಕ್ಕೆ ಸಾಧನವಾದರೂ ದುಃಖಾತ್ಮಕ ದ್ರವ್ಯಾರ್ಜನಸಾಧ್ಯವಾದುದರಿಂದ ಬಹ್ವಾಯಾಸರೂಪವೂ

ಕಾಯಕ್ಲೇಶಕರವೂ ಕೂಡ ಆಗಿದೆ ಇದರಿಂದ ಮನಸ್ಸಿಗೆ ಶ್ರಮವಾಗುವು ದೆಂಬ ಭಯದಿಂದ ಯೋಗವು ನೆರವೇರುವುದಕ್ಕಾಗಿ ಜ್ಞಾನಾಭ್ಯಾಸಕ್ಕೇ ತೊಡಗೋಣವೆಂದು ಮಹಾಯಜ್ಞಾದ್ಯಾಶ್ರಮ ಕರ್ಮವನ್ನು ಬಿಟ್ಟುಬಿಡು ವವನು ರಜೋಮೂಲವಾದ ತ್ಯಾಗವನ್ನು ಮಾಡಿದಂತಾಗುವುದು. ಅದು ಯಥಾವಸ್ಥಿತ ಶಾಸ್ತ್ರಾರ್ಥವಲ್ಲವಾದುದರಿಂದ, ಆ ತ್ಯಾಗದ ಫಲವಾದ ಜ್ಞಾನವು ಅವನಿಗೆ ಉಂಟಾಗದು. "ಅಯಥಾವತ್ಪ್ರಜಾನಾತಿ ಬುದ್ಧಿಸ್ಸಾ ಪಾರ್ಥರಾಜಸೀ" (18-31) —ಎಂದು ಮುಂದೆ ಹೇಳಲ್ಪಡುವುದು. ಕರ್ಮವು ಮನಃಪ್ರಸಾದವನ್ನು ಉಂಟುಮಾಡುವುದು ಭಗವತ್ಪ್ರಸಾದ ದ್ವಾರದಿಂದಲೇ ಹೊರತು ದೃಷ್ಟದ್ವಾರದಿಂದಲ್ಲವೆಂದು ಭಾವ.)

**ಕಾರ್ಯಮಿತ್ಯೇವ ಯತ್ಕರ್ಮ ನಿಯತಂ ಕ್ರಿಯತೇಽರ್ಜುನ ।**
**ಸಙ್ಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಸ್ಸಾತ್ತ್ವಿಕೋ ಮತಃ ॥೯॥**

ಅವಶ್ಯವಾಗಿ ಮಾಡಬೇಕಾದ (ನಿತ್ಯನೈಮಿತ್ತಿಕ ಮಹಾ ಯಜ್ಞಾದಿ ವರ್ಣಾಶ್ರಮವಿಹಿತವಾದ) ಕರ್ಮವನ್ನು (ಭಗವಂತನ ಆರಾಧನ ರೂಪ ವಾದುದರಿಂದ) ಕೇವಲ ಕರ್ತವ್ಯವೆಂದೇ, ಕರ್ತೃತ್ವಾಭಿಮಾನವನ್ನೂ ಫಲವನ್ನೂ ತ್ಯಜಿಸಿ ಮಾಡಿದರೆ, ಆ ತ್ಯಾಗವು ಸಾತ್ತ್ವಿಕ (ಯಥಾವಸ್ಥಿತ ಶಾಸ್ತ್ರಾರ್ಥಜ್ಞಾನಮೂಲ) ವೆನಿಸುವುದು.

(ಸಂಗತಿ: ಮುಂದೆ, ಸಾತ್ತ್ವಿಕತ್ಯಾಗಯುಕ್ತನಿಗೆ, "ಉದಾಸೀನ ವದಾಸೀನಃ (14-23) ಇತ್ಯಾದಿಯಿಂದ ಪ್ರಸಿದ್ಧವಾಗಿರುವ ನಿರ್ವಿ ಕಾರತ್ವರೂಪ ಲಕ್ಷಣವು ಹೇಳಲ್ಪಡುವುದು.)

**ನ ದ್ವೇಷ್ಟ್ಯಕುಶಲಂ ಕರ್ಮ ಕುಶಲೇ ನಾನುಷಜ್ಜತೇ ।**
**ತ್ಯಾಗೀ ಸತ್ತ್ವಸಮಾವಿಷ್ಟೋ ಮೇಧಾವೀ ಛಿನ್ನಸಂಶಯಃ ॥೧೦॥**

(ಹೀಗೆ) ಸತ್ತ್ವಸಂಪನ್ನನೂ ಯಥಾವಸ್ಥಿತ ತತ್ತ್ವಜ್ಞಾನವುಳ್ಳವನೂ (ಅದರಿಂದ) ಸಂದೇಹಗಳನ್ನು ಕಳೆದುಕೊಂಡವನೂ ಸಾತ್ತ್ವಿಕ ತ್ಯಾಗ ಯುಕ್ತನೂ ಆದವನು ಅನಿಷ್ಟಫಲವನ್ನು ಕೊಡತಕ್ಕ ಕರ್ಮವನ್ನು ದ್ವೇಷಿ ಸುವುದಿಲ್ಲ. ಇಷ್ಟರೂಪ ಸ್ವರ್ಗ ಪುತ್ರ ಪಶ್ವನ್ನಾದಿಗಳನ್ನು ಕೊಡತಕ್ಕ

ಕರ್ಮದಲ್ಲಿ ಆಸೆಯಿಡುವುದೂ ಇಲ್ಲ. (ಕರ್ತೃತ್ವಾದಿ ಸಂಗಗಳನ್ನೂ ಬ್ರಹ್ಮ ವ್ಯತಿರಿಕ್ತವಾದ ಸರ್ವಫಲಗಳನ್ನೂ ಬಿಟ್ಟವನಾದುದರಿಂದ ಕುಶಲ ಮತ್ತು ಅಕುಶಲ ಕರ್ಮಗಳಲ್ಲಿ ಅವನಿಗೆ ಪ್ರೀತಿದ್ವೇಷಗಳಿರುವುದಿಲ್ಲವೆಂದು ಭಾವ.)

(ಸಂಗತಿ: ಅದನ್ನೇ ಹೇಳುತ್ತಾನೆ ;)

**ನ ಹಿ ದೇಹಭೃತಾ ಶಕ್ಯಂ ತ್ಯಕ್ತುಂ ಕರ್ಮಾಣ್ಯಶೇಷತಃ ।**
**ಯಸ್ತು ಕರ್ಮಫಲತ್ಯಾಗೀ ಸ ತ್ಯಾಗೀತ್ಯಭಿಧೀಯತೇ ॥ ೧೧ ॥**

ಕರ್ಮಗಳನ್ನು ನಿಶ್ಶೇಷವಾಗಿ ಬಿಡುವುದು ದೇಹಧಾರಿಗೆ ಶಕ್ಯವಲ್ಲ. ಆದರೆ ಕರ್ಮಫಲವನ್ನು ಬಿಡುವವನು ತ್ಯಾಗಿಯೆನಿಸುವನು.

(ಸಂಗತಿ: ಅಗ್ನಿಹೋತ್ರ, ದರ್ಶಪೂರ್ಣಮಾಸ, ಜ್ಯೋತಿಷ್ಟೋಮ ಮುಂತಾದ ಕರ್ಮಗಳೂ ಮಹಾಯಜ್ಞಾದಿಗಳೂ ಸ್ವರ್ಗಾದಿ ಫಲದೊಡನೆ ಸಂಬಂಧಿಸಿದವುಗಳಾಗಿಯೇ ಶಾಸ್ತ್ರಗಳಿಂದ ವಿಧಿಸಲ್ಪಟ್ಟಿವೆ. ನಿತ್ಯನೈಮಿತ್ತಿಕಗಳೂ "ಪ್ರಾಜಾಪತ್ಯಂ ಗೃಹಸ್ಥಾನಾಂ" ಇತ್ಯಾದಿಯಾಗಿ ಫಲದೊಡನೆ ಕೂಡಿಯೇ ವಿಧಿಸಲ್ಪಟ್ಟಿವೆ. ಆದುದರಿಂದ, ಆಯಾ ಫಲಕ್ಕೆ ಸಾಧನವಾಗಿರುವಿಕೆಯನ್ನೇ ಸ್ವಭಾವವುಳ್ಳದಾಗಿ ತಿಳಿದುಬರುವ ಕರ್ಮಗಳನ್ನು ಅನುಷ್ಠಿಸಿದಲ್ಲಿ, ಫಲದಲ್ಲಿ ಆಸೆಯಿಲ್ಲದವರಿಗೂ ಬೀಜಾವಾಪಾದಿಗಳಂತೆ ಇಷ್ಟ ಮತ್ತು ಅನಿಷ್ಟವಾದ ಫಲಗಳೊಡನೆ ಸಂಬಂಧವು ತಪ್ಪಲಾರದು. ಹೀಗೆ ಮೋಕ್ಷಕ್ಕೆ ವಿರೋಧಿಯಾದ ಫಲವುಳ್ಳೋಣದರಿಂದ, ಮುಮುಕ್ಷುವು ಕರ್ಮವನ್ನು ಅನುಷ್ಠಿಸಕೂಡದಲ್ಲವೆ! —ಎಂಬ ಆಕ್ಷೇಪಕ್ಕೆ ಉತ್ತರವನ್ನು ಮುಂದಿನ ಶ್ಲೋಕದಿಂದ ಹೇಳುತ್ತಾನೆ.)

**ಅನಿಷ್ಟಮಿಷ್ಟಂ ಮಿಶ್ರಂ ಚ ತ್ರಿವಿಧಂ ಕರ್ಮಣಃ ಫಲಂ ।**
**ಭವತ್ಯತ್ಯಾಗಿನಾಂ ಪ್ರೇತ್ಯ ನ ತು ಸಂನ್ಯಾಸಿನಾಂ ಕ್ವಚಿತ್ ॥ ೧೨ ॥**

ಅನಿಷ್ಟ, ಇಷ್ಟ ಮತ್ತು ಮಿಶ್ರ ಎಂದು ಕರ್ಮದ ಮೂರು ಬಗೆಯ ಫಲವು ಕರ್ಮಗಳನ್ನು ಅನುಷ್ಠಿಸಿದಮೇಲೆ ಕರ್ತೃತ್ವಾದಿ ತ್ಯಾಗವನ್ನು ಮಾಡದವರಿಗೆ ಉಂಟಾಗುವುದು; ಕರ್ತೃತ್ವಾದಿ ತ್ಯಾಗವನ್ನು ಮಾಡುವವರಿಗೆ ಎಂದೂ ಉಂಟಾಗದು.

(ಸಂಗತಿ: ಈಗ, ಅಂತರ್ಯಾಮಿಯೂ ಭಗವಂತನೂ ಆದ ಪುರುಷೋತ್ತಮನಲ್ಲಿ ಕರ್ತೃತ್ವವನ್ನು ಅನುಸಂಧಾನಮಾಡುವುದರಿಂದ ತಾನು ಕರ್ತೃವಲ್ಲವೆಂದು ಅನುಸಂಧಾನಮಾಡುವ ಬಗೆಯನ್ನು ಹೇಳುತ್ತಾನೆ. ಇದರಿಂದಲೇ ಫಲ ಮತ್ತು ಕರ್ಮಗಳಲ್ಲಿಯೂ ಮಮತೆಯು ಬಿಟ್ಟುಹೋಗುವುದು. ಪರಮಪುರುಷನು ತನಗೆ ಶೇಷನಾದ ಜೀವಾತ್ಮನಿಂದ ತನಗೆ ಶೇಷಭೂತಗಳಾದ ಶರೀರ, ಇಂದ್ರಿಯ ಮತ್ತು ಪ್ರಾಣಗಳ ಮೂಲಕ ತನ್ನ ಲೀಲೆಗೋಸ್ಕರ ಕರ್ಮಗಳನ್ನು ಆರಂಭಿಸುವನಲ್ಲವೆ! ಆದುದರಿಂದ ಜೀವಾತ್ಮನ ಕ್ಷುನ್ನಿವೃತ್ತಿಯೇ ಮುಂತಾದ ಫಲವೂ ಅದಕ್ಕೆ ಸಾಧನವಾದ ಕರ್ಮವೂ ಪರಮಪುರುಷನದೇ.)

**ಪಂಚೈತಾನಿ ಮಹಾಬಾಹೋ ಕಾರಣಾನಿ ನಿಬೋಧಮೇ ।**
**ಸಾಂಖ್ಯೇ ಕೃತಾಂತೇ ಪ್ರೋಕ್ತಾನಿ ಸಿದ್ಧಯೇ ಸರ್ವಕರ್ಮಣಾಂ ॥**

ಎಲೈ ಬಾಹುಬಲಶಾಲಿಯಾದ ಅರ್ಜುನನೆ! ಆತ್ಮಜ್ಞಾನವನ್ನು ಹೇಳುವ ಸಿದ್ಧಾಂತದಲ್ಲಿ ಎಲ್ಲ ಕರ್ಮಗಳ ಉತ್ಪತ್ತಿಗೆ ಕಾರಣವಾಗಿ ಹೇಳಲ್ಪಟ್ಟ ಇವೈದನ್ನು ನನ್ನಿಂದ ತಿಳಿ.

(ಸಂಗತಿ: ಅದನ್ನೇ ಹೇಳುತ್ತಾನೆ;)

**ಅಧಿಷ್ಠಾನಂ ತಥಾ ಕರ್ತಾ ಕರಣಂ ಚ ಪೃಥಗ್ವಿಧಂ ।**
**ವಿವಿಧಾ ಚ ಪೃಥಕ್ಚೇಷ್ಟಾ ದೈವಂ ಚೈವಾತ್ರ ಪಂಚಮಂ ॥ ೧೪ ॥**
**ಶರೀರವಾಙ್ಮನೋಭಿರ್ಯತ್ಕರ್ಮ ಪ್ರಾರಭತೇ ನರಃ ।**
**ನ್ಯಾಯ್ಯಂ ವಾ ವಿಪರೀತಂ ವಾ ಪಂಚೈತೇ ತಸ್ಯ ಹೇತವಃ ॥೧೫॥**

ಮನುಷ್ಯನು ಶಾಸ್ತ್ರಸಿದ್ಧ ಅಥವಾ ಶಾಸ್ತ್ರವಿರುದ್ಧವಾದ ಯಾವ ಕರ್ಮವನ್ನು ಶರೀರ, ವಾಕ್ಕು ಮತ್ತು ಮನಸ್ಸುಗಳಿಂದ ಆರಂಭಿಸುತ್ತಾನೆಯೋ ಆ ಕರ್ಮಕ್ಕೆ ಶರೀರ, ಜೀವಾತ್ಮ, ಮನಸ್ಸಹಿತವಾದ ಕರ್ಮೇಂದ್ರಿಯಗಳು, ಪಂಚವೃತ್ತಿಯುಳ್ಳ ಪ್ರಾಣವಾಯು, ಈ ಕರ್ಮಹೇತುಗಳ ಸಮೂಹದಲ್ಲಿ ಐದನೆಯದಾದ ದೈವ—ಇವೈದೂ ಕಾರಣಗಳು. (14, 15)

(ಟಿಪ್ಪಣಿ: ಕರ್ಮಗಳಿಗೆ ಕಾರಣವಾದ ಇವೈದರೊಳಗೆ, ಕರ್ಮವನ್ನು ಉಂಟುಮಾಡುವುದರಲ್ಲಿ ಪರಮಾತ್ಮನು ಪ್ರಧಾನ ಕಾರಣವೆಂದರ್ಥ. ಇದು

"ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ" (15–15) ಎಂಬುದರಿಂದ ಹಿಂದೆಯೇ ಹೇಳಲ್ಪಟ್ಟಿದೆ; "ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ । ಭ್ರಾಮಯನ್ ಸರ್ವಭೂತಾನಿ ಯನ್ತ್ರಾರೂಢಾನಿ ಮಾಯಯಾ ॥" (18–61) ಎಂಬುದರಿಂದ ಮುಂದೆಯೂ ಹೇಳಲ್ಪಡುವುದು. ಜೀವಾತ್ಮನ ಕರ್ತೃತ್ವವು ಪರಮಾತ್ಮನಿಗೆ ಅಧೀನವೆಂದು "ಪರಾತ್ತು ತಚ್ಛ್ರುತೇಃ" ಎಂಬ ಸೂತ್ರದಿಂದಲೂ ಉಪಪಾದಿತವಾಗಿದೆ.

ಹೀಗೆ ಜೀವಾತ್ಮನ ಕರ್ತೃತ್ವವು ಪರಮಾತ್ಮನಿಗೆ ಅಧೀನವಾದರೆ, ಜೀವಾತ್ಮನು ಕರ್ಮದಲ್ಲಿ ನಿಯಮಿಸಲ್ಪಡದವನಾಗುವುದರಿಂದ ವಿಧಿನಿಷೇಧರೂಪಶಾಸ್ತ್ರಗಳು ನಿರರ್ಥಕಗಳಾಗುವುವಲ್ಲವೆ! ಎಂಬ ಚೋದ್ಯ ಬ್ರಹ್ಮಸೂತ್ರಕಾರರೇ "ಕೃತ ಪ್ರಯತ್ನಾಪೇಕ್ಷಸ್ತು ವಿಹಿತ ಪ್ರತಿಷಿದ್ಧಾ ವೈಯರ್ಥ್ಯಾದಿಭ್ಯಃ ಎಂಬ ಸೂತ್ರದಿಂದ ಪರಿಹರಿಸಿದ್ದಾರೆ.

ಪರಮಾತ್ಮನಿಂದ ಕೊಡಲ್ಪಟ್ಟವೂ, ಅವನನ್ನೇ ಆಧಾರವಾಗಿಉಳ್ಳವೂ, ಮತ್ತು ಅವನಿಂದಲೇ ಕೊಡಲ್ಪಟ್ಟ ಶಕ್ತಿಯುಳ್ಳವೂ ಆದ ಕರಣಕಳೇಬರಗಳ ಮೂಲಕ, ಜೀವಾತ್ಮನು ತಾನೂ ಆ ಪರಮಾತ್ಮನನ್ನೇ ಆಧಾರವಾಗಿ ಉಳ್ಳವನೂ ಅವನಿಂದ ಕೊಡಲ್ಪಟ್ಟ ಶಕ್ತಿಯುಳ್ಳವನೂ ಆಗಿದ್ದುಕೊಂಡು ಕರ್ಮನಿಷ್ಪತ್ತಿಗಾಗಿ ಸ್ವೇಚ್ಛೆಯಿಂದ ಇಂದ್ರಿಯಾದ್ಯಧಿಷ್ಠಾನಾಕಾರವಾದ ಪ್ರಯತ್ನವನ್ನು ಆರಂಭಿಸುತ್ತಾನೆ. ಅವನೊಳಗಿರುವ ಪರಮಾತ್ಮನು ಅದಕ್ಕೆ ತನ್ನ ಅನುಮತಿಯನ್ನು ಕೊಡುವುದರ ಮೂಲಕ ಅವನನ್ನು ಪ್ರೇರಿಸುತ್ತಾನೆ. ಬಹು ಮಂದಿ ಸೇರಿ ಅತಿ ಭಾರವಾದ ಕಲ್ಲು, ಮರ ಮುಂತಾದುವನ್ನು ಸಾಗಿಸುವ ಕಾರ್ಯದಲ್ಲಿ ಅವರೆಲ್ಲರೂ ಕಾರಣರೂ ವಿಧಿನಿಷೇಧಭಾಗಿಗಳೂ ಆಗಿರುವಂತೆಯೇ ಪ್ರಕೃತದಲ್ಲಿಯೂ ಜೀವಾತ್ಮನೂ ಕೂಡ ಸ್ವಬುದ್ಧಿಯಿಂದಲೇ ಕಾರಣನೂ ವಿಧಿನಿಷೇಧಭಾಗಿಯೂ ಆಗಿರುವನು.)

**ತತ್ರೈವಂ ಸತಿ ಕರ್ತಾರಮಾತ್ಮಾನಂ ಕೇವಲಂ ತು ಯಃ ।**
**ಪಶ್ಯತ್ಯಕೃತಬುದ್ಧಿತ್ವಾನ್ನ ಸ ಪಶ್ಯತಿ ದುರ್ಮತಿಃ ॥ ೧೬ ॥**

ಹೀಗಿರಲು, ಆ ಕರ್ಮದಲ್ಲಿ ಜೀವಾತ್ಮನೊಬ್ಬನನ್ನೇ ಕರ್ತೃವನ್ನಾಗಿ ತಿಳಿಯುವವನು ವಿಪರೀತಮತಿಯು. ಯಥಾವಸ್ಥಿತ ವಸ್ತು ಜ್ಞಾನವು

ಉಂಟಾಗದಿರುವುದರಿಂದ (ಸರಿಯಾದ ಕರ್ತೃ ಯಾರೆಂಬುದನ್ನು) ಅವನು ಅರಿಯನು.

(ಸಂಗತಿ : ಈ ದುರ್ಮತಿಯ ಪ್ರಸ್ತಾವದಲ್ಲಿ— ಹಾಗಾದರೆ, ಒಳ್ಳೆಯ ಬುದ್ಧಿಯುಳ್ಳವನು ಯಾರು ?—ಎಂದು ತಿಳಿಯಲಿಚ್ಛಿಸಿದರೆ, ಅದಕ್ಕೆ ಬದಲಾಗಿ ಇಂತಹ ಅಕರ್ತೃತ್ವಾನುಸಂಧಾನದ ಪ್ರಯೋಜನವು ಹೇಳಲ್ಪಡುತ್ತದೆ.)

**ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ ನ ಲಿಪ್ಯತೇ ।**
**ಹತ್ವಾಽಪಿ ಸ ಇಮಾಁ ಲೋಕಾಁ ನ ಹನ್ತಿ ನ ನಿಬಧ್ಯತೇ ॥ ೧೭ ॥**

(ಪರಮಪುರುಷನೇ ಕರ್ತೃವೆಂಬ ಅನುಸಂಧಾನದಿಂದ) ಯಾವನ ಮನೋವೃತ್ತಿ ವಿಶೇಷವು ಕರ್ತೃತ್ವಾಭಿಮಾನವಿಲ್ಲದುದೋ ಯಾವನ ಬುದ್ಧಿಯು (ಕರ್ಮ ಮತ್ತು ಅದರ ಫಲಗಳಲ್ಲಿ) ಸಂಗವಿಲ್ಲದುದೋ ಅವನು (ಯುದ್ಧದಲ್ಲಿ) ಈ ಎಲ್ಲ ಲೋಕಗಳನ್ನೂ (ಭೀಷ್ಮಾದಿಗಳನ್ನು ಮಾತ್ರವೇ ಅಲ್ಲ) ಕೊಂದೂ ಕೊಲ್ಲುವುದಿಲ್ಲ, ಆ ಕರ್ಮದಿಂದ ಕಟ್ಟಲ್ಪಡುವುದಿಲ್ಲ.

(ಸಂಗತಿ : ಈ ಅಕರ್ತೃತ್ವಾದ್ಯನುಸಂಧಾನವೆಲ್ಲವೂ ಸತ್ತ್ವಗುಣದ ವೃದ್ಧಿಯಿಂದಲೇ ಉಂಟಾಗುವುದರಿಂದ ಸತ್ತ್ವಗುಣವನ್ನೇ ಅಂಗೀಕರಿಸ ಬೇಕೆಂದು ಜ್ಞಾಪಿಸುವುದಕ್ಕಾಗಿ, ಕರ್ಮದಲ್ಲಿ ಸತ್ತ್ವಾದಿಗುಣಗಳಿಂದ ಏರ್ಪಟ್ಟ ವ್ಯತ್ಯಾಸವನ್ನು ವಿಸ್ತಾರವಾಗಿ ನಿರೂಪಿಸಲಿರುವವನಾಗಿ, ಮೊದಲು ಕರ್ಮವಿಧಿಗಳ ಪ್ರಕಾರವನ್ನು ಹೇಳುತ್ತಾನೆ.)

**ಜ್ಞಾನಂ ಜ್ಞೇಯಂ ಪರಿಜ್ಞಾತಾ ತ್ರಿವಿಧಾ ಕರ್ಮಚೋದನಾ ।**
**ಕರಣಂ ಕರ್ಮ ಕರ್ತೇತಿ ತ್ರಿವಿಧಃ ಕರ್ಮಸಂಗ್ರಹಃ ॥ ೧೮ ॥**

ಕರ್ಮಗಳ ವಿಷಯವಾದ ವಿಧಿಯು ಕರ್ತವ್ಯ, ಕರ್ಮವಿಷಯಕ ಜ್ಞಾನ, ಕರ್ತವ್ಯಕರ್ಮ, ಅದನ್ನು ಅರಿಯುವ ಪುರುಷನು, (ಎಂದು) ಮೂರು ವಿಧ. (ಜ್ಞೇಯವಾದ) ಕರ್ಮವೂ ಸಾಧನಭೂತವಾದ ದ್ರವ್ಯ, (ಯಾಗಾದಿ) ಕರ್ಮ, ಅದನ್ನು ಅನುಷ್ಠಿಸುವವನು ಎಂದು ಮೂರುಬಗೆ ಯಾಗಿ ಸಂಗೃಹೀತವಾಗಿದೆ.

(ಟಿಪ್ಪಣಿ : ಇಲ್ಲಿ ನಡುವೆ ಕರ್ಮವಿಧಿಯ ಪ್ರಕಾರವನ್ನು ಹೇಳಿರು

ವುದು ಆದಕ್ಕೆ ಸಂಬಂಧಪಟ್ಟ ಜ್ಞಾನಾದಿಗಳೂ ಸತ್ತ್ವಾದಿಗುಣಗಳಿಂದ ಮೂರುಬಗೆಗಳೆಂಬುದನ್ನು ವಿಸ್ತರಿಸುವುದಕ್ಕಾಗಿ.)

**ಜ್ಞಾನಂ ಕರ್ಮ ಚ ಕರ್ತಾ ಚ ತ್ರಿಧೈವ ಗುಣಭೇದತಃ ।**
**ಪ್ರೋಚ್ಯತೇ ಗುಣಸಂಖ್ಯಾನೇ ಯಥಾವತ್ ಶೃಣು ತಾನ್ಯಪಿ॥೧೯॥**

ಕರ್ತವ್ಯ ಕರ್ಮವಿಷಯವಾದ ಜ್ಞಾನವೂ ಅನುಷ್ಠೀಯಮಾನವಾದ ಕರ್ಮವೂ ಅದರ ಅನುಷ್ಠಾತೃವೂ ಸತ್ತ್ವಾದಿಗುಣಭೇದದಿಂದ, ಗುಣಗಳ ಕಾರ್ಯವನ್ನು ಗಣನೆಮಾಡುವಾಗ, ಮೂರುಬಗೆಯೆಂದು ಹೇಳಿದೆ. ಅವು ಗಳನ್ನೂ ಸರಿಯಾಗಿ ಕೇಳು.

**ಸರ್ವಭೂತೇಷು ಯೇನೈಕಂ ಭಾವಮವ್ಯಯಮೀಕ್ಷತೇ ।**
**ಅವಿಭಕ್ತಂ ವಿಭಕ್ತೇಷು ತಜ್ಜ್ಞಾನಂ ವಿದ್ಧಿ ಸಾತ್ತ್ವಿಕಂ ॥ ೨೦ ॥**

ಯಾವ ಜ್ಞಾನದಿಂದ, (ಬ್ರಾಹ್ಮಣಾದಿ ರೂಪದಿಂದ) ಬೇರೆಬೇರೆ ಯಾಗಿರುವ ಎಲ್ಲ ಪ್ರಾಣಿಗಳಲ್ಲಿಯೂ, ವ್ಯತ್ಯಾಸಗಳಿಲ್ಲದ ನಿರ್ವಿಕಾರವಾದ ಒಂದು (ಆತ್ಮವೆಂಬ) ವಸ್ತುವನ್ನು ಕಾಣುತ್ತಾನೆಯೋ ಆ ಜ್ಞಾನವು ಸತ್ತ್ವ ಗುಣದಿಂದ ಉಂಟಾದುದೆಂದು ತಿಳಿ.

**ಪೃಥಕ್ತ್ವೇನ ತು ಯಜ್ಜ್ಞಾನಂ ನಾನಾಭಾವಾನ್ ಪೃಥಗ್ವಿಧಾನ್ ।**
**ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಂ ॥೨೧॥**

ಬ್ರಾಹ್ಮಣಾದ್ಯಾಕಾರಭೇದ ಮತ್ತು ಬಿಳುಪು, ದೀರ್ಘ ಮುಂತಾದ ಭೇದಗಳಿಂದ ಬಹುಪ್ರಕಾರವಾಗಿರುವ) ಎಲ್ಲ ಪ್ರಾಣಿಗಳಲ್ಲಿಯು ಆತ್ಮವಸ್ತು ಗಳನ್ನೂ ನಾನಾವಿಧವಾಗಿ (ಕರ್ಮಾಧಿಕಾರ ವೇಳೆಯಲ್ಲಿ) ತಿಳಿಯುವ ಜ್ಞಾನವು ರಜೋಗುಣದಿಂದ ಉಂಟಾದುದೆಂದು ತಿಳಿ.

**ಯತ್ತು ಕೃತ್ಸ್ನವದೇಕಸ್ಮಿನ್ ಕಾರ್ಯೇ ಸಕ್ತಮಹೇತುಕಂ ।**
**ಅತತ್ತ್ವಾರ್ಥವದಲ್ಪಂ ಚ ತತ್ತಾಮಸಮುದಾಹೃತಂ ॥ ೨೨ ॥**

ಪ್ರೇತ ಭೂತಗಣಾದ್ಯಾರಾಧನರೂಪವೂ ಅತ್ಯಲ್ಪಫಲವೂ ಆದ (ತನ್ನ) ಕಾರ್ಯವೊಂದನ್ನೇ ಸರ್ವಸ್ವವನ್ನಾಗಿ ತಿಳಿದು (ವಸ್ತುತಃ ಅದು ಹಾಗಲ್ಲವಾದುದರಿಂದ) ನಿಷ್ಕಾರಣವಾಗಿ ಯಾವ ಜ್ಞಾನವು ಆದರಲ್ಲಿ ತೊಡಗುವುದೋ ಮತ್ತು (ಆತ್ಮನಲ್ಲಿ ವ್ಯತ್ಯಾಸ ಭ್ರಮದಿಂದ) ತತ್ತ್ವಾರ್ಥ

ವಿಲ್ಲದ್ದೂ, ಅಲ್ಪವೂ ಆದುದೋ ಆ ಜ್ಞಾನವು ತಮೋಗುಣದಿಂದ ಉಂಟಾದುದೆನಿಸಿದೆ.

(ಸಂಗತಿ: ಹೀಗೆ ಕರ್ಮಾಧಿಕಾರವೇಳೆಯಲ್ಲಿ ಅಧಿಕಾರಿಯಾದ ಜೀವಾತ್ಮನ ಕರ್ತವ್ಯ ಕರ್ಮವಿಷಯವಾದ ಜ್ಞಾನವು ಸತ್ತ್ವಾದಿ ಗುಣ ಭೇದದಿಂದ ಮೂರು ವಿಧವಾದುದೆಂದು ಹೇಳಿ, ಅನುಷ್ಠೇಯವಾದ ಕರ್ಮವೂ ಸತ್ತ್ವಾದಿ ಗುಣಭೇದದಿಂದ ಮೂರುವಿಧವೆಂದು ಮುಂದೆ ಹೇಳುತ್ತಾನೆ.)

**ನಿಯತಂ ಸಙ್ಗರಹಿತಮರಾಗದ್ವೇಷತಃ ಕೃತಂ ।**
**ಅಫಲಪ್ರೇಪ್ಸುನಾ ಕರ್ಮ ಯತ್ತತ್ಸಾತ್ತ್ವಿಕಮುಚ್ಯತೇ ॥ ೨೩ ॥**

ಕರ್ತೃತ್ವಾದ್ಯಭಿಮಾನವಿಲ್ಲದೆ, ಕೀರ್ತಿ ರಾಗ ಮತ್ತು ಅಕೀರ್ತಿ ದ್ವೇಷಗಳನ್ನು ಬಿಟ್ಟು, ಫಲೇಚ್ಛೆಯನ್ನು ತೊರೆದು, ಮಾಡಿದ ನಿಯತ ಸ್ವವರ್ಣಾಶ್ರಮೋಚಿತ) ಕರ್ಮವು ಸಾತ್ತ್ವಿಕವೆನಿಸುತ್ತದೆ.

**ಯತ್ತು ಕಾಮೇಪ್ಸುನಾ ಕರ್ಮ ಸಾಹಙ್ಕಾರೇಣ ವಾ ಪುನಃ ।**
**ಕ್ರಿಯತೇ ಬಹುಲಾಯಾಸಂ ತದ್ರಾಜಸಮುದಾಹೃತಂ ॥ ೨೪ ॥**

ಫಲೇಚ್ಛೆ ಮತ್ತು ಕರ್ತೃತ್ವಾಭಿಮಾನಗಳಿಂದ ಕೂಡಿದವನು ಮಾಡುವ ಬಹಳ ಆಯಾಸವನ್ನೀಯುವ ಕರ್ಮವು (ಬಹುಲಾಯಾಸಕರವಾದ ಈ ಕಾರ್ಯವನ್ನು ನಾನೇ ಮಾಡುತ್ತೇನೆಯೆಂಬ ಅಭಿಮಾನದಿಂದ ಮಾಡುವ ಕರ್ಮವು) ರಾಜಸವೆನಿಸುವುದು.

**ಅನುಬಂಧಂ ಕ್ಷಯಂ ಹಿಂಸಾಂ ಅನಪೇಕ್ಷ್ಯ ಚ ಪೌರುಷಂ ।**
**ಮೋಹಾದಾರಭ್ಯತೇ ಕರ್ಮ ಯತ್ತತ್ತಾಮಸಮುಚ್ಯತೇ ॥ ೨೫ ॥**

ಮುಂದೆ ಬರಬಹುದಾದ ಕಷ್ಟವನ್ನೂ, ಹಣದ ಖರ್ಚನ್ನೂ, ಪ್ರಾಣಿ ಪೀಡೆಯನ್ನೂ ತನ್ನ ಕರ್ಮಸಮಾಪನ ಸಾಮರ್ಥ್ಯವನ್ನೂ ಲಕ್ಷಿಸದೆ ಪರಮ ಪುರುಷನು ಕರ್ತೃವೆಂದರಿಯದೆ, (ಮನುಷ್ಯನು) ಆರಂಭಿಸುವ ಕರ್ಮವು ತಾಮಸವೆನಿಸುವುದು.

**ಮುಕ್ತಸಙ್ಗೋಽನಹಂವಾದೀ ಧೃತ್ಯುತ್ಸಾಹಸಮನ್ವಿತಃ ।**
**ಸಿದ್ಧ್ಯಸಿದ್ಧ್ಯೋರ್ನಿರ್ವಿಕಾರಃ ಕರ್ತಾ ಸಾತ್ತ್ವಿಕ ಉಚ್ಯತೇ ॥೨೬॥**

ಫಲೇಚ್ಛೆಯಿಲ್ಲದ, ಕರ್ತೃತ್ವಾಭಿಮಾನ ರಹಿತನಾದ, ಧೃತಿ (ಆರಂಭಿಸಿದ ಕಾರ್ಯವು ಮುಗಿಯುವವರಿಗೂ ಅನಿವಾರ್ಯವಾಗಿ ಒದಗುವ ದುಃಖವನ್ನು ತಡೆಯುವುದು) ಉತ್ಸಾಹಗಳಿಂದ ಕೂಡಿದ, ಫಲದ ಸಿದ್ಧಿ ಅಥವಾ ಅಸಿದ್ಧಿಯಲ್ಲಿ ಅವಿಕೃತಚಿತ್ತನಾಗಿರುವ ಕರ್ತೃವು ಸಾತ್ತ್ವಿಕನೆನಿಸುವನು.

**ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ ।**
**ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ ॥ ೨೭ ॥**

ಯಶಸ್ಸಿನಲ್ಲಿ ಆಸೆಯುಳ್ಳ, ಕರ್ಮಫಲವನ್ನು ಇಚ್ಛಿಸುವ, ಕರ್ಮಕ್ಕೆ ಬೇಕಾದಷ್ಟು ದುಡ್ಡನ್ನು ಖರ್ಚುಮಾಡುವ ಸ್ವಭಾವವಿಲ್ಲದ, ಪರರನ್ನು ಪೀಡಿಸಿ ಕರ್ಮಮಾಡುವ, ಕರ್ಮಕ್ಕೆ ಬೇಕಾದ ಶುದ್ಧಿಯಿಲ್ಲದ, (ಸಿದ್ಧ್ಯಸಿದ್ಧಿಗಳಲ್ಲಿ) ಹರ್ಷಶೋಕಗಳುಳ್ಳ ಕರ್ತೃವು ರಾಜಸನೆನಿಸುವನು.

**ಅಯುಕ್ತಃ ಪ್ರಾಕೃತಃ ಸ್ತಬ್ಧಃ ಶಠೋ ನೈಕೃತಿಕೋಽಲಸಃ ।**
**ವಿಷಾದೀ ದೀರ್ಘಸೂತ್ರೀ ಚ ಕರ್ತಾ ತಾಮಸ ಉಚ್ಯತೇ ॥ ೨೮ ॥**

ಶಾಸ್ತ್ರೀಯಕರ್ಮಗಳಿಗೆ ಯೋಗ್ಯತೆಯಿಲ್ಲದ, ವಿದ್ಯೆಯಿಲ್ಲದ, ಕರ್ಮಗಳನ್ನು ಆರಂಭಿಸುವ ಸ್ವಭಾವವಿಲ್ಲದ, ಗೂಢವಾಗಿ ವಿಪ್ರಿಯವನ್ನು ಮಾಡುವ, ವಂಚನಪರನೂ, ಸೋಮಾರಿಯೂ ದುಃಖಪಡುವ ಸ್ವಭಾವದವನೂ ಇತರರಿಗೆ ದೀರ್ಘಕಾಲವರ್ತಿಯಾದ ಅನರ್ಥವನ್ನು ಪರ್ಯಾಲೋಚಿಸುವವನೂ ಆದ ಕರ್ತೃವು ತಾಮಸನೆನಿಸುತ್ತಾನೆ.

(ಸಂಗತಿ : ಹೀಗೆ, ಸತ್ತ್ವಾದಿಗುಣಭೇದದಿಂದ, ಕರ್ತವ್ಯಕರ್ಮವಿಷಯವಾದ ಜ್ಞಾನವೂ, ಕರ್ತವ್ಯವಾದ ಕರ್ಮವೂ, ಅದನ್ನು ಅನುಷ್ಠಿಸುವವನೂ ಮೂರುತೆರನೆಂದು ಹೇಳಿಯಾಯಿತು. ಈಗ, ಸರ್ವತತ್ತ್ವ ಮತ್ತು ಸರ್ವಪುರುಷಾರ್ಥಗಳ ನಿಶ್ಚಯಹೊಂದಿರುವ ಬುದ್ಧಿಯೂ ಮತ್ತು ಧೃತಿಯೂ ಸಹ ಸತ್ತ್ವಾದಿಗುಣಭೇದದಂತೆ ಮೂರುತೆರನೆಂದು ಹೇಳುತ್ತಾನೆ.)

**ಬುದ್ಧೇರ್ಭೇದಂ ಧೃತೇಶ್ಚೈವ ಗುಣತಸ್ತ್ರಿವಿಧಂ ಶೃಣು ।**
**ಪ್ರೋಚ್ಯಮಾನಮಶೇಷೇಣ ಪೃಥಕ್ತ್ವೇನ ಧನಂಜಯ ॥ ೨೯ ॥**

ಎಲೈ ಧನಂಜಯನೆ! ಸತ್ತ್ವಾದಿಗುಣಭೇದಕ್ಕೆ ತಕ್ಕಂತೆ ಬುದ್ಧಿ (ವಿವೇಕಯುತವಾದ ನಿಶ್ಚಯರೂಪಜ್ಞಾನ) ಮತ್ತು ಧೃತಿ (ಆರಂಭಿಸಿದ

ಕಾರ್ಯವನ್ನು ವಿಘ್ನಗಳಿಷ್ಟುಬಂದರೂ, ಬಿಡದಿರುವುದು) ಗಳ ಭೇದವೂ ಮೂರುತೆರನೆಂದು ಬೇರೆಬೇರೆಯಾಗಿಯೂ ನಿಶ್ಶೇಷವಾಗಿಯೂ ಹೇಳು ತ್ತೇನೆ, ಅದನ್ನು ಕೇಳು.

**ಪ್ರವೃತ್ತಿಂ ಚ ನಿವೃತ್ತಿಂ ಚ ಕಾರ್ಯಾಕಾರ್ಯೇ ಭಯಾಭಯೇ ।**
**ಬಂಧಂ ಮೋಕ್ಷಂ ಚ ಯಾ ವೇತ್ತಿ ಬುದ್ಧಿಸ್ಸಾ ಪಾರ್ಥ ಸಾತ್ತ್ವಿಕೀ ॥**

ಅಭ್ಯುದಯಸಾಧನ ಮತ್ತು ಮೋಕ್ಷಸಾಧನಗಳಾದ ಧರ್ಮಗಳನ್ನೂ (ದೇಶ, ಕಾಲ, ಅವಸ್ಥಾವಿಶೇಷಗಳಿಗೆ ತಕ್ಕಂತೆ) ಮಾಡಲು ಯೋಗ್ಯ ಮತ್ತು ಅಯೋಗ್ಯಗಳಾದ ಕಾರ್ಯಗಳನ್ನೂ, ಭಯ ಮತ್ತು ಅಭಯ ಗಳನ್ನೂ (ಶಾಸ್ತ್ರಾತಿವೃತ್ತಿ ಭಯಸ್ಥಾನ, ಶಾಸ್ತ್ರಾನುವೃತ್ತಿ ಅಭಯಸ್ಥಾನ) ಸಂಸಾರ ಮತ್ತು ಮೋಕ್ಷಗಳನ್ನೂ(ಯಥಾವತ್ತಾಗಿ) ತಿಳಿಯುವ ಬುದ್ಧಿಯು ಸಾತ್ತ್ವಿಕವಾದುದು.

**ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ ।**
**ಅಯಥಾವತ್ಪ್ರಜಾನಾತಿ ಬುದ್ಧಿಸ್ಸಾ ಪಾರ್ಥರಾಜಸೀ ॥ ೩೧ ॥**

ಯಾವ ಬುದ್ಧಿಯಿಂದ (ಹಿಂದೆ ಹೇಳಿದ) ಧರ್ಮ ಮತ್ತು ಅಧರ್ಮ ಗಳನ್ನೂ ಕಾರ್ಯ ಮತ್ತು ಅಕಾರ್ಯಗಳನ್ನೂ ಸರಿಯಾಗಿ ತಿಳಿಯನೋ ಆ ಬುದ್ಧಿಯು ರಾಜಸವು.

**ಅಧರ್ಮಂ ಧರ್ಮಮಿತಿ ಯಾ ಮನ್ಯತೇ ತಮಸಾಽವೃತಾ ।**
**ಸರ್ವಾರ್ಥಾನ್ವಿಪರೀತಾಂಶ್ಚ ಬುದ್ಧಿಸ್ಸಾ ಪಾರ್ಥ ತಾಮಸೀ ॥ ೩೨ ॥**

ಯಾವ ಬುದ್ಧಿಯು ತಮೋಗುಣದಿಂದ ಮುಚ್ಚಲ್ಪಟ್ಟಿದಾಗಿ ಅಧರ್ಮವನ್ನು ಧರ್ಮವೆಂದೂ ಮತ್ತು ಎಲ್ಲ ವಸ್ತುಗಳನ್ನೂ ವಿರುದ್ಧ ವಾಗಿಯೂ ಗ್ರಹಿಸುವುದೋ ಆ ಬುದ್ಧಿಯು ತಾಮಸವು.

**ಧೃತ್ಯಾ ಯಯಾ ಧಾರಯತೇ ಮನಃಪ್ರಾಣೇಂದ್ರಿಯಕ್ರಿಯಾಃ ।**
**ಯೋಗೇನಾವ್ಯಭಿಚಾರಿಣ್ಯಾ ಧೃತಿಸ್ಸಾಪಾರ್ಥಸಾತ್ತ್ವಿಕೀ ॥ ೩೩ ॥**

ಅನನ್ಯ ಭಕ್ತಿಯೋಗಕ್ಕೋಸ್ಕರ ಯಾವ ಧೃತಿ (ಧೈರ್ಯ) ಯಿಂದ ಮನಸ್ಸು, ಪ್ರಾಣವಾಯು, ಇಂದ್ರಿಯಗಳು—ಇವುಗಳ ಕಾರ್ಯಗಳನ್ನು ಧರಿಸುವನೋ ಆ ಧೃತಿಯು ಸಾತ್ತ್ವಿಕವು.

**ಯಯಾ ತು ಧರ್ಮಕಾಮಾರ್ಥಾನ್ ಧೃತ್ಯಾ ಧಾರಯತೇಽರ್ಜುನ ।**
**ಪ್ರಸಙ್ಗೇನ ಫಲಾಕಾಂಕ್ಷೀ ಧೃತಿಸ್ಸಾ ಪಾರ್ಥ ರಾಜಸೀ ॥ ೩೪ ॥**

ಫಲದಲ್ಲಿ ಆಸೆಯುಳ್ಳವನು ಅಧಿಕವಾದ ಆಸೆಯಿಂದ, ಧರ್ಮ, ಕಾಮ ಮತ್ತು ಅರ್ಥಗಳನ್ನು (ಇವುಗಳಿಗೆ ಸಾಧನವಾದ ಮನಃಪ್ರಾಣೇಂದ್ರಿಯ ಕ್ರಿಯೆಗಳನ್ನು) ಯಾವಧೃತಿಯಿಂದ ಧರಿಸುವನೋ ಆ ಧೃತಿಯು ರಾಜಸವು.

**ಯಯಾ ಸ್ವಪ್ನಂ ಭಯಂ ಶೋಕಂ ವಿಷಾದಂ ಮದಮೇವಚ ।**
**ನ ವಿಮುಂಚತಿ ದುರ್ಮೇಧಾ ಧೃತಿಸ್ಸಾ ಪಾರ್ಥ ತಾಮಸೀ ॥ ೩೫ ॥**

ಯಾವ ಧೃತಿಯಿಂದ ನಿದ್ರೆ, ಭಯ, ಶೋಕ, ವ್ಯಸನ, ಮದ – ಇವುಗಳನ್ನು (ಇವುಗಳನ್ನೀಯುವ ವಿಷಯಗಳು ಮತ್ತು ಅವಕ್ಕೆ ಸಾಧನವಾದ ಮನಃಪ್ರಾಣಾದಿ ಕ್ರಿಯೆಗಳನ್ನು) ದುರ್ಬುದ್ಧಿಯುಳ್ಳ ಮನುಷ್ಯನು ಬಿಡುವುದಿಲ್ಲವೋ—ಆ ಧೃತಿಯು ತಾಮಸವು.

**ಸುಖಂ ತ್ವಿದಾನೀಂ ತ್ರಿವಿಧಂ ಶ್ರುಣು ಮೇ ಭರತರ್ಷಭ ।**
**ಅಭ್ಯಾಸಾದ್ರಮತೇ ಯತ್ರ ದುಃಖಾನ್ತಂ ಚ ನಿಗಚ್ಛತಿ ॥ ೩೬ ॥**

(ಮೇಲೆ ಹೇಳಿದ ಜ್ಞಾನ, ಕರ್ಮ, ಕರ್ತೃ ಮುಂತಾದುವು ಯಾವುದಕ್ಕೆ ಅಂಗಗಳೋ) (ಮತ್ತು) ಯಾವುದರ ಅಭ್ಯಾಸದಿಂದ ತೃಪ್ತಿಪಡುವನೋ ಅಲ್ಲದೆ, ನಿಖಿಲ ಸಾಂಸಾರಿಕ ದುಃಖದ ಕೊನೆಯನ್ನೂ ಹೊಂದುವನೋ ಅಂತಹ ಮೂರು ವಿಧದ ಸುಖವನ್ನು ಈಗ ನನ್ನಿಂದ ಕೇಳು.

(ಸಂಗತಿ : ಇದನ್ನೇ ವಿಶದವಾಗಿ ಹೇಳುತ್ತಾನೆ.)

**ಯತ್ತದಗ್ರೇ ವಿಷಮಿವ ಪರಿಣಾಮೇಽಮೃತೋಪಮಂ ।**
**ತತ್ಸುಖಂ ಸಾತ್ತ್ವಿಕಂ ಪ್ರೋಕ್ತಮಾತ್ಮಬುದ್ಧಿಪ್ರಸಾದಜಂ ॥ ೩೭ ॥**

ಯಾವುದು ಆರಂಭದಲ್ಲಿ (ಯೋಗೋಪಕ್ರಮವೇಳೆಯಲ್ಲಿ, ಬಹ್ವಾಯಾಸ ಸಾಧ್ಯವಾದುದರಿಂದ) ವಿಷದಂತೆಯೂ ಪರಿಣಾಮದಲ್ಲಿ (ಅಭ್ಯಾಸ ಬಲದಿಂದ ಪರಿಶುದ್ಧವಾದ ಆತ್ಮಸ್ವರೂಪವು ಪ್ರಕಾಶಿಸಿದ ಮೇಲೆ) ಅಮೃತದಂತೆಯೂ ಇರುವುದೋ, ಜೀವಾತ್ಮವಿಷಯಕಜ್ಞಾನ ಪ್ರಸನ್ನತೆಯಿಂದ ಉಂಟಾಗುವ ಆ ಸುಖವು ಸಾತ್ತ್ವಿಕವೆನಿಸುವುದು.

**ವಿಷಯೇಂದ್ರಿಯಸಂಯೋಗಾತ್ ಯತ್ತದಗ್ರೇಽಮೃತೋಪಮಂ ।**
**ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ ಸ್ಮೃತಂ ॥ ೩೮ ॥**

ಯಾವುದು ಆರಂಭದಲ್ಲಿ (ಅನುಭವವೇಳೆಯಲ್ಲಿ) ವಿಷಯಗಳ ಮತ್ತು ಇಂದ್ರಿಯಗಳ (ಪರಸ್ಪರ) ಸಂಯೋಗದಿಂದ, ಅಮೃತದಂತೆಯೂ, ಪರಿಣಾಮದಲ್ಲಿ (ವಿಪಾಕದಶೆಯಲ್ಲಿ ವಿಷಯಗಳು ಸುಖವಾಗಿ ತೋರುವುದಕ್ಕೆ ಕಾರಣವಾದ ಹಸಿವು ಮುಂತಾದುದು ನೀಗಿದ ಮೇಲೆ ನರಕಾದಿಗಳಿಗೆ ನಿಮಿತ್ತವಾಗುವುದರಿಂದ) ವಿಷದಂತೆಯೂ ಇರುವುದೋ ಆ ಸುಖವು ರಾಜಸವೆನಿಸುವುದು.

**ಯದಗ್ರೇ ಚಾನುಬಂಧೇ ಚ ಸುಖಂ ಮೋಹನಮಾತ್ಮನಃ ।**
**ನಿದ್ರಾಲಸ್ಯಪ್ರಮಾದೋತ್ಥಂ ತತ್ತಾಮಸಮುದಾಹೃತಂ ॥ ೩೯ ॥**

ಯಾವುದು ಆರಂಭದಲ್ಲಿಯೂ ಪರಿಣಾಮದಲ್ಲಿಯೂ (ಅನುಭವವೇಳೆ ಮತ್ತು ವಿಪಾಕಗಳಲ್ಲಿ) ತನಗೆ ಮೋಹವನ್ನುಂಟುಮಾಡತಕ್ಕುದೋ, ನಿದ್ರೆ, ಸೋಮಾರಿತನ, ಅಜಾಗರೂಕತೆಗಳಿಂದ ಉಂಟಾದ ಆ ಸುಖವು ತಾಮಸವೆನಿಸುತ್ತದೆ.

(ಟಿಪ್ಪಣಿ: ಇಲ್ಲಿ ಮೋಹವೆಂದರ ವಸ್ತುವು ಯಥಾವತ್ತಾಗಿ ಪ್ರಕಾಶಿಸದಿರುವುದು. ನಿದ್ರಾದಿಗಳು ಅನುಭವವೇಳೆಯಲ್ಲಿಯೂ ಮೋಹಕ್ಕೆ ಕಾರಣಗಳೆಂಬುದು ಸ್ಪಷ್ಟವಾಗಿದೆ. ಆದುದರಿಂದ ಮುಮುಕ್ಷುವು ರಜಸ್ತಮೋಗುಣಗಳನ್ನು ಅಡಗಿಸಿ ಸತ್ತ್ವಗುಣವನ್ನೇ ಅಂಗೀಕರಿಸಬೇಕು.)

(ಸಂಗತಿ: ಪ್ರಾಕೃತಗುಣಗಳನ್ನು ದಾಟಿರುವವನೂ ಶುದ್ಧಸತ್ತ್ವಮಯನೂ ಆದ ಭಗವಂತನನ್ನು ಸೇರುವುದೆಂಬ ಮೋಕ್ಷಕ್ಕೆ ಮುಂಚೆ, ನಿಯತವಾದ ದೇಶಕಾಲ ಫಲಭೋಗಗಳಿಂದ ಉಚ್ಚ ನೀಚರಾದ ಜೀವಾತ್ಮರೆಲ್ಲರಿಗೂ ಮೇಲೆಹೇಳಿದ ಸತ್ತ್ವಾದಿಗುಣಗಳು ನಿಶ್ಶೇಷವಾಗಿ ಬಿಡಲಸಾಧ್ಯವೆಂದು ಹೇಳಿ ಈ ಗುಣಕಾರ್ಯಗಳ ಸಂದರ್ಭವನ್ನು ನಿಗಮನಮಾಡುತ್ತಾನೆ.)

**ನ ತದಸ್ತಿ ಪೃಥಿವ್ಯಾಂ ವಾ ದಿವಿ ದೇವೇಷು ವಾ ಪುನಃ ।**
**ಸತ್ತ್ವಂ ಪ್ರಕೃತಿಜೈರ್ಮುಕ್ತಂ ಯದೇಭಿಸ್ಸ್ಯಾತ್ತ್ರಿಭಿರ್ಗುಣೈಃ ॥**

ಭೂಮಿಯಲ್ಲಿಯಾಗಲಿ ಆಕಾಶದಲ್ಲಿಯಾಗಲಿ, ಮತ್ತೆ ದೇವತೆಗಳಲ್ಲಿಯಾಗಲಿ, ಪ್ರಕೃತಿಯಲ್ಲಿ ಉಂಟಾದ ಈ ಮೂರು ಗುಣಗಳಿಂದ ಬಿಡಲ್ಪಟ್ಟ ಪ್ರಾಣಿಯು ಯಾವುದೂ ಇರುವುದಿಲ್ಲ.

(ಸಂಗತಿ: "ತ್ಯಾಗೇನೈಕೇ ಅಮೃತತ್ವಮಾನಶುಃ" (ಅಂದರೆ, ಕೆಲವರು ತ್ಯಾಗದಿಂದ ಮೋಕ್ಷಪಡೆದರು) ಎಂಬುದೇ ಮುಂತಾದುವುಗಳಲ್ಲಿ ಮೋಕ್ಷಕ್ಕೆ ಸಾಧನವಾಗಿ ನಿರ್ದಿಷ್ಟವಾಗಿರುವ ತ್ಯಾಗವು ಸಂನ್ಯಾಸಕ್ಕಿಂತ ಬೇರೆಯಲ್ಲ. ಅದಾದರೋ, ಕರ್ಮಗಳನ್ನು ಮಾಡುತ್ತಿರುವಾಗಲೇ ಅವುಗಳಲ್ಲಿ ಕರ್ತೃತ್ವ ತ್ಯಾಗದಿಂದ ಉಂಟಾಗುವ ಫಲ ಮತ್ತು ಕರ್ಮಗಳ ತ್ಯಾಗವು. ಕರ್ತೃತ್ವ ತ್ಯಾಗವೂ ಪರಮಪುರುಷನಲ್ಲಿ ಆ ಕರ್ತೃತ್ವವನ್ನು ಅನುಸನ್ಧಾನ ಮಾಡುವುದರಿಂದ ಎಂದೂ ಹೇಳಲಾಯಿತು. ಇದೆಲ್ಲಕ್ಕೂ ಸತ್ತ್ವಗುಣದ ವೃದ್ಧಿಯೇ ಕಾರಣವಾದುದರಿಂದ, ಸತ್ತ್ವಗುಣವನ್ನು ಅಂಗೀಕರಿಸತಕ್ಕುದೆಂದು ತಿಳಿಸುವುದಕ್ಕಾಗಿ, ಸತ್ತ್ವ, ರಜಸ್ಸು, ತಮಸ್ಸು ಇವುಗಳ ಕಾರ್ಯಭೇದವನ್ನೂ ವಿಸ್ತಾರವಾಗಿ ಹೇಳಿಯಾಯಿತು. ಈಗ, ಇಂತಹ ಮೋಕ್ಷಸಾಧನವಾದ ಕರ್ಮವು ಪರಮಪುರುಷನ ಆರಾಧನವೆಂಬುದನ್ನೂ, ಹಾಗೆ ಅನುಷ್ಠಿಸುವ ಕರ್ಮಕ್ಕೆ ಆ ಪರಮಪುರುಷನನ್ನು ಹೊಂದುವುದೇ ಪ್ರಯೋಜನವೆಂಬುದನ್ನೂ, ನಿರೂಪಿಸುವುದಕ್ಕಾಗಿ, ಬ್ರಾಹ್ಮಣರೇ ಮುಂತಾದ ಅಧಿಕಾರಿಗಳಿಗೆ ಅವರವರ ಸ್ವಭಾವದೊಡನೆ ಸೇರಿರುವ ಸತ್ತ್ವಾದಿ ಗುಣಗಳಲ್ಲಿಯು ಭೇದಗಳಿಂದ ಬೇರೆಬೇರೆಯಾಗಿರುವ ಜೀವನೋಪಾಯದೊಡನೆ ಕರ್ತವ್ಯವಾದ ಕರ್ಮಗಳ ಸ್ವರೂಪವನ್ನು ಹೇಳುತ್ತಾನೆ.)

**ಬ್ರಾಹ್ಮಣ ಕ್ಷತ್ರಿಯವಿಶಾಂ ಶೂದ್ರಾಣಾಂ ಚ ಪರಂತಪ ।**
**ಕರ್ಮಾಣಿ ಪ್ರವಿಭಕ್ತಾನಿ ಸ್ವಭಾವ ಪ್ರಭವೈರ್ಗುಣೈಃ ॥ ೪೧ ॥**

ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೂ ಮತ್ತು ಶೂದ್ರರಿಗೂ ಅವರವರ ಅನಾದಿ ಕರ್ಮದಿಂದ ಉಂಟಾದ (ಸತ್ತ್ವಾದಿ) ಗುಣಗಳಿಂದ ಕರ್ಮಗಳು ವಿಭಾಗಿಸಲ್ಪಟ್ಟವೆ.

**ಶಮೋ ದಮಸ್ತಪಶ್ಶೌಚಂ ಕ್ಷಾಂತಿರಾರ್ಜವಮೇವ ಚ ।**
**ಜ್ಞಾನಂ ವಿಜ್ಞಾನಮಾಸ್ತಿಕ್ಯಂ ಬ್ರಾಹ್ಮಂ ಕರ್ಮ ಸ್ವಭಾವಜಂ ॥**

ಶಮ (ಬಾಹ್ಯೇಂದ್ರಿಯನಿಗ್ರಹ), ದಮ (ಮನೋನಿಗ್ರಹ), ತಪಸ್ಸು (ಭೋಗ ಸಂಕೋಚನ ರೂಪವಾದ ಶಾಸ್ತ್ರಸಿದ್ಧಕಾಯಕ್ಲೇಶ), ಶೌಚ (ಶಾಸ್ತ್ರೀಯ ಕರ್ಮಾರ್ಹತೆ) ಕ್ಷಾನ್ತಿ (ಪರರಿಂದ ಪೀಡೆಯಾಗುತ್ತಿದ್ದರೂ ಚಿತ್ತವಿಕಾರಹೊಂದದಿರುವುದು), ಸರಳತೆ, ಜ್ಞಾನ (ಪರಾವರ ತತ್ತ್ವ ಯಾಥಾತ್ಮ್ಯಜ್ಞಾನ), ವಿಜ್ಞಾನ (ಪರತತ್ತ್ವ ವಿಷಯಕ ವಿಶೇಷ ಜ್ಞಾನ), ಆಸ್ತಿಕ್ಯ (ವೇದದಲ್ಲಿ ಹೇಳಿರುವುದೆಲ್ಲ ಸತ್ಯವೆಂಬ ಅಚಲವಾದ ನಿಶ್ಚಯ)— ಇವು ಬ್ರಾಹ್ಮಣನ ಸ್ವಭಾವಜನ್ಯ ಕರ್ಮಗಳು.

**ಶೌರ್ಯಂ ತೇಜೋಧೃತಿರ್ದಾಕ್ಷ್ಯಂ ಯುದ್ಧೇ ಚಾಪ್ಯಪಲಾಯನಂ ।**
**ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ ಸ್ವಭಾವಜಂ ॥ ೪೩ ॥**

ಶೌರ್ಯ (ನಿರ್ಭಯವಾಗಿ ಯುದ್ಧದಲ್ಲಿ ಪ್ರವೇಶಿಸುವ ಸಾಮರ್ಥ್ಯ), ತೇಜಸ್ಸು (ಶತ್ರುಗಳಿಂದ ಅವಮಾನಗೊಳಿಸಲ್ಪಡಲು ಅಸ್ಪದವಿಲ್ಲದಿರುವುದು) ಧೈರ್ಯ, ದಕ್ಷತೆ, ಮರಣ ನಿಶ್ಚಯವಿದ್ದಾಗಲೂ ಯುದ್ಧದಲ್ಲಿ ಹಿಂತಿರುಗದಿರುವುದು, ದಾನ, ಸಕಲಜನನಿಯಮನಸಾಮರ್ಥ್ಯ,—ಇವು ಕ್ಷತ್ರಿಯರ ಸ್ವಭಾವಜನ್ಯ ಕರ್ಮವು.

**ಕೃಷಿಗೋರಕ್ಷವಾಣಿಜ್ಯಂ ವೈಶ್ಯಂ ಕರ್ಮ ಸ್ವಭಾವಜಂ ।**
**ಪರಿಚರ್ಯಾತ್ಮಕಂ ಕರ್ಮ ಶೂದ್ರಸ್ಯಾಪಿ ಸ್ವಭಾವಜಂ ॥ ೪೪ ॥**

ಕೃಷಿ, ಗೋರಕ್ಷಣೆ, ವ್ಯಾಪಾರ—ಇವು ವೈಶ್ಯರ ಸ್ವಭಾವದಲ್ಲಿ ಏರ್ಪಟ್ಟ ಕರ್ಮವು. ಮೇಲೆ ಹೇಳಿದ ಮೂರು ವರ್ಣದವರ ಸೇವೆಯು ಶೂದ್ರನ ಸ್ವಭಾವಜನ್ಯ ಕರ್ಮವು.

(ಸಂಗತಿ : ಮೋಕ್ಷಶಾಸ್ತ್ರದಲ್ಲಿ ವರ್ಣಧರ್ಮದ ವಿಭಾಗವನ್ನು ಹೇಳುವುದೇಕೆ?—ಎಂದರೆ ಹೇಳುತ್ತಾನೆ ;)

**ಸ್ವೇ ಸ್ವೇ ಕರ್ಮಣ್ಯಭಿರತಸ್ಸಂಸಿದ್ಧಿಂ ಲಭತೇ ನರಃ ।**
**ಸ್ವಕರ್ಮನಿರತಸ್ಸಿದ್ಧಿಂ ಯಥಾ ವಿಂದತಿ ತಚ್ಛೃಣು ॥ ೪೫ ॥**

ಮನುಷ್ಯನು ತನ್ನ ತನ್ನ ಕರ್ಮದಲ್ಲಿ ನಿರತನಾಗಿ ಪರಮಪದವನ್ನು ಪಡೆಯುವನು ತನ್ನ ತನ್ನ ಕರ್ಮದಲ್ಲಿ ನಿರತನಾದವನು ಸಿದ್ಧಿಯನ್ನು ಹೇಗೆ ಪಡೆಯುವನೆಂಬುದನ್ನು ಕೇಳು.

**ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಂ ।**
**ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ॥ ೪೬ ॥**

ಪ್ರಾಣಿಗಳಿಗೆ ಯಾವನಿಂದ ಉತ್ಪತ್ತ್ಯಾದಿ ವ್ಯಾಪಾರವು (ಉಂಟಾಗುವುದೋ) ಯಾವನಿಂದ ಇದೆಲ್ಲವೂ ವ್ಯಾಪ್ತನಾಗಿರುವುದೋ ಅವನನ್ನು (ಇಂದ್ರಾದಿಗಳಿಗೆಲ್ಲ ಅಂತರಾತ್ಮನಾಗಿರುವ ನನ್ನನ್ನು) ಸ್ವಕರ್ಮದಿಂದ ಅರ್ಚಿಸಿ, ಮನುಷ್ಯನು ಸಿದ್ಧಿಯನ್ನು ಪಡೆಯುವನು.

(ಸಂಗತಿ: ಹೀಗೆ, ವರ್ಣಾಶ್ರಮಧರ್ಮಗಳು ಸ್ವರೂಪತಃ ಬಿಡತಕ್ಕುವಲ್ಲವೆಂದೂ, ಅವುಗಳಿಂದ ಪರಮಾತ್ಮನನ್ನು ಹೊಂದುವ ಬಗೆಯೂ ತೋರಿಸಲ್ಪಟ್ಟವು. ತರುವಾಯ, "ದೈವಮೇವಾಪರೇ ಯಜ್ಞಂ"—ಇತ್ಯಾದಿ ಸ್ಥಳಗಳಲ್ಲಿ ಹೇಳಿದ ಪ್ರಧಾನ ಧರ್ಮದೊಡನೆ ಸೇರಿರುವುದರಿಂದಲೂ, ಕೆಲವು ನಿಯಮವಿಶೇಷಗಳೊಡನೆ ಸೇರಿರುರುವುದರಿಂದಲೂ, ಕರ್ಮ ಯೋಗಾಂತರ್ಗತವಾದ ಆ ವರ್ಣಾಶ್ರಮಧರ್ಮಗಳು ಜ್ಞಾನಯೋಗಾಧಿಕಾರಿಗೂ ಬಿಡತಕ್ಕವಲ್ಲವೆಂದು ಹಿಂದೆ ಹೇಳಿದುದನ್ನೇ ಮುಂದೆಯೂ ಜ್ಞಾಪಕಕ್ಕೆ ತರುತ್ತಾನೆ.)

**ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ಸ್ವನುಷ್ಠಿತಾತ್ ।**
**ಸ್ವಭಾವನಿಯತಂ ಕರ್ಮ ಕುರ್ವನ್ನಾಪ್ನೋತಿ ಕಿಲ್ಬಿಷಂ ॥ ೪೭ ॥**

(ಹೀಗೆ ಕರ್ತೃತ್ವಾದಿ ತ್ಯಾಗಪೂರ್ವಕವೂ ಭಗವಂತನಾದ ನನ್ನ ಆರಾಧನರೂಪವೂ ಆದ) ಕರ್ಮಯೋಗವು ಅಂಗಪೂರ್ತಿಯಿಲ್ಲದ್ದಾದರೂ (ಎಂದಾದರೂ ಒಂದುಸಲ) ಸಾಂಗವಾಗಿ ಆಚರಿಸಿದ ಜ್ಞಾನಯೋಗಕ್ಕಿಂತ ಶ್ರೇಯಸ್ಕರವಾದುದು. ಸ್ವಭಾವದಿಂದ ಏರ್ಪಟ್ಟಿರುವ ಕರ್ಮವನ್ನು ಮಾಡುವವನು ಸಂಸಾರವನ್ನು ಹೊಂದುವುದಿಲ್ಲ.

(ಟಿಪ್ಪಣಿ: ಇಲ್ಲಿ ಸ್ವಧರ್ಮವೆಂದರೆ ಕರ್ಮಯೋಗ; ಪರಧರ್ಮವೆಂದರೆ ಜ್ಞಾನಯೋಗ. ಏಕೆಂದರೆ ಪ್ರಕೃತಿಸಜಾತೀಯ ವ್ಯಾಪಾರವು ಕರ್ಮಯೋಗ. ಇದು ಸಕಲೇಂದ್ರಿಯ ವ್ಯಾಪಾರ ರೂಪ. ಜ್ಞಾನಯೋಗವಾದರೋ—ಪ್ರಕೃತಿ ವಿಸಜಾತೀಯ ವ್ಯಾಪಾರ—ಇದು ಸಕಲೇಂದ್ರಿಯ ವ್ಯಾಪಾರ ನಿವೃತ್ತಿ ರೂಪ. ಆದುದರಿಂದ ಪ್ರಕೃತಿ ಸಂಸೃಷ್ಟ

ಪುರುಷನಿಗೆ ಕರ್ಮಯೋಗದಲ್ಲಿ ಪ್ರಮಾದ ಸಂಭವವಿಲ್ಲ. ಜ್ಞಾನಯೋಗದಲ್ಲಿಯಾದರೋ—ಪ್ರಮಾದ ಸಂಭವವುಂಟು.)

(ಸಂಗತಿ: ಆದುದರಿಂದ, ಕರ್ಮನಿಷ್ಠೆಯೇ ಮೇಲೆಂದು ಮೂರನೆಯ ಅಧ್ಯಾಯದಲ್ಲಿ ಹೇಳಿದುದನ್ನೇ ಇಲ್ಲಿ ಜ್ಞಾಪಕಪಡಿಸುತ್ತಾನೆ.)

**ಸಹಜಂ ಕರ್ಮ ಕೌಂತೇಯ ಸದೋಷಮಪಿ ನ ತ್ಯಜೇತ್ ।**
**ಸರ್ವಾರಂಭಾ ಹಿ ದೋಷೇಣ ಧೂಮೇನಾಗ್ನಿರಿವಾವೃತಾಃ ॥೪೮॥**

ಸ್ವಭಾವದಿಂದ ಏರ್ಪಟ್ಟಿರುವ ಕರ್ಮವನ್ನು ದುಃಖವುಳ್ಳದ್ದಾದರೂ (ಕಾಯಕ್ಲೇಶಾದಿ ಗರ್ಭವಾದರೂ) ಬಿಡಕೂಡದು. ಸರ್ವಾರಂಭಗಳೂ (ಕರ್ಮಾರಂಭ ಜ್ಞಾನಾರಂಭಗಳೆಲ್ಲವು) ಅಗ್ನಿಯು ಧೂಮದಿಂದ ವ್ಯಾಪ್ತವಾಗಿರುವಂತೆ, ದುಃಖದಿಂದ ವ್ಯಾಪ್ತವಾಗಿವೆ. (ಆದರೆ, ಇವೆರಡಕ್ಕೂ ಇಷ್ಟು ವ್ಯತ್ಯಾಸವುಂಟು—ಕರ್ಮಯೋಗವು ಸುಕರ, ಅಪ್ರಮಾದ, ಜ್ಞಾನಯೋಗವು ದುಷ್ಕರ, ಸಪ್ರಮಾದ. ಆದುದರಿಂದ ಜ್ಞಾನಯೋಗ ಯೋಗ್ಯನೂ ಕರ್ಮಯೋಗವನ್ನೇ ಮಾಡಬೇಕೆಂದು ಭಾವ.)

**ಅಸಕ್ತಬುದ್ಧಿಸ್ಸರ್ವತ್ರ ಜಿತಾತ್ಮಾ ವಿಗತಸ್ಪೃಹಃ ।**
**ನೈಷ್ಕರ್ಮ್ಯಸಿದ್ಧಿಂ ಪರಮಾಂ ಸಂನ್ಯಾಸೇನಾಧಿಗಚ್ಛತಿ ॥ ೪೯ ॥**

ಎಲ್ಲದರಲ್ಲಿಯೂ (ಫಲಾದಿಗಳಲ್ಲಿ) ಅನಾಸಕ್ತ ಬುದ್ಧಿಯುಳ್ಳವನೂ, ಜಿತಮನಸ್ಕನೂ, (ಪರಮ ಪುರುಷನಲ್ಲಿಯೇ ಕರ್ತೃತ್ವವನ್ನು ಅನುಸಂಧಾನ ಮಾಡುವುದರಿಂದ) ಆಸೆಯಿಲ್ಲದವನೂ ಆದವನು (ತ್ಯಾಗ ಶಬ್ದಾರ್ಥವಾದ) ಸಂನ್ಯಾಸದಿಂದ (ಕರ್ಮಮಾಡುವವನಾಗಿ) ಶ್ರೇಷ್ಠವಾದ, (ಜ್ಞಾನಯೋಗಕ್ಕೂ ಫಲಭೂತವಾದ) ಧ್ಯಾನನಿಷ್ಠೆಯನ್ನು ಪಡೆಯುವನು.

**ಸಿದ್ಧಿಂ ಪ್ರಾಪ್ತೋ ಯಥಾ ಬ್ರಹ್ಮ ತಥಾಽಽಪ್ನೋತಿ ನಿಬೋಧ ಮೇ ।**
**ಸಮಾಸೇನೈವ ಕೌಂತೇಯ ನಿಷ್ಠಾ ಜ್ಞಾನಸ್ಯ ಯಾ ಪರಾ ॥೫೦॥**

ಧ್ಯಾನ ಸಿದ್ಧಿಯನ್ನು ಪಡೆದವನು ಯಾವ ಪ್ರಕಾರದಿಂದ ಇದ್ದುಕೊಂಡು ಬ್ರಹ್ಮವನ್ನು ಪಡೆಯುವನೋ ಆ ಪ್ರಕಾರವನ್ನು ನನ್ನಿಂದ ಸಂಗ್ರಹವಾಗಿ ಕೇಳು. ಆ ಬ್ರಹ್ಮವೇ ಧ್ಯಾನದ ಪರಮ ಸಿದ್ಧಿ (ಪರಮ ಪ್ರಾಪ್ಯವು.)

**ಬುದ್ಧ್ಯಾ ವಿಶುದ್ಧಯಾ ಯುಕ್ತೋ ಧೃತ್ಯಾತ್ಮಾನಂ ನಿಯಮ್ಯ ಚ ।**
**ಶಬ್ದಾದೀನ್ವಿಷಯಾಂಸ್ತ್ಯಕ್ತ್ವಾ ರಾಗದ್ವೇಷೌ ವ್ಯುದಸ್ಯ ಚ ॥ ೫೧ ॥**
**ವಿವಿಕ್ತಸೇವೀ ಲಘ್ವಾಶೀ ಯತವಾಕ್ಕಾಯಮಾನಸಃ ।**
**ಧ್ಯಾನಯೋಗಪರೋ ನಿತ್ಯಂ ವೈರಾಗ್ಯಂ ಸಮುಪಾಶ್ರಿತಃ ॥ ೫೨ ॥**
**ಅಹಂಕಾರಂ ಬಲಂ ದರ್ಪಂ ಕಾಮಂ ಕ್ರೋಧಂ ಪರಿಗ್ರಹಂ ।**
**ವಿಮುಚ್ಯ ನಿರ್ಮಮಶ್ಶಾಂತೋ ಬ್ರಹ್ಮಭೂಯಾಯ ಕಲ್ಪತೇ ॥**

ವಿಶುದ್ಧವಾದ (ಯಥಾವಸ್ಥಿತವಾದ ಆತ್ಮತತ್ತ್ವ ವಿಷಯದ) ಬುದ್ಧಿಯಿಂದ ಕೂಡಿ, ಧೈರ್ಯದಿಂದ ಮನಸ್ಸನ್ನು ನಿಯಮಿಸಿ (ವಿಷಯವಿಮುಖೀಕರಣದಿಂದ ಮನಸ್ಸನ್ನು ಯೋಗಯೋಗ್ಯವನ್ನಾಗಿ ಮಾಡಿಕೊಂಡು) ಶಬ್ದಾದಿ ವಿಷಯಗಳನ್ನು ತೊರೆದು (ದೂರಮಾಡಿ) ರಾಗದ್ವೇಷಗಳನ್ನು ನೀಗಿ, ನಿರ್ಜನಸ್ಥಳವನ್ನು ಸೇವಿಸುತ್ತ ಮಿತಾಹಾರಿಯಾಗಿ ವಾಕ್ಕು, ದೇಹ, ಮನಸ್ಸುಗಳನ್ನು ವಶದಲ್ಲಿಟ್ಟು, ಯಾವಾಗಲೂ ಧ್ಯಾನಯೋಗಪರನಾಗಿ, ವೈರಾಗ್ಯವನ್ನು ಆಶ್ರಯಿಸಿ, ಅಹಂಕಾರ (ಆತ್ಮವಲ್ಲದುದರಲ್ಲಿ ಆತ್ಮವೆಂಬ ಬುದ್ಧಿ) ಬಲ (ಅಂತಹ ಬುದ್ಧಿಯನ್ನು ವೃದ್ಧಿಗೊಳಿಸುವ ವಾಸನಾಬಲ (ತನ್ನಿಮಿತ್ತವಾದ) ದರ್ಪ, ಕಾಮ, ಕ್ರೋಧ ಮತ್ತು ಪರಿಗ್ರಹಗಳನ್ನು ಬಿಟ್ಟು, ಮಮಕಾರವಿಲ್ಲದವನೂ (ಆತ್ಮೀಯವಲ್ಲದುದರಲ್ಲಿ ಆತ್ಮೀಯಬುದ್ಧಿರಹಿತನು) ಶಾಂತನೂ (ಆತ್ಮಾನುಭವೈಕಸುಖಿನು) ಆಗಿರುವ (ಧ್ಯಾನಯೋಗನಿಷ್ಠನು) ಪರಿಶುದ್ಧವಾದ ಆತ್ಮನನ್ನು ಪಡೆಯಲು ಅರ್ಹನಾಗುತ್ತಾನೆ.

(ಸಂಗತಿ: ಹೀಗೆ ಕರ್ಮಯೋಗಾದಿಗಳಿಂದ ಸಾಧ್ಯವಾದ ಜೀವಾತ್ಮಾನುಭವವು ಪರಭಕ್ತಿಯಲ್ಲಿ ಅಧಿಕಾರವನ್ನು ಉಂಟುಮಾಡುವುದೆಂದು ಮುಂದಿನ ಶ್ಲೋಕದಲ್ಲಿ ಹೇಳುತ್ತಾನೆ.)

**ಬ್ರಹ್ಮಭೂತಃ ಪ್ರಸನ್ನಾತ್ಮಾ ನ ಶೋಚತಿ ನ ಕಾಂಕ್ಷತಿ ।**
**ಸಮಸ್ಸರ್ವೇಷು ಭೂತೇಷು ಮದ್ಭಕ್ತಿಂ ಲಭತೇ ಪರಾಂ ॥ ೫೪ ॥**

ಪರಿಶುದ್ಧವಾದ ಆತ್ಮನನ್ನು ಅನುಭವಿಸುತ್ತ ಶಾಂತಚಿತ್ತನಾಗಿರುವವನು (ಬೇರೆ ಯಾವುದಕ್ಕಾಗಿಯೂ) ದುಃಖಿಸನು ಮತ್ತು ಆಸೆಪಡನು.

ಎಲ್ಲ ಪ್ರಾಣಿಗಳಲ್ಲಿಯೂ ಸಮಬುದ್ಧಿಯುಳ್ಳವನಾಗಿ ನನ್ನಲ್ಲಿ ಪರಭಕ್ತಿಯನ್ನು ಪಡೆಯುವನು.

(ಸಂಗತಿ : ಮುಂದೆ ಅದಕ್ಕೆ ಫಲವನ್ನು ಹೇಳುತ್ತಾನೆ.)

**ಭಕ್ತ್ಯಾ ಮಾಮಭಿಜಾನಾತಿ ಯಾವಾನ್ಯಶ್ಚಾಸ್ಮಿ ತತ್ತ್ವತಃ ।**
**ತತೋ ಮಾಂ ತತ್ತ್ವತೋ ಜ್ಞಾತ್ವಾ ವಿಶತೇ ತದನಂತರಂ ॥ ೫೫ ॥**

ನಾನು ತತ್ತ್ವತಃ ಎಂತಹ ಸ್ವರೂಪ ಮತ್ತು ಸ್ವಭಾವದವನೂ ಎಷ್ಟು ಮಟ್ಟಿನ ಗುಣ ಮತ್ತು ವಿಭೂತಿಗಳುಳ್ಳವನೂ ಆಗಿದ್ದೇನೆಯೆಂಬುದನ್ನು (ಇಂತಹ) ಭಕ್ತಿಯಿಂದ ಸರಿಯಾಗಿ ತಿಳಿದು ಅನಂತರ ಆ ಭಕ್ತಿಯಿಂದಲೇ ನನ್ನನ್ನು ಪ್ರವೇಶಿಸುವನು.

(ಸಂಗತಿ : ಹೀಗೆ, ಫಲಾದಿಗಳನ್ನು ಬಿಟ್ಟು ಬಿಟ್ಟು ಭಗವಂತನ ಆರಾಧನಕ್ಕಾಗಿ ಮಾಡುವ, ವರ್ಣಾಶ್ರಮೋಚಿತ ನಿತ್ಯನೈಮಿತ್ತಿಕ ಕರ್ಮಗಳ ವಿಪಾಕವನ್ನು ಹೇಳಿಯಾಯಿತು. ಪ್ರಕಾರದಿಂದ ಅನುಷ್ಠಿಸಿದ ಕಾಮ್ಯ ಕರ್ಮಗಳಿಗೂ ಅದೇ ವಿಪಾಕವೆಂಬುದನ್ನು ಮುಂದಿನ ಶ್ಲೋಕದಲ್ಲಿ ಹೇಳುತ್ತಾನೆ ;)

**ಸರ್ವಕರ್ಮಾಣ್ಯಪಿ ಸದಾ ಕುರ್ವಾಣೋ ಮದ್ವ್ಯಪಾಶ್ರಯಃ ।**
**ಮತ್ಪ್ರಸಾದಾದವಾಪ್ನೋತಿ ಶಾಶ್ವತಂ ಪದಮವ್ಯಯಂ ॥ ೫೬ ॥**

ನನ್ನನ್ನು ಆಶ್ರಯಿಸಿದವನಾಗಿ (ಕರ್ತೃತ್ವಾದಿಗಳನ್ನು ನನ್ನಲ್ಲಿ ಸಮರ್ಪಿಸುವವನಾಗಿ) ಕೇವಲ ನಿತ್ಯ ನೈಮಿತ್ತಿಕ ಕರ್ಮಗಳೇ ಅಲ್ಲ, ಎಲ್ಲ ಕರ್ಮಗಳನ್ನೂ (ಕಾಮ್ಯ ಕರ್ಮಗಳನ್ನೂ ಕೂಡ) ಯಾವಾಗಲೂ ಮಾಡುವವನು ನನ್ನ ಅನುಗ್ರಹದಿಂದ ಶಾಶ್ವತನಾದ ನನ್ನನ್ನು ಪೂರ್ಣವಾಗಿ ಪಡೆಯುವನು.

(ಟಿಪ್ಪಣಿ: "ಇಲ್ಲಿ ಪದ್ಯತೇ ಇತಿ ಪದಂ"—ಎಂಬ ವ್ಯುತ್ಪತ್ತಿಯಿಂದ "ಪದಂ" ಎಂದರೆ ಹೊಂದಲ್ಪಡತಕ್ಕದ್ದು ಎಂದರ್ಥ. ಅದು ನಾನೇ ಎಂದು ಭಗವಂತನ ಭಾವ.)

(ಸಂಗತಿ : ಹೀಗಿರುವುದರಿಂದಲೇ)

**ಚೇತಸಾ ಸರ್ವಕರ್ಮಾಣಿ ಮಯಿ ಸಂನ್ಯಸ್ಯ ಮತ್ಪರಃ ।**
**ಬುದ್ಧಿಯೋಗಮುಪಾಶ್ರಿತ್ಯ ಮಚ್ಚಿತ್ತಸ್ಸತತಂ ಭವ ॥ ೫೭ ॥**

ಬುದ್ಧಿಯೋಗವನ್ನು (ಆತ್ಮಸ್ವರೂಪವಿಷಯವಾದ ಬುದ್ಧಿಯನ್ನು) ಆಶ್ರಯಿಸಿ, (ಎಲ್ಲವೂ ನನ್ನದು ಮತ್ತು ನನಗೆ ನಿಯಾಮ್ಯವೆಂಬ) ಮನಸ್ಸಿನಿಂದ ಎಲ್ಲ ಕರ್ಮಗಳನ್ನೂ ನನ್ನಲ್ಲಿ ಸಮರ್ಪಿಸಿ, ನಾನೇ ಪ್ರಾಪ್ಯ ಫಲವೆಂದು ನೆನೆಸುತ್ತ, ಯಾವಾಗಲೂ ನನ್ನಲ್ಲಿಯೇ ಮನಸ್ಸಿಟ್ಟವನಾಗಿರು.

**ಮಚ್ಚಿತ್ತಸ್ಸರ್ವದುರ್ಗಾಣಿ ಮತ್ಪ್ರಸಾದಾತ್ತರಿಷ್ಯಸಿ ।**
**ಅಥ ಚೇತ್ತ್ವಮಹಂಕಾರಾನ್ನ ಶ್ರೋಷ್ಯಸಿ ವಿನಂಕ್ಷ್ಯಸಿ ॥ ೫೮ ॥**

(ಹೀಗೆ) ನನ್ನಲ್ಲಿ ಚಿತ್ತವುಳ್ಳವನಾಗಿ ಎಲ್ಲ ಕಷ್ಟಗಳನ್ನೂ ನನ್ನ ಅನುಗ್ರಹದಿಂದ ದಾಟುವಿ. ಹಾಗಲ್ಲದೆ ಅಹಂಕಾರದಿಂದ (ನಾನೇ ಕೃತ್ಯಾಕೃತ್ಯಗಳೆಲ್ಲವನ್ನೂ ತಿಳಿಯುತ್ತೇನೆ ಎಂಬ ಭಾವದಿಂದ) (ನಾನು ಹೇಳಿದುದನ್ನು) ನೀನು ಕೇಳದಿದ್ದರೆ ನಾಶಹೊಂದುವಿ. (ನನ್ನನ್ನು ಬಿಟ್ಟು ಬೇರೆ ಯಾವನೂ ಎಲ್ಲ ಪ್ರಾಣಿಗಳ ಕೃತ್ಯಾಕೃತ್ಯಗಳನ್ನು ತಿಳಿದವನೂ ನಿಯಮಿಸುವವನೂ ಇಲ್ಲವೆಂದು ಭಾವ.)

(ಸಂಗತಿ : ಹೀಗೆ ಭಗವಂತನ ಮಾತನ್ನು ಕೇಳದೆ ಯುದ್ಧಮಾಡುವುದನ್ನು ಬಿಡುವುದು ಆತ್ಮ ವಿನಾಶಕ್ಕೆ ಕಾರಣವೆನ್ನಲಾಯಿತು. ಬಳಿಕ ಯುದ್ಧ ಮಾಡದಿರುವುದೇ ಅಸಾಧ್ಯವೆನ್ನುತ್ತಾನೆ.)

**ಯದ್ಯಹಂಕಾರಮಾಶ್ರಿತ್ಯ ನ ಯೋತ್ಸ್ಯ ಇತಿ ಮನ್ಯಸೇ ।**
**ಮಿಥ್ಯೈಷ ವ್ಯವಸಾಯಸ್ತೇ ಪ್ರಕೃತಿಸ್ತ್ವಾಂ ನಿಯೋಕ್ಷ್ಯತಿ ॥ ೫೯ ॥**

ಅಹಂಕಾರ (ಹಿತಾಹಿತ ಜ್ಞಾನದಲ್ಲಿ ಸ್ವಾತಂತ್ರ್ಯಾಭಿಮಾನ) ವಶನಾಗಿ "ನಾನು ಯುದ್ಧಮಾಡುವುದಿಲ್ಲ" ಎಂದು ನಿಶ್ಚಯಿಸಿದರೆ, ಈ ನಿನ್ನ ನಿಶ್ಚಯವು ಸುಳ್ಳಾದುದು. (ಏಕೆಂದರೆ) ಪ್ರಕೃತಿಯು ನಿನ್ನನ್ನು (ಯುದ್ಧಕ್ಕೆ) ಎಳೆದೊಯ್ಯುವುದು.

(ಸಂಗತಿ : ಅದನ್ನು ನಿರೂಪಿಸುತ್ತಾನೆ.)

**ಸ್ವಭಾವಜೇನ ಕೌಂತೇಯ ನಿಬದ್ಧಸ್ಸ್ವೇನ ಕರ್ಮಣಾ ।**
**ಕರ್ತುಂ ನೇಚ್ಛಸಿ ಯನ್ಮೋಹಾತ್ಕರಿಷ್ಯಸ್ಯವಶೋಽಪಿ ತತ್ ॥ ೬೦ ॥**

ಸ್ವಭಾವಜನ್ಯವಾದ ನಿನ್ನ ಸ್ವಂತ ಕರ್ಮದಿಂದ ಬದ್ಧನಾದ ನೀನು ಅಜ್ಞಾನದಿಂದ ಯಾವುದನ್ನು ಮಾಡಲು ಇಚ್ಛಿಸುವುದಿಲ್ಲವೋ, ಅದನ್ನು ಪರವಶನಾಗಿ ಮಾಡಿಯೇ ಮಾಡುವೆ.

(ಟಿಪ್ಪಣಿ: ಇಲ್ಲಿ ಸ್ವಭಾವಜನ್ಯವಾದ ಕರ್ಮವೆಂಬುದು-ಶೌರ್ಯ. ಕ್ಷತ್ರಿಯನಿಗೆ ಶೌರ್ಯವು ಸ್ವಭಾವಜನ್ಯನಾದುದಷ್ಟೆ! ಇದರಿಂದ ಬದ್ಧನಾದವನಿಗೆ ಯುದ್ಧದಿಂದ ಹಿಂತೆಗೆದಾಗ ಪರರು ಮಾಡುವ ಅವಮಾನವು ದುಸ್ಸಹವಾಗುವುದು. ಹಾಗೆಯೇ ಪ್ರಕೃತದಲ್ಲಿ ದುರ್ಯೋಧನಾದಿಗಳ ಅವಮಾನವನ್ನು ಸಹಿಸಲಾಗದೆ ನೀನೇ ಯುದ್ಧವನ್ನು ಮಾಡುವೆಯೆಂದು ಭಾವ.)

(ಸಂಗತಿ: ಎಲ್ಲ ಪ್ರಾಣಿಗಳನ್ನೂ ಅವುಗಳ ಪೂರ್ವಕರ್ಮಾನುಗುಣವಾಗಿ ಪ್ರಕೃತಿಯನ್ನೇ ಅನುಸರಿಸುವಂತೆ ಸರ್ವೇಶ್ವರನಾದ ನಾನು ನಿಯಮಿಸಿದ್ದೇನೆ. ಇದನ್ನು ಕೇಳು—ಎಂದು ಮುಂದಿನ ಶ್ಲೋಕದಿಂದ ಹೇಳುತ್ತಾನೆ.)

**ಈಶ್ವರಸ್ಸರ್ವಭೂತಾನಾಂ ಹೃದ್ದೇಶೇಽರ್ಜುನ ತಿಷ್ಠತಿ ।**
**ಭ್ರಾಮಯನ್ ಸರ್ವಭೂತಾನಿ ಯಂತ್ರಾರೂಢಾನಿ ಮಾಯಯಾ ॥**

ಸರ್ವನಿಯಮನಶೀಲನಾದ ವಾಸುದೇವನು ಎಲ್ಲ ಪ್ರಾಣಿಗಳ ಹೃದಯ ಸ್ಥಳದಲ್ಲಿ (ಸಕಲ ಪ್ರವೃತ್ತಿ, ನಿವೃತ್ತಿಗಳಿಗೂ ಮೂಲವಾದ ಜ್ಞಾನವು ಉದಯಿಸುವ ಸ್ಥಳದಲ್ಲಿ) (ಪ್ರಕೃತಿಯೆಂಬ) ಯಂತ್ರದಲ್ಲಿ ಆರೂಢವಾದ ಎಲ್ಲ ಪ್ರಾಣಿಗಳನ್ನೂ ತನ್ನ (ಸತ್ತ್ವಾದಿ ಗುಣಮಯವಾದ ಪ್ರಕೃತಿಯಿಂದ ಸತ್ತ್ವಾದಿ ಗುಣಗಳಿಗೆ ತಕ್ಕಂತೆ) ತಿರುಗಿಸುತ್ತಿದ್ದಾನೆ.

(ಸಂಗತಿ: ಈ ಮಾಯೆಯು ಬಿಡುವುದು ಹೇಗೆಂದರೆ, ಹೇಳುತ್ತಾನೆ.)

**ತಮೇವ ಶರಣಂ ಗಚ್ಛ ಸರ್ವಭಾವೇನ ಭಾರತ ।**
**ತತ್ಪ್ರಸಾದಾತ್ಪರಾಂ ಶಾನ್ತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ ॥೬೨॥**

(ಆದುದರಿಂದ) ಎಲೈ ಅರ್ಜುನನೆ! ಆ ಭಗವಂತನನ್ನೇ ಸರ್ವಪ್ರಕಾರದಿಂದಲೂ (ಅಥವಾ ಸರ್ವವಿಧ ಮನೋವೃತ್ತಿಯಿಂದಲೂ ಶರಣ ಹೊಂದು. ಅವನ ಅನುಗ್ರಹದಿಂದ ಪರಮಶಾಂತಿ (ಸಂಸಾರಬಂಧಗಳ ನಿವೃತ್ತಿ)ಯನ್ನೂ ಶಾಶ್ವತ ಸ್ಥಾನವನ್ನೂ ಪಡೆಯುವೆ.

**ಇತಿ ತೇ ಜ್ಞಾನಮಾಖ್ಯಾತಂ ಗುಹ್ಯಾದ್ಗುಹ್ಯತರಂ ಮಯಾ ।**
**ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರು ॥ ೬೩ ॥**

ಹೀಗೆ, ನಿನಗೆ ನನ್ನಿಂದ ಎಲ್ಲ ರಹಸ್ಯಕ್ಕಿಂತ ಹೆಚ್ಚು ರಹಸ್ಯವಾದ (ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗಗಳ ವಿಷಯವಾದ) ಜ್ಞಾನವು ಹೇಳಲ್ಪಟ್ಟಿತು. ಇದನ್ನು ಪೂರ್ಣವಾಗಿ ಪರಾಮರ್ಶಿಸಿ ನಿನ್ನ ಇಚ್ಛೆಗೆಬಂದಂತೆ ಮಾಡು. (ಕರ್ಮಯೋಗವನ್ನೋ ಜ್ಞಾನಯೋಗವನ್ನೋ ಭಕ್ತಿಯೋಗವನ್ನೋ ಆಚರಿಸು.)

(ಸಂಗತಿ : ಕರ್ಮ, ಜ್ಞಾನ, ಭಕ್ತಿಗಳೆಂಬ ಮೂರುಯೋಗಗಳನ್ನೂ ಸಾಮಾನ್ಯವಾಗಿ ನಿಗಮನಮಾಡುತ್ತ ಈ ಮೂರು ಯೋಗಗಳೂ ಬೇರೆ ಎಲ್ಲಕ್ಕಿಂತ ಬಹು ರಹಸ್ಯವಾದುವೆಂದು ಹೇಳಿ, ಮತ್ತೆ, ಈ ಮೂರರೊಳಗೆ ಪರಂಪರೆಯಾಗಿಯೂ ನೇರವಾಗಿಯೂ ಇರುವ ಉಪಾಯಗಳನ್ನು ವಿಭಾಗಿಸಿ ಅವುಗಳಲ್ಲಿ ಗುಹ್ಯತಮವಾದುದನ್ನು ನಿರ್ಣಯಮಾಡಿಕೊಡುವುದಕ್ಕಾಗಿಯೂ, ಅದೇ ಪ್ರಧಾನವಾದುದರಿಂದ ಅದರಲ್ಲಿಯೇ ಈ ಗೀತಾಶಾಸ್ತ್ರಕ್ಕೆ ಮುಖ್ಯ ತಾತ್ಪರ್ಯವೆಂದು ತೋರಿಸುವುದಕ್ಕಾಗಿಯೂ, ಮುಂದಿನ ಎರಡು ಶ್ಲೋಕಗಳಿಂದ ಭಕ್ತಿಯೋಗವೆಂಬ ಶಾಸ್ತ್ರಸಾರಾರ್ಥವು ಜ್ಞಾಪಕಕ್ಕೆ ತರಲ್ಪಟ್ಟಿದೆ.)

**ಸರ್ವಗುಹ್ಯತಮಂ ಭೂಯಶ್ಶೃಣು ಮೇ ಪರಮಂ ವಚಃ ।**
**ಇಷ್ಟೋಽಸಿ ಮೇ ದೃಢಮಿತಿ ತತೋ ವಕ್ಷ್ಯಾಮಿ ತೇ ಹಿತಂ ॥೬೪॥**

ಎಲ್ಲಕ್ಕಿಂತ ಹೆಚ್ಚು ಗುಹ್ಯವಾದ ನನ್ನ ಪರಮವಚನವನ್ನು ಕೇಳು. ನನಗೆ ಅತ್ಯಂತ ಪ್ರಿಯನಾಗಿದ್ದೀಯೆ. ಆದರಿಂದ ನಿನಗೆ ಹಿತವನ್ನು ಹೇಳುವೆನು.

**ಮನ್ಮನಾ ಭವ ಮದ್ಭಕ್ತೋ ಮದ್ಯಾಜೀ ಮಾಂ ನಮಸ್ಕುರು ।**
**ಮಾಮೇವೈಷ್ಯಸಿ ಸತ್ಯಂ ತೇ ಪ್ರತಿಜಾನೇ ಪ್ರಿಯೋಽಸಿ ಮೇ ॥**

ಅತ್ಯರ್ಥ ಪ್ರೀತಿಯುಳ್ಳವನಾಗಿ ನನ್ನನ್ನು ಧ್ಯಾನಿಸು. ಅತ್ಯರ್ಥ ಪ್ರೀತಿಯುಳ್ಳವನಾಗಿ ನನ್ನನ್ನು ಆರಾಧಿಸು. (ಆರಾಧನವೆಂದರೆ ಪರಿಪೂರ್ಣ ಕೈಂಕರ್ಯಮಾಡುವುದು.) (ಹೀಗೆ ಮಾಡುತ್ತಿರುವಿಯಾದರೆ) ನೀನು

ಃ ಪಡೆಯುವೆ. ಇದು ಸತ್ಯ. ನಿನಗೆ ಪ್ರತಿಜ್ಞೆ ಮಾಡುತ್ತೇನೆ. ನನಗೆ ಪ್ರಿಯನು.

**ರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ ।**
**ಂ ತ್ವಾ ಸರ್ವಪಾಪೇಭ್ಯೋ ಮೋಕ್ಷಯಿಷ್ಯಾಮಿ ಮಾ ಶುಚಃ ॥**

**ಥಮಯೋಜನೆ—**

**ಸರ್ವಧರ್ಮಾನ್** = (ಕರ್ಮಯೋಗ, ಜ್ಞಾನಯೋಗ, ಭಕ್ತಿಯೋಗಗಳೆಂಬ ಪರಮ ನಿಶ್ಶ್ರೇಯಸಕರವಾದ) ಎಲ್ಲ ಧರ್ಮಗಳನ್ನೂ, **ಪರಿತ್ಯಜ್ಯ** = ಹಿಂದೆ ಹೇಳಿದಂತೆ ಸಾತ್ತ್ವಿಕತ್ಯಾಗದೊಡನೆ ಮಾಡಿ, **ಏಕಂ** = ಒಬ್ಬನೇ ಆದ, **ಮಾಂ** = ನನ್ನನ್ನು, **ಶರಣಂ** = ರಕ್ಷಕನನ್ನಾಗಿ (ಆ ಕರ್ಮಗಳಿಗೆ ಆರಾಧ್ಯ ಮತ್ತು ಫಲಪ್ರದನನ್ನಾಗಿ), **ವ್ರಜ** = ಅನುಸಂಧಾನ ಮಾಡು, **ಅಹಂ** = ನಾನು, **ತ್ವಾ** = (ಹೀಗೆ ಮಾಡುತ್ತಿರುವ) ನಿನ್ನನ್ನು, **ಸರ್ವಪಾಪೇಭ್ಯಃ** = ನನ್ನನ್ನು ಹೊಂದಲು ತಡೆಯಾಗಿರುವ ಎಲ್ಲ ಪಾಪಗಳಿಂದಲೂ, **ಮೋಕ್ಷಯಿಷ್ಯಾಮಿ** = ಬಿಡಿಸುವೆನು, **ಮಾ ಶುಚಃ** = ದುಃಖಿಸಬೇಡ.

**ದ್ವಿತೀಯ ಯೋಜನೆ—**

**ಸರ್ವಧರ್ಮಾನ್** = (ಭಕ್ತಿಯೋಗಾರಂಭ ವಿರೋಧಿಗಳಾದ ಪಾಪಗಳಿಗೆಲ್ಲ ಪ್ರಾಯಶ್ಚಿತ್ತರೂಪವಾದ ಕೃಚ್ಛ್ರ ಚಾಂದ್ರಾಯಣ ಕೂಶ್ಮಾಂಡ ವೈಶ್ವಾನರ ವ್ರಾತಪತಿ, ಪವಿತ್ರೇಷ್ಟಿ ತ್ರಿವೃದಗ್ನಿಷ್ಟೋಮಗಳೇ ಮುಂತಾದ) ಎಲ್ಲ ಧರ್ಮಗಳನ್ನೂ, **ಪರಿತ್ಯಜ್ಯ** = ಮಾಡಲಾಗದೆ ಬಿಟ್ಟಿರುವ, ಅಲ್ಲದೆ ಹಿಂದೆ ಹೇಳಿದ ಕರ್ಮಯೋಗಾದಿಗಳನ್ನೂ ಬಿಟ್ಟಿರುವ ನೀನು (ಭಕ್ತಿಯೋಗಾರಂಭದ ಸಿದ್ಧಿಗಾಗಿ), **ಮಾಂ** = ಪರಮಕಾರುಣಿಕನೂ, ಸರ್ವಜ್ಞನೂ, ಆಶ್ರಿತವತ್ಸಲನೂ ಆದ ನನ್ನನ್ನು, **ಏಕಂ** = ಒಬ್ಬನನ್ನೇ, **ಶರಣಂ** = ಉಪಾಯವನ್ನಾಗಿ, **ವ್ರಜ** = ಹೊಂದು, **ಅಹಂ** = ನಾನು (ಸರ್ವಜ್ಞನೂ, ಸರ್ವಶಕ್ತನೂ ಆದ ನಾನು), **ತ್ವಾ** = ನಿನ್ನನ್ನು (ಅಲ್ಪಜ್ಞನೂ, ಅಲ್ಪಶಕ್ತಿಯೂ ಆದ ನಿನ್ನನ್ನು), **ಸರ್ವಪಾಪೇಭ್ಯಃ** = ಭಕ್ತ್ಯಾರಂಭ ವಿರೋಧಿಗಳಾದ ಎಲ್ಲ ಪಾಪಗಳಿಂದ, **ಮೋಕ್ಷಯಿಷ್ಯಾಮಿ** = ಬಿಡಿಸುವೆನು, **ಮಾ ಶುಚಃ** = ದುಃಖಿಸಬೇಡ.

(ಟಿಪ್ಪಣಿ : ಹೀಗೆ ಸಕಲ ಇಷ್ಟಗಳಿಗೂ ಸಾಧನವೆಂದು ಭಗವಚ್ಛಾಸ್ತ್ರಾದಿಗಳಲ್ಲಿ ಪ್ರಸಿದ್ಧವಾದ ಭಗವತ್ಪ್ರಪದನವು ಪ್ರಕೃತ ಭಕ್ತಿಯೋಗಾರಂಭದ ವಿರೋಧಿಗಳಾದ ಸರ್ವಪಾಪಗಳನ್ನೂ ನಿವರ್ತಿಸುವುದೆಂದು ಉದಾಹೃತವಾಯಿತು.)

(ಸಂಗತಿ : ಹೀಗೆ ತನ್ನ ಉಪದೇಶದಿಂದ ತತ್ತ್ವ[illegible]ಗಳ ಜ್ಞಾನವು [illegible]ವಾದ ಅರ್ಜುನನಿಗೆ ಕರ್ತವ್ಯ ವಿಶೇಷವನ್ನು ಉಪದೇಶಿಸುವ ನೆಪದಿಂದ ಸಂಪ್ರದಾಯದ ವಿಧಿಯೇರ್ಪಡುವುದಕ್ಕಾಗಿ ಈ ಶಾಸ್ತ್ರದಲ್ಲಿ ಅಧಿಕಾರವಿಲ್ಲದವರನ್ನು ಮೊದಲು ಹೇಳುತ್ತಾನೆ.)

**ಇದಂ ತೇ ನಾತಪಸ್ಕಾಯ ನಾಭಕ್ತಾಯ ಕದಾಚನ ।**
**ನ ಚಾ ಶುಶ್ರೂಷವೇ ವಾಚ್ಯಂ ನ ಚ ಮಾಂ ಯೋಽಭ್ಯಸೂಯತಿ॥**

(ಪರಮರಹಸ್ಯವಾದ) ಈ ಶಾಸ್ತ್ರವನ್ನು ನೀನು ತಪಸ್ಸು ಮಾಡದವನಿಗೆ ಹೇಳಕೂಡದು. (ತಪಸ್ಸು ಮಾಡುವವನಾದರೂ) (ಸಕ್ತ್ಯವಾದ ನಿನ್ನಲ್ಲಿ ಮತ್ತು ನನ್ನಲ್ಲಿ) ಭಕ್ತಿಯಿಲ್ಲದವನಿಗೆ ಎಂದೂ ಹೇಳಕೂಡದು. (ಭಕ್ತಿಯಿದ್ದರೂ) ಕೇಳಲು ಇಚ್ಛೆಯಿಲ್ಲದವರಿಗೆ ಹೇಳಬಾರದು. ನನ್ನಲ್ಲಿ ಅಸೂಯೆಪಡುವವನಿಗಂತೂ ಹೇಳಲೇಕೂಡದು.

(ಟಿಪ್ಪಣಿ : ಅಸೂಯೆಯೆಂದರೆ ಗುಣಗಳಲ್ಲಿಯೂ ದೋಷಾರೋಪಣೆ ಮಾಡುವುದು. ಅಂತಹವನು ಅತ್ಯಂತ ಪರಿಹರಣೀಯನೆಂಬ ಭಾವದಿಂದ ಅವನನ್ನು "ನ ಚ ಮಾಂ ಯೋಽಭ್ಯಸೂಯತಿ"—ಎಂದು ಅಸಮಾನ ವಿಭಕ್ತಿಯಿಂದ ನಿರ್ದೇಶಿಸಿದೆ.)

(ಸಂಗತಿ : ಮುಂದೆ, ಯೋಗ್ಯರಾದವರಿಗೆ ಇದನ್ನು ಅವಶ್ಯ ಹೇಳಬೇಕೆಂದೂ ಹಾಗೆ ಹೇಳುವುದರಿಂದ ಮೋಕ್ಷಬರುವುದೆಂದೂ ಹೇಳುತ್ತಾನೆ)

**ಯ ಇದಂ ಪರಮಂ ಗುಹ್ಯಂ ಮದ್ಭಕ್ತೇಷ್ವಭಿಧಾಸ್ಯತಿ ।**
**ಭಕ್ತಿಂ ಮಯಿ ಪರಾಂ ಕೃತ್ವಾ ಮಾಮೇವೈಷ್ಯತ್ಯಸಂಶಯಃ ॥**

ಈ ಪರಮ ರಹಸ್ಯವಾದ ಶಾಸ್ತ್ರವನ್ನು ನನ್ನ ಭಕ್ತರಿಗೆ ಹೇಳುವವನು ನನ್ನಲ್ಲಿ ಪರಮ ಭಕ್ತಿಯನ್ನು ಮಾಡಿ ನನ್ನನ್ನೇ ಹೊಂದುವನು; ಸಂಶಯವಿಲ್ಲ.

**ನ ಚ ತಸ್ಮಾನ್ಮನುಷ್ಯೇಷು ಕಶ್ಚಿನ್ಮೇ ಪ್ರಿಯಕೃತ್ತಮಃ ।**
**ಭವಿತಾ ನ ಚ ಮೇ ತಸ್ಮಾದನ್ಯಃ ಪ್ರಿಯತರೋ ಭುವಿ ॥ ೬೯ ॥**

ಮನುಷ್ಯರಲ್ಲಿ ನನಗೆ ಅತ್ಯಂತ ಪ್ರಿಯವಾದುದನ್ನು ಮಾಡಿದವನು ನಿಗಿಂತ ಬೇರೆ ಯಾವನೂ ಇದುವರೆಗಿಲ್ಲ. ಮುಂದೆಯೂ ಭೂಮಿಯಲ್ಲಿ ನಿನಗಿಂತ ಬೇರೆ ಯಾವನೂ ನನಗೆ ಪ್ರಿಯನಾಗನು.

(ಟಿಪ್ಪಣಿ: ಈ ಶಾಸ್ತ್ರವನ್ನು ಯೋಗ್ಯರಿಗೆ ಉಪದೇಶಿಸದಿರುವುದಕ್ಕಿಂತ ಅಯೋಗ್ಯರಿಗೆ ಉಪದೇಶಿಸುವುದು ಬಹಳ ಹಾನಿಕರವೆಂದು ಸೂಚಿಸುವುದಕ್ಕಾಗಿ ಅಯೋಗ್ಯರನ್ನು ಮೊದಲು ಹೇಳಿದೆ.)

(ಸಂಗತಿ: ಹೀಗೆ ಈ ಶಾಸ್ತ್ರವನ್ನು ಉಪದೇಶಿಸುವವನಿಗೆ ಫಲವನ್ನು ಹೇಳಿ, ಮುಂದೆ ಇದನ್ನು ಶಬ್ದತಃ ಮತ್ತು ಅರ್ಥತಃ ಅಭ್ಯಾಸದಲ್ಲಿ ಅಧ್ಯಯನ ಮಾಡುವವನಿಗೆ ಫಲವನ್ನು ಹೇಳುತ್ತಾನೆ.)

**ಅಧ್ಯೇಷ್ಯತೇ ಚ ಯ ಇಮಂ ಧರ್ಮ್ಯಂ ಸಂವಾದಮಾವಯೋಃ ।**
**ಜ್ಞಾನಯಜ್ಞೇನ ತೇನಾಹಮಿಷ್ಟಃ ಸ್ಯಾಮಿತಿ ಮೇ ಮತಿಃ ॥ ೭೦ ॥**

ನಮ್ಮಿಬ್ಬರ ಈ ಧರ್ಮ ಸಂವಾದವನ್ನು ಅಧ್ಯಯನ ಮಾಡುವವನು ನನ್ನನ್ನು ಜ್ಞಾನಯಜ್ಞದಿಂದ ಪೂಜಿಸುವವನೆಂದು ನನ್ನ ಅಭಿಪ್ರಾಯ.
(ಟಿಪ್ಪಣಿ: ಈ ಶಾಸ್ತ್ರದಲ್ಲಿ ಜ್ಞಾನಯಜ್ಞವನ್ನು ಹೇಳಿರುವುದರಿಂದ, ಇದನ್ನು ಅಧ್ಯಯನ ಮಾಡುವ ಮಾತ್ರದಿಂದಲೇ ನಾನು ಸಂತೋಷಿಸುತ್ತೇನೆಂದು ಭಾವ.)

**ಶ್ರದ್ಧಾವಾನನಸೂಯಶ್ಚ ಶೃಣುಯಾದಪಿ ಯೋ ನರಃ ।**
**ಸೋಽಪಿ ಮುಕ್ತಶ್ಶುಭಾಁಲ್ಲೋಕಾನ್ಪ್ರಾಪ್ನುಯಾತ್ಪುಣ್ಯಕರ್ಮಣಾಂ ॥**

ಶ್ರದ್ಧೆಯಿಂದಲೂ ಅಸೂಯೆಯಿಲ್ಲದೆಯೂ (ಇದನ್ನು) ಕೇಳುವ ಮನುಷ್ಯನೂ ಕೂಡ (ಭಕ್ತಿಗೆ ವಿರೋಧಿಗಳಾದ ಪಾಪಗಳಿಂದ) ಬಿಡಲ್ಪಟ್ಟು ಪುಣ್ಯವಂತರ ಪರಿಶುದ್ಧವಾದ ಗುಂಪುಗಳನ್ನು ಸೇರುವನು.

(ಸಂಗತಿ: ಅನಂತರ, ಅರ್ಜುನನ ಅಭಿಪ್ರಾಯವನ್ನು ತಿಳಿದಿದ್ದರೂ ಕೂಡ, ಭಗವಂತನು ಅವನ ಮೇಲಿನ ಪ್ರೀತಿಯಿಂದ ಅವನ ಅಭಿಪ್ರಾಯ

ಮರೆಯದಿರುವುದಕ್ಕಾಗಿ, ತಾನುಮಾಡಿದ ಉಪದೇಶ ಸಫಲವಾಯಿತೆಂದು ತಿಳಿಯಲಿಚ್ಛಿಸುವವನಂತೆ ಪ್ರಶ್ನಿಸುತ್ತಾನೆ.)

**ಕಚ್ಚಿದೇತಚ್ಛ್ರುತಂ ಪಾರ್ಥ ತ್ವಯೈಕಾಗ್ರೇಣ ಚೇತಸಾ ।**
**ಕಚ್ಚಿದಜ್ಞಾನಸಮ್ಮೋಹಃ ಪ್ರಣಷ್ಟಸ್ತೇ ಧನಂಜಯ ॥ ೭೨ ॥**

ಪಾರ್ಥನೇ, ನೀನು ಏಕಾಗ್ರಚಿತ್ತದಿಂದ ಇದನ್ನು ಕೇಳಿದೆಯಾ? ನಿನಗೆ ಅಜ್ಞಾನದಿಂದುಂಟಾದ ಭ್ರಾಂತಿಜ್ಞಾನವು ನಾಶವಾಯಿತೆ?

(ಸಂಗತಿ: ಅನಂತರ ಅರ್ಜುನನು ತನ್ನ ಕೃತಜ್ಞತೆಯನ್ನು ಪ್ರಕಾಶಪಡಿಸುತ್ತ, ತಾನು ಕೇಳಿದುದರ ಫಲವು ಸಿದ್ಧಿಸಿತೆಂದು ಉತ್ತರ ಹೇಳುತ್ತಾನೆ.)

**ಅರ್ಜುನ ಉವಾಚ :—**

**ನಷ್ಟೋ ಮೋಹಃ ಸ್ಮೃತಿರ್ಲಬ್ಧಾ ತ್ವತ್ಪ್ರಸಾದಾನ್ಮಯಾಚ್ಯುತ ।**
**ಸ್ಥಿತೋಽಸ್ಮಿ ಗತಸಂದೇಹಃ ಕರಿಷ್ಯೇ ವಚನಂ ತವ ॥ ೭೩ ॥**

ಅರ್ಜುನನು ಹೇಳುತ್ತಾನೆ—

ಅಚ್ಯುತನೇ, ನಿನ್ನ ಕೃಪೆಯಿಂದ (ನನ್ನ) ವಿಪರೀತಜ್ಞಾನವು ಹೋಯಿತು. ನನಗೆ ಸರಿಯಾದ ತತ್ತ್ವಜ್ಞಾನವು ಬಂದಿತು. ಸಂದೇಹವು ಅಳಿಯಿತು. ನೀನು ಹೇಳಿದುದನ್ನು ಮಾಡುತೇನೆ.

(ಟಿಪ್ಪಣಿ: ಪ್ರಕೃತಿ(ದೇಹ)ಯನ್ನೇ ಆತ್ಮನೆಂಬ ಭ್ರಾಂತಿ, ಚೇತನಾಚೇತನಗಳೆಲ್ಲವೂ ಪರಮ ಪುರುಷನಿಗೆ ಶರೀರವಾಗಿರುವುದರಿಂದ ಅವಕ್ಕೆಲ್ಲ ಅವನೇ ಆತ್ಮನಾಗಿರುವಲ್ಲಿ, ಅವನು ಅವಕ್ಕೆ ಆತ್ಮನಲ್ಲ ಎಂಬ ಅಭಿಮಾನ, ಪರಮಾತ್ಮನಿಗೆ ಆರಾಧನಭೂತವೂ ಅವನನ್ನು ಪಡೆಯಲು ಉಪಾಯವೂ ಆದ ನಿತ್ಯನೈಮಿತ್ತಿಕ ಕರ್ಮಗಳು ಬಾಧಕಗಳೆಂಬ ಬುದ್ಧಿ—ಇವಿಷ್ಟೂ ಇಲ್ಲಿ ಮೋಹವೆನ್ನಲ್ಪಟ್ಟಿದೆ. ಈಗ ಈ ಮೋಹವೆಲ್ಲ ನಷ್ಟವಾಯಿತೆಂದು ಭಾವ.

ಇಲ್ಲಿ ಸ್ಮೃತಿ ಅಥವಾ ಜ್ಞಾನವೆಂದರೆ—ಜೀವಾತ್ಮನು ಪ್ರಕೃತಿಗಿಂತ ವಿಲಕ್ಷಣನು; ಜ್ಞಾತೃವಾಗಿರುವುದೇ ಅವನ ಸ್ವಭಾವ; ಅವನು ಪರಮ ಪುರುಷನಿಗೆ ಶೇಷಭೂತನು ಮತ್ತು ನಿಯಾಮ್ಯನು. ಪರಮ ಪುರುಷನಾದರೋ ಸಕಲ ಜಗತ್ತುಗಳಿಗೆ ಸರ್ವವಿಧ ಕಾರಣನೂ ಆದವನು;

ದೋಷಗಳ ಗಂಧವೇ ಇಲ್ಲದ ಸಕಲ ಕಲ್ಯಾಣಗುಣಗಳಿಗೂ ಆಶ್ರಯನು— ಇತ್ಯಾದಿ ಯಾಥಾತ್ಮ್ಯ ಜ್ಞಾನದೊಡನೆ ಅಭ್ಯಸಿಸಲ್ಪಟ್ಟು ದಿನದಿನಕ್ಕೂ ಅತಿಶಯ ವೃದ್ಧಿಹೊಂದುವ ಅವನ ಉಪಾಸನವೇ ಅವನನ್ನು ಹೊಂದಲು ಉಪಾಯ. ಫಲೇಚ್ಛೆಯಿಲ್ಲದೆ ಅವನ ಪ್ರೀತಿಗಾಗಿ ಮಾತ್ರವೇ ಮಾಡುವ ನಿತ್ಯ ನೈಮಿತ್ತಿಕ ಕರ್ಮಗಳು ನಿಷಿದ್ಧಪರಿಹಾರಗಳು ಶಮದಮಾದ್ಯಾತ್ಮಗುಣಗಳು —ಇವುಗಳಿಂದಲೇ ಆ ಉಪಾಸನವು ನೆರವೇರುವುದು. ಇಂತಹ ಉಪಾಸನ ಮಾತ್ರದಿಂದ ಹೊಂದಲ್ಪಡುವ ವೇದಾಂತವೇದ್ಯನಾದ ಆ ಪರಮಪುರುಷನು ನೀನೇ ಆಗಿದ್ದೀಯೆ–ಎಂಬುದು ಇಂತಹ ಜ್ಞಾನವೂ ಹಿಂದೆಹೇಳಿದ ಅಜ್ಞಾನ ನಿವೃತ್ತಿಯೂ ಭಗವದ್ವಾಸುದೇವನ ಕೃಪೆಯಿಂದ ಲಬ್ಧವಾದುವೆಂದೂ ಅದ ರಿಂದ ಸಂದೇಹ ತೊಲಗಿ ತಾನು ಸ್ವಸ್ಥನಾದುದಾಗಿಯೂ ಅವನ ಉಪದೇಶ ದಂತೆ ಯುದ್ಧಾದಿ ಕರ್ತವ್ಯಗಳನ್ನು ಮಾಡುವುದಾಗಿಯೂ ಅರ್ಜುನನು ಇದರಲ್ಲಿ ವಿಜ್ಞಾಪಿಸಿಕೊಳ್ಳುತ್ತಾನೆ.)

(ಸಂಗತಿ: ಗ್ರಂಥಾರಂಭದಲ್ಲಿ ತನ್ನವರೂ, ಪಾಂಡವರೂ ಯುದ್ಧ ದಲ್ಲಿ ಏನುಮಾಡುವವರಿದ್ದಾರೆ? ಎಂದು ಪ್ರಶ್ನಿಸಿದ ಧೃತರಾಷ್ಟ್ರನಿಗೆ ಈಗ ಸಂಜಯನು ನೇರವಾಗಿ ಉತ್ತರವನ್ನು ಹೇಳುತ್ತಾನೆ.)

**ಸಂಜಯ ಉವಾಚ :—**

**ಇತ್ಯಹಂ ವಾಸುದೇವಸ್ಯ ಪಾರ್ಥಸ್ಯ ಚ ಮಹಾತ್ಮನಃ ।**
**ಸಂವಾದಮಿಮಮಶ್ರೌಷಮದ್ಭುತಂ ರೋಮಹರ್ಷಣಂ ॥ ೭೪ ॥**

ಸಂಜಯ ಹೇಳಿದನು—

ಹೀಗೆ ಶ್ರೀಕೃಷ್ಣನ ಮತ್ತು ಮಹಾ ಬುದ್ಧಿವಂತನಾದ ಅರ್ಜುನನ ಅದ್ಭುತವೂ, ರೋಮಾಂಚಕಾರಕವೂ ಆದ ಮಾತನ್ನು ನಾನು. (ಯಥಾ ವತ್ತಾಗಿ) ಕೇಳಿದೆನು.

**ವ್ಯಾಸಪ್ರಸಾದಾತ್ ಶ್ರುತವಾನೇತದ್ಗುಹ್ಯಮಹಂ ಪರಂ ।**
**ಯೋಗಂ ಯೋಗೇಶ್ವರಾತ್ ಕೃಷ್ಣಾತ್ಸಾಕ್ಷಾತ್ಕಥಯತಸ್ಸ್ವಯಂ॥**

ವ್ಯಾಸರ ಅನುಗ್ರಹದಿಂದ ಈ ಯೋಗವೆಂಬ ಪರಮರಹಸ್ಯವನ್ನು

ಕಲ್ಯಾಣಗುಣನಿಧಿಯಾದ ಶ್ರೀಕೃಷ್ಣನೇ ಹೇಳುತ್ತಿರುವುದನ್ನು ನೇರವಾಗಿ ಕೇಳಿದೆನು.

(ಸಂಗತಿ: ಅತ್ಯಾಶ್ಚರ್ಯಕರವೆಂಬುದಾಗಿ ಹೇಳುತ್ತಾನೆ.)

**ರಾಜನ್ ಸಂಸ್ಮೃತ್ಯ ಸಂಸ್ಮೃತ್ಯ ಸಂವಾದಮಿಮಮದ್ಭುತಂ ।**
**ಕೇಶವಾರ್ಜುನಯೋಃ ಪುಣ್ಯಂ ಹೃಷ್ಯಾಮಿ ಚ ಮುಹುರ್ಮುಹುಃ ॥**

ರಾಜನೇ! ಶ್ರೀಕೃಷ್ಣಾರ್ಜುನರ ಪುಣ್ಯಕರವೂ, ಅದ್ಭುತವೂ ಆದ ಈ ಸಂವಾದವನ್ನು ನೆನೆದು ನೆನೆದು ನಾನು ತಿರುತಿರುಗಿ ಸಂತೋಷಪಡುತ್ತಿರುವೆನು.

**ತಚ್ಚ ಸಂಸ್ಮೃತ್ಯ ಸಂಸ್ಮೃತ್ಯ ರೂಪಮತ್ಯದ್ಭುತಂ ಹರೇಃ ।**
**ವಿಸ್ಮಯೋ ಮೇ ಮಹಾನ್ ರಾಜನ್ ಹೃಷ್ಯಾಮಿ ಚ ಪುನಃ ಪುನಃ ॥**

ಭಗವಂತನ ಆ ಅತ್ಯದ್ಭುತ ರೂಪವನ್ನು ನೆನೆನೆನೆದು ನನಗೆ ಬಹಳ ಆಶ್ಚರ್ಯವಾಗಿದೆ ಮತ್ತು ಪುನಃ ಪುನಃ ಹರ್ಷಪಡುತ್ತಿರುವೆನು.

(ಸಂಗತಿ: ಹೆಚ್ಚೇಕೆ?)

**ಯತ್ರ ಯೋಗೇಶ್ವರಃ ಕೃಷ್ಣೋ ಯತ್ರ ಪಾರ್ಥೋ ಧನುರ್ಧರಃ ।**
**ತತ್ರ ಶ್ರೀರ್ವಿಜಯೋ ಭೂತಿರ್ಧ್ರುವಾ ನೀತಿರ್ಮತಿರ್ಮಮ ॥೭೮॥**

ಯಾವ ಪಕ್ಷದಲ್ಲಿ ಚೇತನಾಚೇತನವಸ್ತುಗಳ ಸ್ವಭಾವಗಳಿಗೆ ಈಶ್ವರನಾದ ಶ್ರೀಕೃಷ್ಣನಿರುವನೋ, ಯಾವ ಪಕ್ಷದಲ್ಲಿ ಬಿಲ್ಲಾಳಾದ ಅರ್ಜುನನಿರುವನೋ ಆ ಪಕ್ಷದಲ್ಲಿ ರಾಜ್ಯಾದಿ ಭೋಗ್ಯ ಸಮೃದ್ಧಿಯೂ, ಶತ್ರುನಿರಾಸವೂ, ಐಶ್ವರ್ಯವೂ, ನ್ಯಾಯವೂ ಸ್ಥಿರವಾಗಿರುವುದೆಂದು ನನ್ನ ಅಭಿಪ್ರಾಯವು.

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು
ಮೋಕ್ಷಸಂನ್ಯಾಸಯೋಗೋನಾಮ ಅಷ್ಟಾದಶೋಽಧ್ಯಾಯಃ.
॥ ಶ್ರೀಕೃಷ್ಣಾರ್ಪಣಮಸ್ತು ॥

---

ಶ್ರೀಕಾಂತ ಪವರ್ ಪ್ರೆಸ್, ಮೈಸೂರು—500 ಪ್ರತಿಗಳು.